|| ಶ್ರೀ ||

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ
ಸಂಖ್ಯಾ ೩೩



ಶ್ರೀಮದ್ದ್ವೈಪಾಯನಮುನಿಪ್ರಣೀತಂ

# ಶ್ರೀಮತ್ಸ್ಯಮಹಾಪುರಾಣಂ

(ಕನ್ನಡ ಅನುವಾದಸಹಿತ)

ಸಂಪುಟ ೬

ಆಧ್ಯಾಯ ೨೧೫–೨೫೧

ಅನುವಾದಕ :
ವಾಜಪೇಯಂ ಶ್ರೀರಂಗಾಚಾರ್
ಸಾಹಿತ್ಯವಿದ್ವಾನ್, ಕನ್ನಡಪಂಡಿತ

ಮೈಸೂರು
ಶ್ರೀನಿವಾಸ್ ಎಲೆಕ್ಟ್ರಿಕ್ ಪ್ರೆಸ್
೧೯೪೮

॥ ಶ್ರೀ ॥

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯಾ ೩೩



ಶ್ರೀಮದ್ದ್ವೈಪಾಯನಮುನಿಪ್ರಣೀತಂ

# ಶ್ರೀಮತ್ಸ್ಯಮಹಾಪುರಾಣಂ

(ಕನ್ನಡ ಅನುವಾದಸಹಿತ)

ಸಂಪುಟ ೬

ಅಧ್ಯಾಯ ೨೧೫–೨೫೧

ಅನುವಾದಕ :
**ವಾಜಪೇಯಂ ಶ್ರೀರಂಗಾಚಾರ್**
ಸಾಹಿತ್ಯವಿದ್ವಾನ್, ಕನ್ನಡ ಪಂಡಿತ

ಮೈಸೂರು
ಶ್ರೀನಿವಾಸ್ ಎಲೆಕ್ಟ್ರಿಕ್ ಪ್ರೆಸ್
೧೯೫೮

# ಪೀಠಿಕೆ

ಮತ್ಸ್ಯಪುರಾಣದ ಗಣಿಯಿಂದ ಮತ್ತೊಂದು ರತ್ನವು ಹೊರಕ್ಕೆ ಬಂದಿತು. ಕನ್ನಡಮಾತೆಯ ಕಿರೀಟವನ್ನು ಬೆಳಗಿಸುವ ಭಾಗ್ಯವು ಅದಕ್ಕೆ ಲಭಿಸಿತು.

ಇದು ಆರನೆಯ ಸಂಪುಟ. ಇದರಲ್ಲಿ ರಾಜಧರ್ಮ, ವಾಮನವತಾರದ ಕಥೆ, ವರಾಹಾವತಾರವೃತ್ತಾಂತ, ಅಮೃತಮಂಥನ ಎಂಬ ನಾಲ್ಕು ಪ್ರಧಾನವಿಷಯಗಳು ವರ್ಣಿತವಾಗಿವೆ.

ರಾಜಧರ್ಮವು ಅತಿ ವಿಸ್ತಾರವಾಗಿದೆ. ಪ್ರಜೆಗಳ ಕರ್ತವ್ಯ, ಅಧಿಕಾರಿಗಳ ಲಕ್ಷಣ, ನಗರನಿರ್ಮಾಣ ಮುಂತಾದ ಹಲವು ವಿಷಯಗಳನ್ನು ಅದು ಒಳಗೊಂಡಿದೆ. ಪ್ರಾಚೀನಕಾಲದಿಂದ ಭಾರತೀಯರ ಸಾಮಾಜಿಕಜೀವನದಲ್ಲಿ ರಾಜನಿಗೆ ಅತಿ ಮುಖ್ಯವಾದ ಸ್ಥಾನವಿದೆ. ಅವರ ಜೀವನದ ಕೇಂದ್ರವೇ ಅವನು. ಅವರ ಧರ್ಮವನ್ನು ರಕ್ಷಿಸುವವನು ಅವನು. ಅವರ ವಿಪತ್ತನ್ನು ಪರಿಹರಿಸುವವನು ಅವನು. ಅವರ ಇಹಪರಸುಖಗಳಿಗೆ ಸಹಾಯಕನು ಅವನು. ಮನುಷ್ಯರೂಪದಿಂದ ಬಂದ ಧರ್ಮದೇವತೆಯೇ ಅವನೆಂಬುದು ಅವರ ನಂಬಿಕೆ.

ಮತ್ಸ್ಯಪುರಾಣವು ಈ ಅಭಿಪ್ರಾಯವನ್ನು ಬಹು ಮನೋಹರವಾಗಿ ಸಮರ್ಥಿಸುತ್ತದೆ. "ಸಕಲ ಜಂತುಗಳ ರಕ್ಷಣಾರ್ಥವಾಗಿ ದಂಡಪ್ರಯೋಗವನ್ನು ಉಚಿತ ರೀತಿಯಲ್ಲಿ ಮಾಡಲೆಂದು ಬ್ರಹ್ಮನು ದೇವತೆಗಳ ಅಂಶದಿಂದ ರಾಜನನ್ನು ಸೃಷ್ಟಿಸಿದನು." "ಇಂದ್ರ, ಸೂರ್ಯ, ವಾಯು, ಯಮ—ಇವರ ತೇಜಸ್ಸನ್ನು ಪಡೆಯುವ ಸಲುವಾಗಿ ರಾಜನು ವ್ರತಶೀಲನಾಗಬೇಕು." "ರಾಷ್ಟ್ರವೆಂಬ ಮರಕ್ಕೆ ರಾಜನೇ ಬೇರು. ಅವನು ಸುರಕ್ಷಿತವಾಗಿದ್ದರೆ ರಾಷ್ಟ್ರವು ಅಭಿವೃದ್ಧಿಗೆ ಬರುವುದು. ಪ್ರತಿಯೊಬ್ಬ ಪ್ರಜೆಯೂ ರಾಜನನ್ನು ರಕ್ಷಿಸಲು ಪ್ರಯತ್ನಿಸಬೇಕು."

ಹೀಗೆಂದ ಮಾತ್ರಕ್ಕೆ ರಾಜನಿಗೆ ಕಟ್ಟುನಿಟ್ಟುಗಳೇನೂ ಇಲ್ಲವೆಂದು ತಿಳಿಯಕೂಡದು. ಅವನ ಸರ್ವಸ್ವವೂ ಪ್ರಜೆಗಳಿಗಾಗಿ ಮೀಸಲು. ಅವರ ಕಷ್ಟಸುಖಗಳೇ ಅವನ ಕಷ್ಟಸುಖ. "ಯಾವ ಕೆಲಸವನ್ನು ನಾನು ಮಾಡಿದರೆ ಪ್ರಜೆಗಳು ಸಂತುಷ್ಟರಾದಾರು ? ಏತರಿಂದ ಅವರು ಬೇಸರಗೊಂಡಾರು ? ಎಂಬ ವಿಷಯವನ್ನು ರಾಜನು ಚೆನ್ನಾಗಿ ಆಲೋಚಿಸಬೇಕು. ಪ್ರಜೆಗಳಿಗೆ ಪ್ರಿಯಕರವಾದ ಕಾರ್ಯ

ಗಳನ್ನು ಕೈಗೊಳ್ಳಬೇಕು. ಅವರಿಗೆ ಅಪ್ರಿಯವಾದುವನ್ನು ಪ್ರಯತ್ನಪೂರ್ವಕವಾಗಿ ಬಿಡಬೇಕು.'' "ಲೋಕದಲ್ಲಿ ರಾಜನ ಸಂಪತ್ತೆಲ್ಲ ಜನರ ಅನುರಾಗದಿಂದ ಬರತಕ್ಕುದು ; ಆದುದರಿಂದ ಭೂಪತಿಗಳು ತಮ್ಮ ಪ್ರಜೆಗಳಲ್ಲಿ ಪ್ರೀತಿಸಂತೋಷ ಗಳು ಹುಟ್ಟುವಂತೆ ಪ್ರಯತ್ನಿಸಬೇಕು.''. ಈ ರೀತಿಯಲ್ಲಿ ರಾಜನಿಗೂ ಪ್ರಜೆಗಳಿಗೂ ಅಪರಿಹಾರ್ಯವಾದ ಸಂಬಂಧವು ಏರ್ಪಟ್ಟಿದೆ.

ರಾಷ್ಟ್ರದ ಹಿತದೃಷ್ಟಿಯಿಂದ ರಾಜನು ಕ್ಷೇಮವಾಗಿರಬೇಕಾದುದು ಅತ್ಯಗತ್ಯ. ಅವನ ರಕ್ಷಣೆಗಾಗಿ ಇಲ್ಲಿ ಎಷ್ಟೋ ಉಪಾಯಗಳನ್ನು ಹೇಳಿದೆ. ಈ ಸಂದರ್ಭದಲ್ಲಿ ವಿಷವನ್ನು ಪರೀಕ್ಷಿಸುವ ಮತ್ತು ಅದಕ್ಕೆ ಚಿಕಿತ್ಸೆಮಾಡುವ ಅನೇಕ ವಿಧಾನಗಳು ವಿವರಿಸಲ್ಪಟ್ಟಿವೆ. ಇಂದಿನ ನಮ್ಮ ವೈದ್ಯಶಾಸ್ತ್ರಜ್ಞರು ಇವುಗಳನ್ನು ಪರಿಶೋಧಿಸಿ ಜನತೆಗೆ ಉಪಯೋಗವಾಗುವಂತೆ ಇವುಗಳನ್ನು ಕಾರ್ಯರೂಪಕ್ಕೆ ತರುವುದು ಸಾಧ್ಯವೇ ಎಂಬ ವಿಷಯವನ್ನು ಆಲೋಚಿಸುವುದು ಯುಕ್ತವೆಂದು ತೋರುತ್ತದೆ.

ವಾಮನಾವತಾರದ ಕಥೆಯು ಪ್ರಸಿದ್ಧವಾಗಿದೆ. ಎಲ್ಲ ಲೋಕಗಳನ್ನೂ ವಶಪಡಿಸಿಕೊಂಡು, ದೇವತೆಗಳಿಗೆ ನ್ಯಾಯವಾಗಿ ಸಲ್ಲಬೇಕಾದ ಯಜ್ಞಭಾಗ ಗಳನ್ನು ಕೂಡ ತಪ್ಪಿಸಿದ ಬಲಿಚಕ್ರವರ್ತಿಯನ್ನು ಶಿಕ್ಷಿಸುವುದಕ್ಕಾಗಿ ವಿಷ್ಣು ವಾಮನಾವತಾರದಿಂದ ಬಂದ ಕಥೆ ಇಲ್ಲಿ ಪ್ರತಿಪಾದಿತವಾಗಿದೆ. ದೇವಮಾತೆಯಾದ ಅದಿತಿಯ ಗರ್ಭದಲ್ಲಿ ಮಹಾವಿಷ್ಣು ಅವತರಿಸಿರುವನೆಂದು ಪ್ರಹ್ಲಾದನು ಹೇಳುವನು. ಬಲಿಚಕ್ರವರ್ತಿ ಭಕ್ತಿಗೌರವಗಳನ್ನು ಸೂಚಿಸುವುದಕ್ಕೆ ಪ್ರತಿಯಾಗಿ "ಆ ಹರಿ ಯೆಂಬುವನು ಯಾರು ? ಅವನಿಗಿಂತಲೂ ಬಲಿಷ್ಠರಾದ ನೂರಾರು ಜನ ದೈತ್ಯರು ನನ್ನ ವಶದಲ್ಲಿದ್ದಾರೆ. ಇವರಲ್ಲಿ ಒಬ್ಬೊಬ್ಬನ ಸಾಹಸದಲ್ಲಿ ಅರೆಪಾಲಿನಷ್ಟು ಕೂಡ ಅವನಿಗಿಲ್ಲ'' ಎಂದು ಸೊಕ್ಕಿನಿಂದ ಉತ್ತರಕೊಡುವನು. ಭಕ್ತಶಿರೋಮಣಿಯಾದ ಪ್ರಹ್ಲಾದನು ತನ್ನ ಮೊಮ್ಮಗನ ಮನೋಭಾವನೆಗಾಗಿ ದುಃಖಿಸಿ, ಅವನನ್ನು ಜರೆದು ವಿಷ್ಣುವಿನ ಮಹಿಮೆಯನ್ನು ವಿವರಿಸುವನು. ಬಲೀಂದ್ರನ ಗರ್ವವು ಇಳಿಯುವುದು. ತನ್ನ ತಾಮಸವೃತ್ತಿಗಾಗಿ ತಾನೇ ಪಶ್ಚಾತ್ತಾಪಪಡುವನು. ಮಾಯಾವಿಯಾದ ವಿಷ್ಣುವಿಗೆ ಯಾವವಿಧವಾದ ದಾನವನ್ನೂ ಕೊಡಕೂಡದೆಂದು ಪುರೋಹಿತನಾದ ಶುಕ್ರಾಚಾರ್ಯನು ಮುಂದೆ ಎಚ್ಚರಿಸಿದಾಗ, ಆ ದೈತ್ಯರಾಜನು "ಬಗೆಬಗೆಯ ವ್ರತ ಗಳನ್ನೂ ಉಪವಾಸಗಳನ್ನೂ ಮಾಡಿ ಹರಿಯನ್ನು ಒಲಿಸಿಕೊಳ್ಳುತ್ತಾರೆ. ಆತನೇ ಬಂದು ಕೈಯೊಡ್ಡಿ "ಕೊಡು" ಎಂದು ಬೇಡಿದರೆ ನನಗೆ ಅದಕ್ಕಿಂತಲೂ ಮಿಗಿಲಾದ ಭಾಗ್ಯವುಂಟೇ ?" ಎಂದು ಹರ್ಷದಿಂದ ಉತ್ತರಕೊಡುವನು.

## ಪೀಠಿಕೆ

ಭಾರವನ್ನು ತಾಳಲಾರದೆ ಕುಗ್ಗಿ ಬೀಳುತ್ತಿರುವ ಭೂದೇವಿಯ ಸ್ತೋತ್ರಕ್ಕೆ ಪ್ರಸನ್ನನಾಗಿ, ಯಜ್ಞಮೂರ್ತಿಯಾದ ನಾರಾಯಣನು ವರಾಹರೂಪದಿಂದ ಅವಳನ್ನು ಎತ್ತಿ ಸ್ವಸ್ಥಾನದಲ್ಲಿ ನಿಲ್ಲಿಸಿದನೆಂಬುದೇ ವರಾಹಾವತಾರದ ಮುಖ್ಯಕಥೆ. ಜಗತ್ತಿನಲ್ಲಿ ಕಂಡುಬರುವ ಸ್ವಾರ್ಥತೆಯ ಹೋರಾಟವು ಅಮೃತಮಂಥನದ ಉಪಾಖ್ಯಾನದಲ್ಲಿ ಪ್ರತಿಬಿಂಬಿತವಾಗಿದೆ. ದೇವತೆಗಳೂ ಅಸುರರೂ ಒಬ್ಬರ ಮೇಲೊಬ್ಬರು ಕತ್ತಿಯನ್ನು ಮಸೆಯುತ್ತಿದ್ದರು. ಅಮೃತವನ್ನು ಸಂಪಾದಿಸ ಬೇಕೆಂಬ ಸ್ವಾರ್ಥತೆಯಿಂದ ಇಬ್ಬರೂ ಒಂದಾದರು. ಅಮೃತವು ಹುಟ್ಟುವ ವರೆಗೂ ಒಟ್ಟಾಗಿ ಕೆಲಸಮಾಡಿದರು. ಆ ಮೇಲೆ ಅವರಲ್ಲಿ ದ್ರೋಹಬುದ್ಧಿ ಹುಟ್ಟಿತು. ದೈತ್ಯರು ದೇವತೆಗಳನ್ನು ವಂಚಿಸಿ ಅಮೃತದ ಪಾತ್ರೆಯನ್ನೇ ಹೊತ್ತುಕೊಂಡು ಓಡಿದರು. ಆಗ ವಿಷ್ಣು ಮೋಹಿನಿಯ ರೂಪದಿಂದ ಬಂದು, ಅಸುರರನ್ನು ಮರುಳುಮಾಡಿ, ದೇವತೆಗಳಿಗೆ ಅಮೃತವನ್ನು ಹಂಚಿದನು. ದ್ರೋಹಕ್ಕೆ ತಕ್ಕ ಶಾಸ್ತಿ.

ಆಳುವ ಮಹಾಪ್ರಭುಗಳಾದ ಶ್ರೀಮಜ್ಜಯಚಾಮರಾಜೇಂದ್ರ ವೊಡೆಯರ್ ಬಹದ್ದೂರ್ ಜಿ ಸಿ.ಬಿ., ಜಿ.ಸಿ.ಎಸ್.ಐ.ರವರ ಔದಾರ್ಯದಿಂದ ಸಂಸ್ಕೃತಸಾಹಿತ್ಯ ಭಂಡಾರದಲ್ಲಿ ಅಡಗಿದ್ದ ಅಮೂಲ್ಯವಾದ ವಿಷಯಗಳು ಕನ್ನಡಿಗರಿಗೆ ಗೋಚರ ವಾದುವು. ಇದಕ್ಕಾಗಿ ಕರ್ಣಾಟಕವು ಅವರಿಗೆ ಕೃತಜ್ಞತೆಯ ಕಾಣಿಕೆಯನ್ನು ಸಲ್ಲಿಸುತ್ತದೆ. ಸರ್ವಶಕ್ತನಾದ ಭಗವಂತನು ಅವರಿಗೆ ಎಲ್ಲ ವಿಧವಾದ ಮಂಗಳ ವನ್ನೂ ಕರುಣಿಸಲಿ. ಅವರ ಕೀರ್ತಿಧ್ವಜವು ಎಂದೆಂದಿಗೂ ಹಾರಾಡುತ್ತಿರಲಿ.

ವೈಶಾಖ ಶುದ್ಧ ಪಾಡ್ಯಮಿ,
ಸೋಮವಾರ, ೧೦-೫-೧೯೪೮,
ಮೈಸೂರು.

**ವಾಜಪೇಯಂ ಶ್ರೀರಂಗಾಚಾರ್,**
ಅನುವಾದಕ.

*

# ವಿಷಯ ಸೂಚಿಕೆ

## ವಿಷಯ ಸೂಚಿಕೆ

# ವಿಷಯ ಸೂಚಿಕೆ

## ವಿಷಯ ಸೂಚಿಕೆ

## ವಿಷಯ ಸೂಚಿಕೆ

## ವಿಷಯ ಸೂಚಿಕೆ

|| ಶ್ರೀ ||

ಓಂ ತತ್ಸದ್ಬ್ರಹ್ಮಣೇ ನಮಃ

# ಶ್ರೀಮದ್ದ್ವೈಪಾಯನಮುನಿಪ್ರಣೀತಂ

# ಶ್ರೀಮತ್ಸ್ಯಮಹಾಪುರಾಣಂ

---

## ಅಥ ಪಂಚದಶಾಧಿಕದ್ವಿಶತತಮೋಽಧ್ಯಾಯಃ

|| ಮನುರುವಾಚ ||

ರಾಜ್ಞೋಽಭಿಷಿಕ್ತಮಾತ್ರಸ್ಯ ಕಿಂ ನು ಕೃತ್ಯತಮಂ ಭವೇತ್ ।
ಏತನ್ಮೇ ಸರ್ವಮಾಚಕ್ಷ್ವ ಸಮ್ಯಗ್ವೇತ್ತಿ ಯತೋ ಭವಾನ್ || ೧ ||

|| ಮತ್ಸ್ಯ ಉವಾಚ ||

ಅಭಿಷೇಕಾರ್ದ್ರಶಿರಸಾ ರಾಜ್ಞಾ ರಾಜ್ಯಾವಲೋಕಿನಾ ।
ಸಹಾಯವರಣಂ ಕಾರ್ಯಂ ತತ್ರ ರಾಜ್ಯಂ ಪ್ರತಿಷ್ಠಿತಂ || ೨ ||

---

೧. ಮನುಚಕ್ರವರ್ತಿ ಹೇಳಿದನು.—ಪಟ್ಟಾಭಿಷೇಕವಾದ ಕೂಡಲೇ ರಾಜನಾದವನು ಅವಶ್ಯವಾಗಿ ಮಾಡಬೇಕಾದ ಕರ್ತವ್ಯಗಳು ಯಾವುವು? ಅವೆಲ್ಲವನ್ನೂ ನನಗೆ ಹೇಳು. ಏಕೆಂದರೆ ನೀನು ಎಲ್ಲವನ್ನೂ ಚೆನ್ನಾಗಿ ಬಲ್ಲವನು.

೨. ಮತ್ಸ್ಯರೂಪನಾದ ಭಗವಂತನು ಹೇಳಿದನು.—ರಾಜ್ಯವನ್ನು ಎಚ್ಚರಿಕೆಯಿಂದ ಆಳಬೇಕೆನ್ನುವ ರಾಜನು ಪಟ್ಟಾಭಿಷೇಕದ ಮಂತ್ರೋದಕದಿಂದ ಒದ್ದೆಯಾದ ತಲೆಯು ಆರುವುದಕ್ಕೆ ಮುಂಚೆಯೇ ಎಂದರೆ ಅತಿಶೀಘ್ರವಾಗಿ ರಾಜಕಾರ್ಯದಲ್ಲಿ ತನಗೆ ನೆರವಾಗಬಲ್ಲ ಆಪ್ತಜನರನ್ನು ಆರಿಸಬೇಕು. ರಾಜ್ಯವು ನೆಲೆಯಾಗಿ ನಿಲ್ಲುವುದು ಅವರಿಂದಲೇ.

**ಯದಪ್ಯಲ್ಪತರಂ ಕರ್ಮ ತದಪ್ಯೇಕೇನ ದುಷ್ಕರಂ ।**
**ಪುರುಷೇಣಾಸಹಾಯೇನ ಕಿಮು ರಾಜ್ಯಂ ಮಹೋದಯಂ ॥ ೩ ॥**

**ತಸ್ಮಾತ್ಸಹಾಯಾನ್ ವರಯೇತ್ ಕುಲೀನಾನ್ ನೃಪತಿಃ ಸ್ವಯಂ ।**
**ಶೂರಾನ್ ಕುಲೀನಜಾತೀಯಾನ್ ಬಲಯುಕ್ತಾಞ್ಛ್ರಿಯಾನ್ವಿತಾನ್ ॥ ೪ ॥**

**ಸತ್ವರೂಪಗುಣೋಪೇತಾನ್ ಸಜ್ಜನಾನ್ ಕ್ಷಮಯಾನ್ವಿತಾನ್ ।**
**ಕ್ಲೇಶಕ್ಷಮಾನ್ ಮಹೋತ್ಸಾಹಾನ್ ಧರ್ಮಜ್ಞಾಂಶ್ಚ ಪ್ರಿಯಂವದಾನ್ ॥ ೫ ॥**

**ಹಿತೋಪದೇಶಕಾಲಜ್ಞಾನ್ ಸ್ವಾಮಿಭಕ್ತಾನ್ ಯಶೋಽರ್ಥಿನಃ ।**
**ಏವಂವಿಧಾನ್ ಸಹಾಯಾಂಶ್ಚ ಶುಭಕರ್ಮಸು ಯೋಜಯೇತ್ ॥ ೬ ॥**

**ಗುಣಹೀನಾನಪಿ ತಥಾ ವಿಜ್ಞಾಯ ನೃಪತಿಃ ಸ್ವಯಂ ।**
**ಕರ್ಮಸ್ವೇವ ನಿಯುಂಜೀತ ಯಥಾಯೋಗ್ಯೇಷು ಭಾಗಶಃ ॥ ೭ ॥**

---

೩. ಎಂತಹ ಅಲ್ಪಕಾರ್ಯವೇ ಆಗಿರಲಿ ಸಹಾಯವಿಲ್ಲದಿದ್ದರೆ ಒಬ್ಬಂಟಿಗನಾದವನು ಅದನ್ನು ನಿರ್ವಹಿಸಲಾರನು. ಹೀಗಿರುವಾಗ ಅತಿಶಯವಾದ ಹೊಣೆಗಾರಿಕೆಯಿಂದ ತುಂಬಿದ ರಾಜ್ಯಭಾರದ ವಿಷಯದಲ್ಲಿ ಹೇಳಬೇಕಾದುದೇನು ?

೪-೬. ಆದುದರಿಂದ ರಾಜನು ದೊಡ್ಡಮನೆತನದಲ್ಲಿ ಹುಟ್ಟಿದ ಪುರುಷರನ್ನು ರಾಜ್ಯಕಾರ್ಯದಲ್ಲಿ ತನಗೆ ಸಹಾಯಮಾಡುವುದಕ್ಕೋಸ್ಕರ ತಾನೇ ಪರೀಕ್ಷಿಸಿ ಆರಿಸಿಕೊಳ್ಳಬೇಕು. ಅವರು ಶೂರರೂ, ಸದ್ವಂಶಸ್ಥರೂ, ಬಲಶಾಲಿಗಳೂ, ಶ್ರೀಮಂತರೂ ಆಗಿರಬೇಕು. ರೂಪ, ಸತ್ವ, ಗುಣ ಇವುಗಳಿಂದ ಕೂಡಿ ತಾಳ್ಮೆಯನ್ನು ಕೆಲಸದಲ್ಲಿ ತೋರಿಸಬಲ್ಲವರಾಗಿರಬೇಕು. ಕ್ಲೇಶವನ್ನು ಸಹಿಸುವವರೂ, ಅತಿಶಯವಾಗಿ ಉತ್ಸಾಹಶಾಲಿಗಳೂ, ಧರ್ಮವನ್ನು ಬಲ್ಲವರೂ, ಮನಸ್ಸೋಯುದಂತೆ ಮಾತನಾಡುವವರೂ ಆಗಿರಬೇಕು. ಅವರು ಸಮಯವನ್ನು ನೋಡಿ ರಾಜನಿಗೆ ಹಿತವನ್ನು ಉಪದೇಶಿಸಬೇಕು. ಅವನ ಕೀರ್ತಿಯನ್ನು ಹೆಚ್ಚಿಸಲು ಆಸಕ್ತಿಯನ್ನು ತೊಡಬೇಕು. ನಿಶ್ಚಲವಾದ ಸ್ವಾಮಿಭಕ್ತಿಯನ್ನು ಇಟ್ಟಿರಬೇಕು. ಈ ಗುಣಗಳಿಂದ ಕೂಡಿದ ಸಹಾಯಕರನ್ನು ರಾಜನು ಶ್ರೇಯಸ್ಕರವಾದ ಕಾರ್ಯಗಳಿಗೆ ನಿಯಮಿಸಬೇಕು.

೭. ಇದೇ ರೀತಿಯಾಗಿ ಅಧಿಕಾರಿಗಳಲ್ಲಿ ಗುಣಹೀನರಾರೆಂಬುದನ್ನು ಕೂಡ ರಾಜನು ತನ್ನ ಸಾಮರ್ಥ್ಯದಿಂದಲೇ ಅರಿತು, ಅವರನ್ನು ಅವರವರಿಗೆ ತಕ್ಕ ಕಾರ್ಯಗಳಲ್ಲಿ ಬೇರೆಬೇರೆಯಾಗಿ ನಿಲ್ಲಿಸಬೇಕು.

**ಕುಲೀನಃ ಶೀಲಸಂಪನ್ನೋ ಧನುರ್ವೇದವಿಶಾರದಃ ।**
**ಹಸ್ತಿಶಿಕ್ಷಾಶ್ವಶಿಕ್ಷಾಸು ಕುಶಲಃ ಶ್ಲಕ್ಷ್ಣಭಾಷಿತಃ ॥ ೮ ॥**

**ನಿಮಿತ್ತೇ ಶಕುನಜ್ಞಾನೇ ವೇತ್ತಾ ಚೈವ ಚಿಕಿತ್ಸಿತೇ ।**
**ಕೃತಜ್ಞಃ ಕರ್ಮಣಾಂ ಶೂರಸ್ತಥಾ ಕ್ಲೇಶಸಹಸ್ತ್ವೃಜುಃ ॥ ೯ ॥**

**ವ್ಯೂಹತತ್ತ್ವವಿಧಾನಜ್ಞಃ ಫಲ್ಗುಸಾರವಿಶೇಷವಿತ್ ।**
**ರಾಜ್ಞಾ ಸೇನಾಪತಿಃ ಕಾರ್ಯೋ ಬ್ರಾಹ್ಮಣಃ ಕ್ಷತ್ರಿಯೋಽಥ ವಾ ॥೧೦॥**

**ಪ್ರಾಂಶುಃ ಸುರೂಪೋ ದಕ್ಷಶ್ಚ ಪ್ರಿಯವಾದೀ ನ ಚೋದ್ಧತಃ ।**
**ಚಿತ್ತಗ್ರಾಹಶ್ಚ ಸರ್ವೇಷಾಂ ಪ್ರತೀಹಾರೋ ವಿಧೀಯತೇ ॥೧೧॥**

**ಯಥೋಕ್ತವಾದೀ ದೂತಃ ಸ್ಯಾದ್ದೇಶಭಾಷಾವಿಶಾರದಃ ।**
**ಶಕ್ತಃ ಕ್ಲೇಶಸಹೋ ವಾಗ್ಮೀ ದೇಶಕಾಲವಿಭಾಗವಿತ್ ॥೧೨॥**

---

೮-೧೦. ರಾಜನು ಬ್ರಾಹ್ಮಣ ಅಥವಾ ಕ್ಷತ್ರಿಯನನ್ನು ಸೇನಾಪತಿಯಾಗಿ ಗೊತ್ತುಮಾಡಬೇಕು. ಅವನು ಒಳ್ಳೆಯವಂಶದಲ್ಲಿ ಹುಟ್ಟಿ, ನಡತೆವಂತನಾಗಿ, ಧನುರ್ವೇದವನ್ನು ಚೆನ್ನಾಗಿ ಅರಿತಿರಬೇಕು. ಆನೆಕುದುರೆಗಳಿಗೆ ಶಿಕ್ಷಣವನ್ನು ಕೊಡ ಬಲ್ಲವನಾಗಿರಬೇಕು. ಮೃದುವಾಗಿ ಮಾತನಾಡಬೇಕು. ನಿಮಿತ್ತವನ್ನೂ ಶಕುನ ವನ್ನೂ ಅರಿತು ವೈದ್ಯಶಾಸ್ತ್ರದಲ್ಲಿ ಒಳ್ಳೆಯ ಜ್ಞಾನವನ್ನೂ ಪಡೆದಿರಬೇಕು. ಅಲ್ಲದೆ ಕೃತಜ್ಞನೂ, ಕಾರ್ಯಸಾಧಕನೂ, ಕಷ್ಟಸಹಿಷ್ಣುವೂ, ಸರಳಸ್ವಭಾವದವನೂ, ವ್ಯೂಹರಚನೆಯ ತತ್ತ್ವವನ್ನು ಬಲ್ಲವನೂ, ಸಾರಾಸಾರವಿವೇಕಿಯೂ ಆಗಿರಬೇಕು.

೧೧. ಉನ್ನತನೂ, ಸುಂದರನೂ, ಸಮರ್ಥನೂ, ಪ್ರಿಯವಚನನೂ, ಸೌಮ್ಯನೂ, ಎಲ್ಲರ ಮನಸ್ಸನ್ನು ಸೆಳೆಯಬಲ್ಲ ಸ್ವಭಾವದವನೂ ಆದ ಮನುಷ್ಯನು ದ್ವಾರಪಾಲಕನಾಗಲು ತಕ್ಕವನು.

೧೨. ಆಯಾ ದೇಶಭಾಷೆಗಳಲ್ಲಿ ನಿಪುಣನೂ, ಕಾರ್ಯನಿರ್ವಾಹಸಮರ್ಥನೂ, ಕಷ್ಟಸಹಿಷ್ಣುವೂ, ವಾಕ್ಚತುರನೂ, ದೇಶಕಾಲಗಳನ್ನು ಬಲ್ಲವನೂ, ಹೇಳಿಕಳುಹಿಸಿ ದಂತೆ ಮಾತನಾಡತಕ್ಕವನೂ ಆದವನು ದೂತನೆನಿಸಿಕೊಳ್ಳುವನು.

ವಿಜ್ಞಾತದೇಶಕಾಲಶ್ಚ ದೂತಃ ಸ ಸ್ಯಾನ್ಮಹೀಕ್ಷಿತಃ ।
ವಕ್ತಾ ನಯಸ್ಯ ಯಃ ಕಾಲೇ ಸ ದೂತೋ ನೃಪತೇರ್ಭವೇತ್ ॥೧೩॥

ಪ್ರಾಂಶವೋಽಶಯನಾಃ ಶೂರಾ ದೃಢಭಕ್ತಾ ನಿರಾಕುಲಾಃ ।
ರಾಜ್ಞಾ ತು ರಕ್ಷಿಣಃ ಕಾರ್ಯಾಃ ಸದಾ ಕ್ಲೇಶಸಹಾ ಹಿತಾಃ ॥೧೪॥

ಅನಾಹಾರ್ಯೋಽನೃಶಂಸಶ್ಚ ದೃಢಭಕ್ತಿಶ್ಚ ಪಾರ್ಥಿವೇ ।
ತಾಂಬೂಲಧಾರೀ ಭವತಿ ನಾರೀ ವಾಪ್ಯಥ ತದ್ಗುಣಾ ॥೧೫॥

ಷಾಡ್ಗುಣ್ಯವಿಧಿತತ್ತ್ವಜ್ಞೋ ದೇಶಭಾಷಾವಿಶಾರದಃ ।
ಸಂಧಿವಿಗ್ರಹಿಕಃ ಕಾರ್ಯೋ ರಾಜ್ಞಾ ನಯವಿಶಾರದಃ ॥೧೬॥

---

೧೩. ದೇಶಕಾಲಗಳ ಸ್ವರೂಪವನ್ನು ತಿಳಿದವನೂ, ಸಮಯದಲ್ಲಿ ರಾಜ ನೀತಿಯನ್ನು ಹೇಳಬಲ್ಲವನೂ ಆದ ಪುರುಷನು ರಾಜನಿಗೆ ದೂತನಾಗಲು ಅರ್ಹನು.

೧೪. ಉನ್ನತರೂ, ತೂಕಡಿಕೆಯಿಲ್ಲದವರೂ, ಶೂರರೂ, ಚಿಂತೆಗೆ ಒಳಗಾಗದವರೂ, ಕಷ್ಟವನ್ನು ತಡೆಯಬಲ್ಲವರೂ, ಯಾವಾಗಲೂ ಹಿತಚಿಂತಕರೂ ಆದವರನ್ನು ಅರಸನು ಅಂಗರಕ್ಷಣೆಗೆ ಇಟ್ಟುಕೊಳ್ಳಬೇಕು.

೧೫. ಇತರರು ತೋರಿಸುವ ದುಡ್ಡುಕಾಸಿನ ಆಸೆಗೆ ಸಿಲುಕದೆ, ಸಾಧು ಸ್ವಭಾವದವನಾಗಿ ರಾಜನಲ್ಲಿ ನಿಶ್ಚಲವಾದ ಭಕ್ತಿಯಿಂದ ಇರುವಾತನು ತಾಂಬೂಲ ಧಾರಿಯಾಗಿರಲು ತಕ್ಕವನು. ಈ ಗುಣಗಳಿಂದ ಕೂಡಿದ ಹೆಂಗಸಾದರೂ ಈ ಕೆಲಸಕ್ಕೆ ಅರ್ಹಳು.

೧೬. ಸಂಧಿ, ವಿಗ್ರಹ, ಯಾನ, ಆಸನ, ದ್ವೈಧ, ಆಶ್ರಯ ಎಂಬ ಆರು ಗುಣಗಳ ಸ್ವರೂಪವನ್ನು ಅರಿತು, ಅನೇಕ ದೇಶಭಾಷೆಗಳನ್ನು ತಿಳಿದು ರಾಜ ನೀತಿಯಲ್ಲಿ ನೈಪುಣ್ಯವನ್ನು ಪಡೆದವನು ವಿದೇಶಾಂಗಮಂತ್ರಿಯ ಪದವಿಯಲ್ಲಿ ನಿಯಮಿಸಲ್ಪಡಲು ತಕ್ಕವನು.

**ಕೃತಾಕೃತಜ್ಞೋ ಭೃತ್ಯಾನಾಂ ಜ್ಞೇಯಃ ಸ್ಯಾದ್ದೇಶರಕ್ಷಿತಾ ।**
**ಆಯವ್ಯಯಜ್ಞೋ ಲೋಕಜ್ಞೋ ದೇಶೋತ್ಪತ್ತಿವಿಶಾರದಃ ॥೧೭॥**

**ಸುರೂಪಸ್ತರುಣಃ ಪ್ರಾಂಶುರ್ದೃಢಭಕ್ತಿಃ ಕುಲೋಚಿತಃ ।**
**ಶೂರಃ ಕ್ಲೇಶಸಹಶ್ಚೈವ ಖಡ್ಗಧಾರೀ ಪ್ರಕೀರ್ತಿತಃ ॥೧೮॥**

**ಶೂರಶ್ಚ ಬಲಯುಕ್ತಶ್ಚ ಗಜಾಶ್ವರಥಕೋವಿದಃ ।**
**ಧನುರ್ಧಾರೀ ಭವೇದ್ರಾಜ್ಞಃ ಸರ್ವಕ್ಲೇಶಸಹಃ ಶುಚಿಃ ॥೧೯॥**

**ನಿಮಿತ್ತಶಕುನಜ್ಞಾನೀ ಹಯಶಿಕ್ಷಾವಿಶಾರದಃ ।**
**ಹಯಾಯುರ್ವೇದತತ್ವಜ್ಞೋ ಭುವೋ ಭಾಗವಿಚಕ್ಷಣಃ ॥೨೦॥**

**ಬಲಾಬಲಜ್ಞೋ ರಥಿನಃ ಸ್ಥಿರದೃಷ್ಟಿಃ ಪ್ರಿಯಂವದಃ ।**
**ಶೂರಶ್ಚ ಕೃತವಿದ್ಯಶ್ಚ ಸಾರಥಿಃ ಪರಿಕೀರ್ತಿತಃ ॥೨೧॥**

---

೧೭. ಕೈಕೆಳಗಿನ ಅಧಿಕಾರಿಗಳು ಏನುಮಾಡುತ್ತಾರೆ ಏನುಮಾಡುವುದಿಲ್ಲ ಎಂಬುದನ್ನು ಅರಿಯಬಲ್ಲವನೂ, ದೇಶದ ಆದಾಯವ್ಯಯಗಳ ವಿವರವನ್ನು ಅರಿತವನೂ, ಲೌಕಿಕ ವ್ಯವಹಾರದಲ್ಲಿ ಸಮರ್ಥನೂ ಆದವನನ್ನು ದೇಶದ ರಕ್ಷಣೆಯ ಕಾರ್ಯಕ್ಕೆ ನಿಯಮಿಸಬೇಕು.

೧೮. ಸುಂದರನೂ, ಯುವಕನೂ, ದೀರ್ಘಕಾಯನೂ, ದೃಢಭಕ್ತಿಸಂಪನ್ನನೂ, ಸತ್ಕುಲಪ್ರಸೂತನೂ, ಶೂರನೂ, ಕಷ್ಟಸಹಿಷ್ಣುವೂ ಆದವನು ಖಡ್ಗಧಾರಿಯಾಗಲು ಅರ್ಹನೆನಿಸುವನು.

೧೯. ಶೂರನೂ, ಬಲಶಾಲಿಯೂ, ಆನೆ, ಕುದುರೆ, ತೇರು ಇವುಗಳನ್ನು ಏರಬಲ್ಲ ನಿಪುಣನೂ, ಕ್ಲೇಶಗಳನ್ನೆಲ್ಲ ತಡೆದುಕೊಳ್ಳಬಲ್ಲವನೂ, ಶುದ್ಧಮನಸ್ಸಿನವನೂ ಆದವನು ರಾಜನ ಬಿಲ್ಗಾರನಾಗಿರಲು ಯೋಗ್ಯನಾಗುವನು.

೨೦-೨೧. ನಿಮಿತ್ತ, ಶಕುನ ಇವುಗಳನ್ನೂ ಅರಿತವನೂ, ಕುದುರೆಗಳನ್ನು ಪಳಗಿಸುವುದರಲ್ಲಿ ನಿಪುಣನೂ, ಕುದುರೆಗಳ ಚಿಕಿತ್ಸಾಶಾಸ್ತ್ರವನ್ನು ಓದಿದವನೂ, ಬೇರೆ ಬೇರೆ ಭೂಭಾಗಗಳ ಸ್ವರೂಪವನ್ನು ಬಲ್ಲವನೂ, ರಥದಲ್ಲಿ ಕುಳಿತು ಯುದ್ಧಮಾಡುವ ವೀರನ ಬಲಾಬಲಗಳನ್ನು ತಿಳಿದವನೂ, ಸ್ಥಿರವಾದ ದೃಷ್ಟಿಯುಳ್ಳವನೂ, ಶೂರನೂ, ವಿದ್ಯಾವಂತನೂ ಆದವನನ್ನು ಸಾರಥಿಯ ಕೆಲಸಕ್ಕೆ ಇಟ್ಟುಕೊಳ್ಳಬೇಕು.

ಅನಾಹಾರ್ಯಃ ಶುಚಿರ್ದಕ್ಷಶ್ಚಿಕಿತ್ಸಿತವಿದಾಂ ವರಃ ।
ಸೂಪಶಾಸ್ತ್ರವಿಶೇಷಜ್ಞಃ ಸೂದಾಧ್ಯಕ್ಷಃ ಪ್ರಶಸ್ಯತೇ ॥೨೨॥

ಸೂದಶಾಸ್ತ್ರವಿಧಾನಜ್ಞಾಃ ಪರಾಭೇದ್ಯಾಃ ಕುಲೋದ್ಗತಾಃ ।
ಸರ್ವೇ ಮಹಾನಸೇ ಧಾರ್ಯಾಃ ಕೃತ್ತಕೇಶನಖಾ ನರಾಃ ॥೨೩॥

ಸಮಃ ಶತ್ರೌ ಚ ಮಿತ್ರೇ ಚ ಧರ್ಮಶಾಸ್ತ್ರವಿಶಾರದಃ ।
ವಿಪ್ರಮುಖ್ಯಃ ಕುಲೀನಶ್ಚ ಧರ್ಮಾಧಿಕರಣೋ ಭವೇತ್ ॥೨೪॥

ಕಾರ್ಯಾಸ್ತಥಾವಿಧಾಸ್ತತ್ರ ದ್ವಿಜಮುಖ್ಯಾಃ ಸಭಾಸದಃ ।
ಸರ್ವದೇಶಾಕ್ಷರಾಭಿಜ್ಞಃ ಸರ್ವಶಾಸ್ತ್ರವಿಶಾರದಃ ॥೨೫॥

---

೨೨. ಇತರರ ಆಕರ್ಷಣೆಗೆ ಒಳಗಾಗದವನೂ, ಶುಚಿಯೂ, ಸಮರ್ಥನೂ, ವೈದ್ಯಶಾಸ್ತ್ರವನ್ನು ಚೆನ್ನಾಗಿ ಬಲ್ಲವನೂ, ಪಾಕಶಾಸ್ತ್ರದ ವಿಧಾನಗಳನ್ನೆಲ್ಲ ಪರಿಪೂರ್ಣವಾಗಿ ತಿಳಿದವನೂ ಆದವನು ಅರಮನೆಯ ಅಡಿಗೆಯವರೆಲ್ಲರ ಅಧ್ಯಕ್ಷನಾಗಿರಲು ತಕ್ಕವನು.

೨೩. ಪಾಕಶಾಸ್ತ್ರದ ವಿಧಿಯನ್ನು ತಿಳಿದವರೂ, ಶತ್ರುಗಳ ಭೇದೋಪಾಯಕ್ಕೆ ಸಿಕ್ಕದವರೂ, ಸತ್ಕುಲದಲ್ಲಿ ಹುಟ್ಟಿದವರೂ, ಕೂದಲು ಮತ್ತು ಉಗುರುಗಳನ್ನು ಬೆಳಿಸದವರೂ ಆದಂತಹವರನ್ನೇ ಅಡಿಗೆಯ ಮನೆಯಲ್ಲಿ ನಿಯಮಿಸಬೇಕು.

೨೪. ಶತ್ರುಗಳನ್ನೂ ಮಿತ್ರರನ್ನೂ ಸಮಾನಭಾವದಿಂದ ಕಾಣುವ, ಧರ್ಮಶಾಸ್ತ್ರದಲ್ಲಿ ಪಾರಂಗತನಾದ, ಸತ್ಕುಲದಲ್ಲಿ ಜನಿಸಿದ ಬ್ರಾಹ್ಮಣೋತ್ತಮನನ್ನು ನ್ಯಾಯಾಧಿಪತಿಯನ್ನಾಗಿ ನಿಯಮಿಸಬೇಕು. ಇಂತಹ ಸದ್ಗುಣಗಳಿಂದಲೇ ಕೂಡಿದ ಬ್ರಾಹ್ಮಣರು ನ್ಯಾಯಸಮಿತಿಯ ಸದಸ್ಯರಾಗಿರಲು ಅರ್ಹರು.

೨೫. ಎಲ್ಲ ದೇಶಗಳ ಅಕ್ಷರಗಳನ್ನೂ ತಿಳಿದು ಸಕಲ ಶಾಸ್ತ್ರಗಳಲ್ಲಿಯೂ ಪಾಂಡಿತ್ಯವನ್ನು ಪಡೆದಾತನು ಅರಸನ ಬಳಿಯಲ್ಲಿ ಲೇಖಕನಾಗಿರಲು ಅರ್ಹನು. ಎಲ್ಲ ಇಲಾಖೆಗಳಲ್ಲಿಯೂ ಇಂತಹವರೇ ಲೇಖಕರಾಗಿರಬೇಕು.

**ಲೇಖಕಃ ಕಥಿತೋ ರಾಜ್ಞಃ ಸರ್ವಾಧಿಕರಣೇಷು ವೈ ।**
**ಶೀರ್ಷೋಪೇತಾನ್ ಸುಸಂಪೂರ್ಣಾನ್ ಸಮಶ್ರೇಣಿಗತಾನ್ ಸಮಾನ್ ॥೨೬॥**

**ಅಕ್ಷರಾನ್ ವೈ ಲಿಖೇದ್ಯಸ್ತು ಲೇಖಕಃ ಸ ವರಃ ಸ್ಮೃತಃ ।**
**ಉಪಾಯವಾಕ್ಯಕುಶಲಃ ಸರ್ವಶಾಸ್ತ್ರವಿಶಾರದಃ ॥೨೭॥**

**ಬಹ್ವರ್ಥವಕ್ತಾ ಚಾಲ್ಪೇನ ಲೇಖಕಃ ಸ್ಯಾನ್ನೃಪೋತ್ತಮ ।**
**ವಾಕ್ಯಾಭಿಪ್ರಾಯತತ್ವಜ್ಞೋ ದೇಶಕಾಲವಿಭಾಗವಿತ್ ॥೨೮॥**

**ಅನಾಹಾರ್ಯೋ ಭವೇಚ್ಛಕ್ತೋ ಲೇಖಕಃ ಸ್ಯಾನ್ನೃಪೋತ್ತಮ ।**
**ಪುರುಷಾಂತರತತ್ವಜ್ಞಾಃ ಪ್ರಾಂಶವಶ್ಚಾಪ್ಯಲೋಲುಪಾಃ ॥೨೯॥**

**ಧರ್ಮಾಧಿಕರಣೇ ಕಾರ್ಯಾ ರಾಜ್ಞೋ ವಾಕ್ಯಕರಾ ನರಾಃ ।**
**ಏವಂವಿಧಾಸ್ತಥಾ ಕಾರ್ಯಾ ರಾಜ್ಞಾ ದೌವಾರಿಕಾ ಜನಾಃ ॥೩೦॥**

---

೨೬ ತಲೆಕಟ್ಟುಗಳನ್ನು ಸರಿಯಾಗಿ ಕೊಟ್ಟು, ಮೋಡಿಯಿಲ್ಲದಂತೆ ಸಂಪೂರ್ಣವಾದ ಅಕ್ಷರಗಳನ್ನು ಸಾಲು ತಪ್ಪದಂತೆ ಸಮವಾಗಿ ಯಾವನು ಬರೆಯುವನೋ ಅವನೇ ಒಳ್ಳೆಯ ಲೇಖಕನು.

೨೭. ರಾಜಾ, ಸಾಮಾದ್ಯುಪಾಯಗರ್ಭಿತಗಳಾದ ವಾಕ್ಯಗಳನ್ನು ಬರೆಯುವುದರಲ್ಲಿ ಕುಶಲನೂ, ಸಕಲಶಾಸ್ತ್ರಪಂಡಿತನೂ, ಸ್ವಲ್ಪಮಾತಿನಲ್ಲೇ ಬಹಳ ಅರ್ಥವನ್ನು ಸೂಚಿಸುವವನೂ ಆಗಿರತಕ್ಕವನೇ ಸರಿಯಾದ ಲೇಖಕನೆನಿಸುವನು.

೨೮. ಇಷ್ಟೇ ಅಲ್ಲದೆ ಲೇಖಕನಿಗೆ ಇನ್ನೂ ಕೆಲವು ಗುಣಗಳು ಆವಶ್ಯಕ. ಆತನು ಬರೆಯುವ ವಾಕ್ಯದ ಅಭಿಪ್ರಾಯವು ನಿಷ್ಕೃಷ್ಟವಾಗಿ ಗೊತ್ತಾಗುವಂತೆ ಇರಬೇಕು. ದೇಶಕಾಲಗಳ ಸ್ವರೂಪವನ್ನು ಅವನು ಸರಿಯಾಗಿ ಅರಿತಿರಬೇಕು. ಶತ್ರುಗಳ ಕಪಟೋಪಾಯಕ್ಕೆ ವಶನಾಗಬಾರದು. ಕಾರ್ಯದಲ್ಲಿ ಸಮರ್ಥನಾಗಿರಬೇಕು.

೨೯-೩೦. ಬಗೆಬಗೆಯ ಜನರ ಸ್ವಭಾವವನ್ನು ಬಲ್ಲವರೂ, ದೀರ್ಘಕಾಯರೂ, ದುರಾಸೆಗೊಳಗಾಗದವರೂ, ರಾಜನ ಮಾತನ್ನು ಗೌರವದಿಂದ ನಡೆಸತಕ್ಕವರೂ ಆದವರನ್ನು ನ್ಯಾಯಾಸ್ಥಾನಗಳಲ್ಲಿ ನಿಯಮಿಸಬೇಕು. ದ್ವಾರಪಾಲಕರಾಗಿರಬೇಕಾದರೂ ಈ ಗುಣಗಳೇ ಆವಶ್ಯಕ.

**ಲೋಹವಸ್ತ್ರಾಜಿನಾದೀನಾಂ ರತ್ನಾನಾಂ ಚ ವಿಧಾನವಿತ್ ।**
**ವಿಜ್ಞಾತಾ ಫಲ್ಗುಸಾರಾಣಾಮನಾಹಾರ್ಯಃ ಶುಚಿಃ ಸದಾ ॥೩೧॥**

**ನಿಪುಣಶ್ಚಾಪ್ರಮತ್ತಶ್ಚ ಧನಾಧ್ಯಕ್ಷಃ ಪ್ರಕೀರ್ತಿತಃ ॥೩೨॥**

**ಆಯದ್ವಾರೇಷು ಸರ್ವೇಷು ಧನಾಧ್ಯಕ್ಷಸಮಾ ನರಾಃ ।**
**ವ್ಯಯದ್ವಾರೇಷು ಚ ತಥಾ ಕರ್ತವ್ಯಾಃ ಪೃಥಿವೀಕ್ಷಿತಾ ॥೩೩॥**

**ಪರಂಪರಾಗತೋ ಯಃ ಸ್ಯಾದಷ್ಟಾಂಗೇ ಸುಚಿಕಿತ್ಸಿತೇ ।**
**ಅನಾಹಾರ್ಯಃ ಸ ವೈದ್ಯಃ ಸ್ಯಾದ್ಧರ್ಮಾತ್ಮಾ ಚ ಕುಲೋದ್ಗತಃ ॥೩೪॥**

**ಪ್ರಾಣಾಚಾರ್ಯಃ ಸ ವಿಜ್ಞೇಯೋ ವಚನಂ ತಸ್ಯ ಭೂಭುಜಾ ।**
**ರಾಜನ್ ರಾಜ್ಞಾ ಸದಾ ಕಾರ್ಯಂ ಯಥಾ ಕಾರ್ಯಂ ಪೃಥಗ್ಜನೈಃ ॥೩೫॥**

---

೩೧-೩೨. ಲೋಹ, ವಸ್ತ್ರ, ಚರ್ಮ, ರತ್ನ ಇವುಗಳ ಪರೀಕ್ಷೆಯನ್ನು ತಿಳಿದವನೂ, ಸಾರಾಸಾರವಸ್ತುಗಳ ಸ್ವರೂಪವನ್ನು ಬಲ್ಲವನೂ, ಪ್ರಾಮಾಣಿಕತೆಯನ್ನೂ ಬಿಡದವನೂ, ಸದಾ ಪರಿಶುದ್ಧನೂ, ಕಾರ್ಯದಲ್ಲಿ ನಿಪುಣನೂ, ಮೈಮರೆಯದವನೂ ಆದವನು ಧನಾಧ್ಯಕ್ಷನಾಗಿರಲು ಅರ್ಹನಾಗಿರುವನು.

೩೩. ದೇಶದ ಆದಾಯಕ್ಕೂ ವ್ಯಯಕ್ಕೂ ಸಂಬಂಧಪಟ್ಟ ಎಲ್ಲ ಅಧಿಕಾರ ಸ್ಥಾನಗಳಲ್ಲಿಯೂ ಧನಾಧ್ಯಕ್ಷನನ್ನು ಗುಣದಲ್ಲಿ ಹೋಲುವ ಅಧಿಕಾರಿಗಳನ್ನೇ ರಾಜನು ನಿಯಮಿಸಬೇಕು.

೩೪. ಶಲ್ಯ, ಶಾಲಾಕ್ಯ, ಕಾಯಚಿಕಿತ್ಸೆ, ಭೂತವಿದ್ಯೆ, ಕೌಮಾರಭೃತ್ಯ, ಅಗದತಂತ್ರ, ರಸಾಯನತಂತ್ರ, ವಾಜೀಕರಣತಂತ್ರ ಎಂಬ ವೈದ್ಯಶಾಸ್ತ್ರದ ಎಂಟು ಭಾಗಗಳಲ್ಲಿಯೂ ನಿಪುಣನಾಗಿ ವೈದ್ಯರ ಪರಂಪರೆಯಿಂದ ಬಂದವನೂ, ಶತ್ರುಗಳ ಆಕರ್ಷಣೆಗೆ ಸಿಲುಕದವನೂ, ಧರ್ಮಾತ್ಮನೂ, ಸತ್ಕುಲಪ್ರಸೂತನೂ ಆದವನು ವೈದ್ಯನಾಗಿರಲು ಅರ್ಹನೆನಿಸುವನು.

೩೫. ಅವನನ್ನು ಪ್ರಾಣಗಳ ಆಚಾರ್ಯನೆಂದು ತಿಳಿಯಬೇಕು. ಓ ರಾಜಾ, ಅರಸನು ಆವನ ಮಾತನ್ನು ಯಾವಾಗಲೂ ತಪ್ಪದೆ ನಡೆಸಬೇಕು. ಹಾಗೆಯೇ ಮಿಕ್ಕವರೂ ನಡೆಯಬೇಕು.

ಹಸ್ತಿಶಿಕ್ಷಾವಿಧಾನಜ್ಞೋ ವನಜಾತಿವಿಶಾರದಃ ।
ಕ್ಲೇಶಕ್ಷಮಸ್ತಥಾ ರಾಜ್ಞೋ ಗಜಾಧ್ಯಕ್ಷಃ ಪ್ರಶಸ್ಯತೇ ॥೩೬॥
ಏತೈರೇವ ಗುಣೈರ್ಯುಕ್ತಃ ಸ್ಥವಿರಶ್ಚ ವಿಶೇಷತಃ ।
ಗಜಾರೋಹೀ ನರೇಂದ್ರಸ್ಯ ಸರ್ವಕರ್ಮಸು ಶಸ್ಯತೇ ॥೩೭॥
ಹಯಶಿಕ್ಷಾವಿಧಾನಜ್ಞಶ್ಚಿಕಿತ್ಸಿತವಿಶಾರದಃ ।
ಅಶ್ವಾಧ್ಯಕ್ಷೋ ಮಹೀಭರ್ತುಃ ಸ್ವಾಸನಶ್ಚ ಪ್ರಶಸ್ಯತೇ ॥೩೮॥
ಅನಾಹಾರ್ಯಶ್ಚ ಶೂರಶ್ಚ ತಥಾ ಪ್ರಾಜ್ಞಃ ಕುಲೋದ್ಗತಃ ।
ದುರ್ಗಾಧ್ಯಕ್ಷಃ ಸ್ಮೃತೋ ರಾಜ್ಞ ಉದ್ಯುಕ್ತಃ ಸರ್ವಕರ್ಮಸು ॥೩೯॥
ವಾಸ್ತುವಿದ್ಯಾವಿಧಾನಜ್ಞೋ ಲಘುಹಸ್ತೋ ಜಿತಶ್ರಮಃ ।
ದೀರ್ಘದರ್ಶೀ ಚ ಶೂರಶ್ಚ ಸ್ಥಪತಿಃ ಪರಿಕೀರ್ತಿತಃ ॥೪೦॥

---

೩೬. ಆನೆಗಳನ್ನು ಪಳಗಿಸುವ ವಿಧಾನವನ್ನೂ ಅರಣ್ಯದ ಮೃಗಗಳ ಜಾತಿಲಕ್ಷಣವನ್ನೂ ತಿಳಿದು, ಬಂದ ಕಷ್ಟಗಳನ್ನೆಲ್ಲ ಸೈರಿಸಲು ಶಕ್ತನಾದವನು ಆನೆಯ ಲಾಯದ ಮುಖ್ಯಾಧಿಕಾರಿಯಾಗಬಲ್ಲನು.

೩೭. ರಾಜನು ಏರುವ ಆನೆಯ ಮಾವಟಿಗನಿಗೂ ಇವೇ ಗುಣಗಳಿರಬೇಕು. ಮುಖ್ಯವಾಗಿ ಆತನು ಅನುಭವಶಾಲಿಯಾಗಿಯೂ ವಯೋವೃದ್ಧನಾಗಿಯೂ ಇರಬೇಕು. ಕೆಲಸ ಬಿದ್ದಾಗಲೆಲ್ಲ ಆತನನ್ನೇ ನಿಯಮಿಸಬೇಕು.

೩೮. ಕುದುರೆಗಳನ್ನು ಪಳಗಿಸುವ ರೀತಿಯನ್ನು ಬಲ್ಲವನೂ ಅಶ್ವಚಿಕಿತ್ಸೆಯಲ್ಲಿ ಪರಿಶ್ರಮವನ್ನು ಪಡೆದವನೂ, ಮೂಲವ್ಯಾಧಿ ಮುಂತಾದುವುಗಳಿಲ್ಲದೆ ಸ್ಥಿರವಾಗಿ ಕುಳಿತುಕೊಳ್ಳಬಲ್ಲವನೂ ಆದವನು ಕುದುರೆಯ ಲಾಯದ ಮುಖ್ಯಾಧಿಕಾರಿಯಾಗಲು ತಕ್ಕವನು.

೩೯. ಹಗೆಗಳು ತೋರಿಸುವ ಆಸೆಗೆ ಮರುಳಾಗದವನೂ, ಶೂರನೂ, ಪ್ರಾಜ್ಞನೂ, ಒಳ್ಳೆಯ ವಂಶದಲ್ಲಿ ಹುಟ್ಟಿದವನೂ, ಕೆಲಸಗಳಲ್ಲಿ ಉತ್ಸಾಹಶಾಲಿಯೂ ಆದವನನ್ನು ರಾಜನು ದುರ್ಗಗಳ ಅಧ್ಯಕ್ಷನನ್ನಾಗಿ ನಿಯಮಿಸಬೇಕು.

೪೦. ಕಟ್ಟಡಗಳ ನಿರ್ಮಾಣವಿಧಾನವನ್ನರಿತು, ಕೈಚಳಕವುಳ್ಳವನೂ, ಶ್ರಮಸಹಿಷ್ಣುವೂ, ದೂರಾಲೋಚನೆಯುಳ್ಳವನೂ, ಶೂರನೂ ಆದವನನ್ನು ಶಿಲ್ಪಿಗಳ ಅಧ್ಯಕ್ಷನನ್ನಾಗಿ ಗೊತ್ತುಮಾಡಬೇಕು.

ಯಂತ್ರಮುಕ್ತೇ ಪಾಣಿಮುಕ್ತೇ ವಿಮುಕ್ತೇ ಮುಕ್ತಧಾರಿತೇ ।
ಅಸ್ತ್ರಾಚಾರ್ಯೋ ನಿರುದ್ವೇಗಃ ಕುಶಲಶ್ಚ ವಿಶಿಷ್ಯತೇ ॥೪೧॥

ವೃದ್ಧಃ ಕುಲೋದ್ಗತಃ ಸೂಕ್ತಃ ಪಿತೃಪೈತಾಮಹಃ ಶುಚಿಃ ।
ರಾಜ್ಞಾಮಂತಃಪುರಾಧ್ಯಕ್ಷೋ ವಿನೀತಶ್ಚ ತಥೇಷ್ಯತೇ ॥೪೨॥

ಏವಂ ಸಪ್ತಾಧಿಕಾರೇಷು ಪುರುಷಾಃ ಸಪ್ತ ತೇ ಪುರೇ ।
ಪರೀಕ್ಷ್ಯ ಚಾಧಿಕಾರ್ಯಾಃ ಸ್ಯೂ ರಾಜ್ಞಾ ಸರ್ವೇಷು ಕರ್ಮಸು ।
ಸ್ಥಾಪನಾಜಾತಿತತ್ವಜ್ಞಾಃ ಸತತಂ ಪ್ರತಿಜಾಗ್ರತಾಃ । ॥೪೩॥

ರಾಜ್ಞಃ ಸ್ಯಾದಾಯುಧಾಗಾರೇ ದಕ್ಷಃ ಕರ್ಮಸು ಚೋದ್ಯತಃ ।
ಕರ್ಮಾಣ್ಯಪರಿಮೇಯಾನಿ ರಾಜ್ಞೋ ನೃಪಕುಲೋದ್ವಹ ॥೪೪॥

---

೪೧. ಶಸ್ತ್ರಾಸ್ತ್ರಗಳನ್ನು ಯಂತ್ರದಿಂದ ಬಿಡುವುದು, ಕೈಯಿಂದ ಬಿಡುವುದು, ಬಿಲ್ಲಿನಿಂದ ಬಿಡುವುದು, ಬಿಟ್ಟದ್ದನ್ನು ಹಿಂದಕ್ಕೆ ತೆಗೆದುಕೊಂಡು ಮತ್ತೆ ಬಿಡುವುದು ಎಂಬ ಪ್ರಯೋಗವಿಧಾನಗಳಲ್ಲಿ ಕುಶಲನಾಗಿ, ಗಾಬರಿಗೆ ಎಡೆಗುಡದಾತನು ಅಸ್ತ್ರಾಚಾರ್ಯನಾಗಿರಲು ಯೋಗ್ಯನೆನಿಸುವನು.

೪೨. ವೃದ್ಧನೂ, ಸತ್ಕುಲಪ್ರಸೂತನೂ, ಹಿರಿಯರಲ್ಲಿ ಪಳಗಿ ನೀತಿಮಾರ್ಗಗಳನ್ನು ಕಲಿತವನೂ, ತಂದೆತಾತಂದಿರ ಕಾಲದಿಂದ ರಾಜಸೇವೆಯ ಸಂಬಂಧವುಳ್ಳವನೂ, ನಿರ್ಮಲಮನಸ್ಕನೂ, ವಿನಯವಂತನೂ ಆದವನನ್ನು ಅರಸನು ಅಂತಃಪುರದ ಮುಖ್ಯಾಧಿಕಾರಿಯಾಗಿ ನಿಯಮಿಸಬೇಕು.

೪೩. ಅರಸನು ಹೀಗೆ ಈ ಏಳು ಅಧಿಕಾರಸ್ಥಾನಗಳಿಗೂ ಏಳು ಜನರನ್ನು ನಿಯಮಿಸಬೇಕು. ಯಾವಕಾರ್ಯಕ್ಕೇ ಆಗಲಿ ಗುಣವನ್ನು ಪರೀಕ್ಷಿಸಿದ ತರುವಾಯವೇ ತಕ್ಕ ಅಧಿಕಾರಿಯನ್ನು ಗೊತ್ತುಮಾಡಬೇಕು.

೪೪. ಆಯುಧಗಳ ಬೇರೆ ಬೇರೆ ಭಾಗಗಳನ್ನು ಜೋಡಿಸುವ ಮರ್ಮವನ್ನರಿತು ಯಾವಾಗಲೂ ಜಾಗರೂಕನಾಗಿ, ಸಮರ್ಥನೂ ಕಾರ್ಯೋದ್ಯೋಗಿಯೂ ಆಗಿರುವವನು ರಾಜನ ಶಸ್ತ್ರಶಾಲೆಯ ಅಧಿಪತಿಯಾಗಿರಲು ಅರ್ಹನೆನಿಸುವನು.

ಉತ್ತಮಾಧಮಮಧ್ಯಾನಿ ಬುದ್ಧ್ವಾ ಕರ್ಮಾಣಿ ಪಾರ್ಥಿವಃ ।
ಉತ್ತಮಾಧಮಮಧ್ಯೇಷು ಪುರುಷೇಷು ನಿಯೋಜಯೇತ್ ॥೪೫॥

ನರಕರ್ಮವಿಪರ್ಯಾಸಾದ್ರಾಜಾ ನಾಶಮವಾಪ್ನುಯಾತ್ ।
ನಿಯೋಗಂ ಪೌರುಷಂ ಭಕ್ತಿಂ ಶ್ರುತಂ ಶೌರ್ಯಂ ಕುಲಂ ನಯಂ ॥೪೬॥

ಜ್ಞಾತ್ವಾ ವೃತ್ತೀರ್ವಿಧಾತವ್ಯಾ ಪುರುಷಾಣಾಂ ಮಹೀಕ್ಷಿತಾ ।
ಪುರುಷಾಂತರವಿಜ್ಞಾನತತ್ವಸಾರನಿಬಂಧನಾತ್ ॥೪೭॥

ಬಹುಭಿರ್ಮಂತ್ರಯೇತ್ಕಾಮಂ ರಾಜಾ ಮಂತ್ರಂ ಪೃಥಕ್‌ಪೃಥಕ್ ।
ಮಂತ್ರಿಣಾಮಪಿ ನೋ ಕುರ್ಯಾನ್ಮಂತ್ರಿಮಂತ್ರಪ್ರಕಾಶನಂ ॥೪೮॥

ಕ್ವಚಿನ್ನ ಕಸ್ಯ ವಿಶ್ವಾಸೋ ಭವತೀಹ ಸದಾ ನೃಣಾಂ ।
ನಿಶ್ಚಯಸ್ತು ಸದಾ ಮಂತ್ರೇ ಕಾರ್ಯ ಏಕೇನ ಸೂರಿಣಾ । ॥೪೯॥

---

೪೫. ಓ ರಾಜೋತ್ತಮಾ, ರಾಜನು ಮಾಡಬೇಕಾದ ಕೆಲಸಗಳು ಅಪರಿಮಿತವಾಗಿವೆ. ಅವುಗಳಲ್ಲಿ ಉತ್ತಮ, ಮಧ್ಯಮ ಮತ್ತು ಅಧಮವಾದುವು ಯಾವುವೆಂಬುದನ್ನು ತಿಳಿದು ಅವುಗಳಿಗೆ ತಕ್ಕ ಜನರನ್ನು ಆರಿಸಿ ನಿಯಮಿಸಬೇಕು.

೪೬. ಅಧಿಕಾರಿಗೂ ಅವನಿಗೆ ನಿಯಮಿಸುವ ಕೆಲಸಕ್ಕೂ ಪರಸ್ಪರ ಆನುಗುಣ್ಯವಿಲ್ಲದಿದ್ದರೆ ರಾಜನು ಕೇಡಿಗೆ ಗುರಿಯಾಗುವನು. ಅಧಿಕಾರ, ಪೌರುಷ, ಭಕ್ತಿ, ಶಾಸ್ತ್ರಜ್ಞಾನ, ಶೌರ್ಯ, ಕುಲ, ನೀತಿ ಇವುಗಳನ್ನು ಗಮನಿಸಿ ಅರಸನು ಅವರವರಿಗೆ ತಕ್ಕಂತೆ ವೇತನವನ್ನು ಕಲ್ಪಿಸಬೇಕು.

೪೭-೪೮. ಪ್ರತಿಯೊಬ್ಬನಲ್ಲಿಯೂ ತಿಳುವಳಿಕೆ, ತತ್ವಜ್ಞಾನ, ಸಾರಗ್ರಹಣ ಸಾಮರ್ಥ್ಯ ಮುಂತಾದ ಗುಣಗಳು ಹೆಚ್ಚುಕಡಿಮೆಯಾಗುವುದರಿಂದ ರಾಜನು ಮಂತ್ರಾಲೋಚನೆಯನ್ನು ಹಲವರೊಡನೆ ಬೇರೆ ಬೇರೆ ಮಾಡಬೇಕು. ಒಬ್ಬ ಮಂತ್ರಿಯೊಡನೆ ನಡೆಸಿದ ಆಲೋಚನೆಯನ್ನೂ ವಿವರವನ್ನೂ ಮತ್ತೊಬ್ಬನಿಗೆ ತಿಳಿಸಬಾರದು.

೪೯. ಎಂತಹವನಿಗಾದರೂ ಒಬ್ಬನಲ್ಲಿಯೇ ವಿಶ್ವಾಸವು ಸ್ಥಿರವಾಗಿ ನಿಲ್ಲುವುದಿಲ್ಲ. ಇದು ಸ್ವಭಾವ. ಆದುದರಿಂದ ರಾಜನು ಯಾವಾಗಲೂ ಪ್ರಾಜ್ಞನಾದವನೊಡನೆ ಆಲೋಚಿಸಿ ಒಂದು ತೀರ್ಮಾನಕ್ಕೆ ಬರಬೇಕು.

**ಭವೇದ್ವಾ ನಿಶ್ಚಯೋವಾಪ್ತಿಃ ಪರಬುದ್ಧ್ಯುಪಜೀವನಾತ್ ।**
**ಏಕಸ್ಯೈವ ಮಹೀಭರ್ತುರ್ಭೂಯಃ ಕಾರ್ಯೋ ವಿನಿಶ್ಚಯಃ ॥೩೦॥**

**ಬ್ರಾಹ್ಮಣಾನ್ ಪರ್ಯುಪಾಸೀತ ತ್ರಯೀಶಾಸ್ತ್ರಸುನಿಶ್ಚಿತಾನ್ ।**
**ನಾಸಚ್ಛಾಸ್ತ್ರವತೋ ಮೂಢಾಂಸ್ತೇ ಹಿ ಲೋಕಸ್ಯ ಕಂಟಕಾಃ ॥೩೧॥**

**ವೃದ್ಧಾನ್ ಹಿ ನಿತ್ಯಂ ಸೇವೇತ ವಿಪ್ರಾನ್ ವೇದವಿದಃ ಶುಚೀನ್ ।**
**ತೇಭ್ಯಃ ಶಿಕ್ಷೇತ ವಿನಯಂ ವಿನೀತಾತ್ಮಾ ಚ ನಿತ್ಯಶಃ ॥೩೨॥**

**ಬಹವೋಽವಿನಯಾದ್ಭ್ರಷ್ಟಾ ರಾಜಾನಃ ಸಪರಿಚ್ಛದಾಃ ।**
**ವನಸ್ಥಾಶ್ಚೈವ ರಾಜ್ಯಾನಿ ವಿನಯಾತ್ಪ್ರತಿಪೇದಿರೇ ॥೩೩॥**

---

೩೦. ಇತರರ ಬುದ್ಧಿಬಲದ ಸಹಾಯದಿಂದ ಕಾರ್ಯದಲ್ಲಿ ನಿಶ್ಚಯಜ್ಞಾನವು ಉಂಟಾದಾಗ್ಗೂ, ರಾಜನು ಮತ್ತೆ ತಾನೊಬ್ಬನೇ ಆಲೋಚಿಸಿ ಕೊನೆಯ ತೀರ್ಮಾನವನ್ನು ಮಾಡಿಕೊಳ್ಳಬೇಕು.

೩೧. ವೇದಶಾಸ್ತ್ರಗಳನ್ನು ಅಧ್ಯಯನಮಾಡಿ ನಿಶ್ಚಯಜ್ಞಾನವನ್ನು ಸಂಪಾದಿಸಿರುವ ಬ್ರಾಹ್ಮಣರ ಸೇವೆಯನ್ನು ವಿಶೇಷವಾಗಿ ಮಾಡಬೇಕು. ಬುದ್ಧಿಮೋಹಕವಾದ ಶಾಸ್ತ್ರಗಳನ್ನು ಓದಿದವರ ಸೇವೆಯನ್ನು ಮಾಡಬಾರದು. ಏಕೆಂದರೆ ಅವರು ಮೂಢರು, ಲೋಕಕಂಟಕರು.

೩೨. ವೇದಜ್ಞರೂ, ಪರಿಶುದ್ಧರೂ, ವೃದ್ಧರೂ ಆದ ಬ್ರಾಹ್ಮಣರನ್ನು ನಿತ್ಯವೂ ಸೇವಿಸಬೇಕು. ನಮ್ರನಾಗಿ ಅವರಿಂದ ರಾಜನೀತಿಯನ್ನು ದಿನದಿನವೂ ತಿಳಿದುಕೊಳ್ಳಬೇಕು. ಅದರಿಂದ ರಾಜನು ಸಮಸ್ತಭೂಮಂಡಲವನ್ನೂ ವಶಪಡಿಸಿಕೊಳ್ಳಬಹುದು; ಸಂದೇಹವಿಲ್ಲ.

೩೩. ಎಷ್ಟೋ ಜನ ರಾಜರು ತಮ್ಮ ಅವಿನಯದಿಂದ ಪರಿವಾರಸಮೇತರಾಗಿ ರಾಜ್ಯಭ್ರಷ್ಟರಾದರು. ರಾಜ್ಯವನ್ನು ಕಳೆದುಕೊಂಡು ವನವಾಸದಲ್ಲಿದ್ದವರು ತಮ್ಮ ವಿನಯದ ಬಲದಿಂದ ಮರಳಿ ರಾಜ್ಯವನ್ನು ಪಡೆದರು.

ತ್ರೈವಿದ್ಯೇಭ್ಯಸ್ತ್ರಯೀಂ ವಿದ್ಯಾಂ ದಂಡನೀತಿಂ ಚ ಶಾಶ್ವತೀಂ ।
ಆನ್ವೀಕ್ಷಕೀಂ ಚಾತ್ಮವಿದ್ಯಾಂ ವಾರ್ತಾರಂಭಾಶ್ಚ ಲೋಕತಃ ||೫೪||

ಇಂದ್ರಿಯಾಣಾಂ ಜಯೇ ಯೋಗಂ ಸಮಾತಿಷ್ಠೇದ್ದಿವಾನಿಶಂ ।
ಜಿತೇಂದ್ರಿಯೋ ಹಿ ಶಕ್ನೋತಿ ವಶೇ ಸ್ಥಾಪಯಿತುಂ ಪ್ರಜಾಃ ||೫೫||

ಯಜೇತ ರಾಜಾ ಬಹುಭಿಃ ಕ್ರತುಭಿಶ್ಚ ಸದಕ್ಷಿಣೈಃ ।
ಧರ್ಮಾರ್ಥಂ ಚೈವ ವಿಪ್ರೇಭ್ಯೋ ದದ್ಯಾದ್ಭೋಗಾನ್ ಧನಾನಿ ಚ ||೫೬||

ಸಾಂವತ್ಸರಿಕಮಾಪ್ತೈಶ್ಚ ರಾಷ್ಟ್ರಾದಾಹಾರಯೇದ್ಬಲಿಂ ।
ಸ್ಯಾಚ್ಚಾಮ್ನಾಯಪರೋ ಲೋಕೇ ವರ್ತೇತ ಪಿತೃಬಂಧುವತ್ ||೫೭||

ಆವೃತ್ತಾನಾಂ ಗುರುಕುಲಾದ್ದ್ವಿಜಾನಾಂ ಪೂಜಕೋ ಭವೇತ್ ।
ನೃಪಾಣಾಮಕ್ಷಯೋ ಹ್ಯೇಷ ವಿಧಿರ್ಬ್ರಾಹ್ಮೋಽಭಿಧೀಯತೇ ||೫೮||

---

೫೫. ಶ್ರೋತ್ರಿಯರಾದ ಬ್ರಾಹ್ಮಣರಿಂದ ವೇದ, ವೇದಾಂಗ, ಅರ್ಥಶಾಸ್ತ್ರ, ತರ್ಕಶಾಸ್ತ್ರ, ಆತ್ಮವಿದ್ಯೆ ಇವುಗಳನ್ನು ಕಲಿಯಬೇಕು. ಲೋಕದ ನಡೆವಳಿಕೆಯಿಂದ ವಾಣಿಜ್ಯ, ಕೈಗಾರಿಕೆ ಮುಂತಾದುವನ್ನು ಅರಿಯಬೇಕು. ಇಂದ್ರಿಯಗಳನ್ನು ನಿಗ್ರಹಿಸಿ ಹಗಲೂ ರಾತ್ರಿ ಯೋಗನಿರತನಾಗಬೇಕು. ಏಕೆಂದರೆ ಜಿತೇಂದ್ರಿಯನಾದವನು ಮಾತ್ರ ಪ್ರಜೆಗಳನ್ನು ತನ್ನ ವಶದಲ್ಲಿ ಇರಿಸಿಕೊಳ್ಳಲು ಸಮರ್ಥನಾಗುವನು.

೫೬. ಅರಸನು ಅನೇಕ ಯಜ್ಞಯಾಗಗಳನ್ನು ಮಾಡಿ ದಕ್ಷಿಣೆಗಳನ್ನು ಕೊಡಬೇಕು. ಬ್ರಾಹ್ಮಣರಿಗೆ ಬಗೆಬಗೆಯ ಸುಖಸಾಧನಗಳನ್ನು ಕಲ್ಪಿಸಿಕೊಡುವುದಲ್ಲದೆ ದ್ರವ್ಯವನ್ನೂ ದಾನವಾಗಿ ಕೊಡಬೇಕು. ಇದರಿಂದ ಅವನಿಗೆ ಧರ್ಮ ಲಾಭವಾಗುತ್ತದೆ.

೫೭. ರಾಷ್ಟ್ರದ ಪ್ರಜೆಗಳಿಂದ ಪ್ರತಿವರ್ಷವೂ ಕಂದಾಯವನ್ನು ತನ್ನ ನಂಬಿಕೆಗೆ ಪಾತ್ರರಾದ ಅಧಿಕಾರಿಗಳ ಮೂಲಕವೇ ಎತ್ತಬೇಕು. ವೇದಾಧ್ಯಯನದಲ್ಲಿ ಆಸಕ್ತನಾಗಿರಬೇಕು. ಲೋಕದಲ್ಲಿ ಎಲ್ಲರ ತಂದೆಯಂತೆಯೂ ಬಂಧುವಿನಂತೆಯೂ ನಡೆದುಕೊಳ್ಳಬೇಕು.

೫೮. ವಿದ್ಯಾಭ್ಯಾಸಂಗವನ್ನು ಮುಗಿಸಿಕೊಂಡು ಗುರುಕುಲದಿಂದ ಹಿಂದಿರುಗಿ ಬಂದ ಬ್ರಾಹ್ಮಣರನ್ನು ಸತ್ಕರಿಸಬೇಕು. ಇದಕ್ಕೆ ಬ್ರಾಹ್ಮವಿಧಿಯೆಂದು ಹೆಸರು. ಇದು ರಾಜರಿಗೆ ಅಕ್ಷಯಫಲವನ್ನು ಕೊಡುತ್ತದೆ.

ತತಃ ಸ್ತೇನಾ ನ ವಾಽಮಿತ್ರಾ ಹರಂತಿ ನ ವಿನಶ್ಯತಿ ।
ತಸ್ಮಾದ್ರಾಜ್ಞಾ ವಿಧಾತವ್ಯೋ ಬ್ರಾಹ್ಮೋ ವೈ ಹ್ಯಕ್ಷಯೋ ವಿಧಿಃ ॥೫೯॥

ಸಮೋತ್ತಮಾಧಮೈ ರಾಜಾ ಹ್ಯಾಹೂಯ ಪಾಲಯೇತ್ಪ್ರಜಾಃ ।
ನ ನಿವರ್ತೇತ ಸಂಗ್ರಾಮಾತ್ಕ್ಷಾತ್ರಂ ವ್ರತಮನುಸ್ಮರನ್ ॥೬೦॥

ಸಂಗ್ರಾಮೇಷ್ವನಿವರ್ತಿತ್ವಂ ಪ್ರಜಾನಾಂ ಪರಿಪಾಲನಂ ।
ಶುಶ್ರೂಷಾ ಬ್ರಾಹ್ಮಣಾನಾಂ ಚ ರಾಜ್ಞಾಂ ನಿಶ್ರೇಯಸಂ ಪರಂ ॥೬೧॥

ಕೃಪಣಾನಾಂ ಚ ವೃದ್ಧಾನಾಂ ವಿಧವಾನಾಂ ಚ ಪಾಲನಂ ।
ಯೋಗಕ್ಷೇಮಂ ಚ ವೃತ್ತಿಂ ಚ ತಥೈವ ಪರಿಕಲ್ಪಯೇತ್ ॥೬೨॥

---

೫೯. ಅನಂತವಾದ ಈ ಫಲವನ್ನು ಕಳ್ಳರಾಗಲಿ ಶತ್ರುಗಳಾಗಲಿ ಅಪಹರಿಸಲಾರರು. ಅದು ಎಂದಿಗೂ ನಷ್ಟವಾಗದು. ಆದಕಾರಣ ರಾಜನು ಅಕ್ಷಯಫಲಪ್ರದವಾದ ಬ್ರಾಹ್ಮವಿಧಿಯನ್ನು ಆಚರಿಸಬೇಕು.

೬೦. ಉತ್ತಮ, ಮಧ್ಯಮ, ಅಧಮ ಎಂಬ ವಿಧವಿಧವಾದ ಪಂಗಡಗಳಿಗೆ ಸೇರಿದ ಪ್ರಜೆಗಳನ್ನು ಆಗಾಗ್ಗೆ ಕರೆದು, ಅವರ ಕಷ್ಟಸುಖಗಳನ್ನು ಯಥಾಯೋಗ್ಯವಾಗಿ ವಿಚಾರಿಸಿ ಅವರನ್ನು ರಕ್ಷಿಸಬೇಕು. ಕ್ಷತ್ರಿಯನಿಗೆ ಸಹಜವಾದ ಗುಣಸ್ವಭಾವಧರ್ಮಗಳನ್ನು ಯಾವಾಗಲೂ ತಂದುಕೊಳ್ಳುತ್ತಿರಬೇಕು. ಯುದ್ಧದಲ್ಲಿ ಸೋತು ಹಿಮ್ಮೆಟ್ಟಬಾರದು.

೬೧. ಯುದ್ಧದಲ್ಲಿ ಸೋತು ಹಿಂದಿರುಗದಿರುವುದು, ಪ್ರಜೆಗಳನ್ನು ನೆಮ್ಮದಿಯಿಂದ ಪಾಲಿಸುವುದು, ಬ್ರಾಹ್ಮಣರ ಸೇವೆಯನ್ನು ಮಾಡುವುದು ಇವು ರಾಜರಿಗೆ ಅತ್ಯಂತ ಶ್ರೇಯಸ್ಕರವಾದ ಕಾರ್ಯಗಳು.

೬೨. ದೀನರು, ವೃದ್ಧರು, ವಿಧವೆಯರು ಇವರ ರಕ್ಷಣೆಗೆ ತಕ್ಕ ಏರ್ಪಾಟನ್ನು ಮಾಡಬೇಕು. ಅವರ ಯೋಗಕ್ಷೇಮವನ್ನು ಗಮನಿಸಿ ಜೀವನಕ್ಕೆ ಅನುಕೂಲ್ಯವನ್ನು ಕಲ್ಪಿಸಬೇಕು.

ವರ್ಣಾಶ್ರಮವ್ಯವಸ್ಥಾನಂ ತಥಾ ಕಾರ್ಯಂ ವಿಶೇಷತಃ ।
ಸ್ವಧರ್ಮಪ್ರಚ್ಯುತಾನ್ ರಾಜಾ ಸ್ವಧರ್ಮೇ ಸ್ಥಾಪಯೇತ್ತಥಾ ॥೬೩॥

ಆಶ್ರಮೇಷು ತಥಾ ಕಾರ್ಯಮನ್ನಂ ತೈಲಂ ಚ ಭಾಜನಂ ।
ಸ್ವಯಮೇವಾನಯೇದ್ರಾಜಾ ಸತ್ಕೃತಾನ್ನಾವಮಾನಯೇತ್ ॥೬೪॥

ತಾಪಸೇ ಸರ್ವಕಾರ್ಯಾಣಿ ರಾಜ್ಯಮಾತ್ಮಾನಮೇವ ಚ ।
ನಿವೇದಯೇತ್ಪ್ರಯತ್ನೇನ ದೇವವಚ್ಚಿರಮರ್ಚಯೇತ್ ॥೬೫॥

ದ್ವೇ ಪ್ರಜ್ಞೇ ವೇದಿತವ್ಯೇ ಚ ಋಜ್ವೀ ವಕ್ರಾ ಚ ಮಾನವೈಃ ।
ವಕ್ರಾಂ ಜ್ಞಾತ್ವಾ ನ ಸೇವೇತ ಪ್ರತಿಬಾಧೇತ ಚಾಗತಾಂ ॥೬೬॥

---

೬೩. ವರ್ಣಾಶ್ರಮಧರ್ಮಗಳ ವ್ಯವಸ್ಥೆಗೆ ರಾಜನು ವಿಶೇಷವಾಗಿ ತನ್ನ ಗಮನವನ್ನು ಕೊಡಬೇಕು. ಸ್ವಧರ್ಮವನ್ನು ಬಿಟ್ಟು ನಡೆಯತಕ್ಕವರನ್ನು ದಂಡಿಸಿ ಅವರವರ ಧರ್ಮವನ್ನೇ ಅನುಸರಿಸುವಂತೆ ಮಾಡಬೇಕು.

೬೪. ಋಷ್ಯಾಶ್ರಮಗಳಿಗೆ ಆಹಾರವಸ್ತುಗಳು, ಎಣ್ಣೆ, ಗೃಹಕೃತ್ಯಕ್ಕೆ ಉಪಯುಕ್ತವಾದ ಪಾತ್ರೆಗಳು ಇವುಗಳನ್ನು ಒದಗಿಸಿಕೊಡಬೇಕು. ಋಷಿಗಳಿಗೆ ಸತ್ಕಾರವನ್ನು ಮಾಡಿ ಅವರನ್ನು ತಾನೇ ಗೌರವದಿಂದ ತನ್ನ ನಗರಕ್ಕೆ ಕರೆತರಬೇಕು. ಅವರಿಗೆ ಎಂದಿಗೂ ಅಗೌರವವನ್ನು ತೋರಿಸಬಾರದು.

೬೫. ತಾನು ಮಾಡುವ ಎಲ್ಲಕಾರ್ಯಗಳನ್ನೂ, ರಾಜ್ಯದ ಆಡಳಿತವನ್ನೂ, ತನ್ನ ಸ್ವಂತಯೋಗಕ್ಷೇಮವನ್ನೂ ಋಷಿಗೆ ತಿಳಿಯಪಡಿಸಬೇಕು. ಆತನನ್ನು ದೇವರಂತೆ ಪ್ರಯತ್ನದಿಂದ ಪೂಜಿಸಬೇಕು.

೬೬. ಮನುಷ್ಯರು ಸಂಪಾದಿಸಬೇಕಾದ ತಿಳುವಳಿಕೆ ಎರಡು ವಿಧವಾಗಿದೆ. ಸರಳರೀತಿಯದೊಂದು. ವಕ್ರರೀತಿಯದು ಮತ್ತೊಂದು. ವಕ್ರಮಾರ್ಗದ ಸ್ವಭಾವವನ್ನು ಚೆನ್ನಾಗಿ ತಿಳಿದುಕೊಂಡಿರಬೇಕು. ಆದರೆ ಅದನ್ನು ಅನುಸರಿಸಬಾರದು. ಯಾರಾದರೂ ಪ್ರಯೋಗಿಸಿದರೆ ಅದನ್ನು ತಡೆಗಟ್ಟಬೇಕು.

**ನಾಸ್ಯ ಛಿದ್ರಂ ಪರೋ ವಿಂದ್ಯಾದ್ವಿದ್ಯಾಚ್ಛಿದ್ರಂ ಪರಸ್ಯ ತು ।**
**ಗೂಹೇತ್ಕೂರ್ಮ ಇವಾಂಗಾನಿ ರಕ್ಷೇದ್ವಿವರಮಾತ್ಮನಃ ॥೬೭॥**

**ನ ವಿಶ್ವಸೇದವಿಶ್ವಸ್ತೇ ವಿಶ್ವಸ್ತೇ ನಾತಿವಿಶ್ವಸೇತ್ ।**
**ವಿಶ್ವಾಸಾದ್ಭಯಮುತ್ಪನ್ನಂ ಮೂಲಾದಪಿ ನಿಕೃಂತತಿ ॥೬೮॥**

**ವಿಶ್ವಾಸಯೇಚ್ಚಾಪ್ಯಪರಂ ತತ್ವಭೂತೇನ ಹೇತುನಾ ।**
**ಬಕವಚ್ಚಿಂತಯೇದರ್ಥಾನ್ ಸಿಂಹವಚ್ಚ ಪರಾಕ್ರಮೇತಃ ॥೬೯॥**

**ವೃಕವಚ್ಚಾಪಿ ಲುಂಪೇತ ಶಶವಚ್ಚ ವಿನಿಕ್ಷಿಪೇತ್ ।**
**ದೃಢಪ್ರಹಾರೀ ಚ ಭವೇತ್ತಥಾ ಶೂಕರವನ್ನೃಪಃ ॥೭೦॥**

---

೬೭. ತನ್ನಲ್ಲಿರುವ ಲೋಪವನ್ನು ಇತರರಿಗೆ ತೋರ್ಪಡಿಸಿಕೊಳ್ಳದೆ ಅವರ ಲೋಪವನ್ನು ಮಾತ್ರ ತಾನು ಅರಿಯಲು ಯತ್ನಿಸಬೇಕು. ಆಮೆಯು ಅವಯವಗಳನ್ನು ಒಳಕ್ಕೆ ಎಳೆದುಕೊಂಡು ರಕ್ಷಿಸಿಕೊಳ್ಳುವಂತೆ ರಾಜನು ತನ್ನ ದೌರ್ಬಲ್ಯವನ್ನು ಹೊರಪಡಿಸದೆ ರಹಸ್ಯವಾಗಿ ಇಟ್ಟುಕೊಳ್ಳಬೇಕು.

೬೮. ನಂಬಿಕೆಗೆ ಅರ್ಹನಲ್ಲದವನನ್ನು ನಂಬಲೇಬಾರದು. ನಂಬಬಹುದಾದವನಲ್ಲಿಯೂ ಅತಿಯಾಗಿ ನಂಬಿಕೆಯನ್ನು ಇಡಬಾರದು. ಏಕೆಂದರೆ ವಿಶ್ವಾಸದಿಂದ ಉತ್ಪನ್ನವಾದ ಭಯವು ರಾಜನನ್ನು ಅವನ ಬಂಧುಮಿತ್ರಪರಿವಾರ ಸಹಿತವಾಗಿ ಹಾಳುಮಾಡುತ್ತದೆ.

೬೯. ಯಥಾವಸ್ಥಿತವಾದ ಕಾರಣದಿಂದ ತನ್ನವರಲ್ಲದೆ ಇತರರೂ ಕೂಡ ತನ್ನಲ್ಲಿ ವಿಶ್ವಾಸವಿಡುವಂತೆ ಮಾಡಿಕೊಳ್ಳಬೇಕು. ಬಕಪಕ್ಷಿಯಂತೆ ನಿಶ್ಚಲ ಚಿತ್ತನಾಗಿ ಸ್ವರಾಷ್ಟ್ರ ಪರರಾಷ್ಟ್ರಗಳ ವಿಷಯವನ್ನು ಚಿಂತಿಸುತ್ತ, ಸಮಯ ಸಿಕ್ಕಿದಾಗ ಸಿಂಹದಂತೆ ಧೈರ್ಯದಿಂದ ಶತ್ರುವನ್ನು ಆಕ್ರಮಿಸಬೇಕು.

೭೦, ತೋಳನು ಕುರಿಯನ್ನು ಎತ್ತಿಕೊಂಡು ಹೋಗುವಂತೆ ರಾಜನು ಶತ್ರುವಿನ ಧನಧಾನ್ಯಾದಿಗಳನ್ನು ಅಪಹರಿಸಬೇಕು. ಮೊಲದಂತೆ ತನಗೆ ಬೇಕಾದ ವಸ್ತುಗಳನ್ನು ಸಂಗ್ರಹಿಸಿ ಇಡಬೇಕು. ಹಂದಿಯಂತೆ ವಿರೋಧಿಗಳ ಮೇಲೆ ಧೈರ್ಯವಾಗಿ ಬಿದ್ದು ಪ್ರಹರಿಸಬೇಕು.

ಚಿತ್ರಾಕಾರಶ್ಚ ಶಿಖಿವದ್ದೃಢಭಕ್ತಸ್ತಥಾ ಶ್ವವತ್ ।
ತಥಾ ಚ ಮಧುರಾಭಾಷೀ ಭವೇತ್ಕೋಕಿಲವನ್ನೃಪಃ ॥೭೧॥

ಕಾಕಶಂಕೀ ಭವೇನ್ನಿತ್ಯಮಜ್ಞಾತವಸತಿಂ ವಸೇತ್ ।
ನಾಪರೀಕ್ಷಿತಪೂರ್ವಂ ಚ ಭೋಜನಂ ಶಯನಂ ವ್ರಜೇತ್ ।
ವಸ್ತ್ರಂ ಪುಷ್ಪಮಲಂಕಾರಂ ಯಚ್ಚಾನ್ಯನ್ಮನುಜೋತ್ತಮ ॥೭೨॥

ನ ಗಾಹೇಜ್ಜನಸಂಬಾಧಂ ನ ಚಾಜ್ಞಾತಜಲಾಶಯಂ ।
ಅಪರೀಕ್ಷಿತಪೂರ್ವಂ ಚ ಪುರುಷೈರಾಪ್ತಕಾರಿಭಿಃ ॥೭೩॥

ನಾರೋಹೇತ್ಕುಂಜರಂ ವ್ಯಾಲಂ ನಾದಾಂತಂ ತುರಗಂ ತಥಾ ।
ನಾವಿಜ್ಞಾತಾಂ ಸ್ತ್ರಿಯಂ ಗಚ್ಛೇನ್ನೈವ ದೇವೋತ್ಸವೇ ವಸೇತ್ ॥೭೪॥

---

೭೧. ಸಮಯಾನುಸಾರವಾಗಿ ನವಿಲಿನಂತೆ ಚಿತ್ರವಿಚಿತ್ರವಾದ ಆಕಾರವನ್ನು ತಾಳಬೇಕು. ತನ್ನ ನಿಜವಾದ ಆಪ್ತರಲ್ಲಿ ಶುನಕನಂತೆ ದೃಢವಾದ ವಿಶ್ವಾಸವನ್ನು ಇಡಬೇಕು. ಕೋಗಿಲೆಯಂತೆ ಮಧುರವಾಗಿ ಮಾತನಾಡಬೇಕು.

೭೨. ಅಪರಿಚಿತರ ವಿಷಯದಲ್ಲಿ ಥಟ್ಟನೆ ನಂಬಿಕೆಯನ್ನು ಮಾಡದೆ ಕಾಗೆಯಂತೆ ಸಂದೇಹದಿಂದಲೇ ಸದಾ ವರ್ತಿಸಬೇಕು. ತನ್ನ ವಸತಿಯ ಕಾಲ ದೇಶಗಳನ್ನು ಗೋಪ್ಯವಾಗಿಡಬೇಕು. ಓ ಮನುಚಕ್ರವರ್ತೀ, ಭೋಜನ, ಶಯನ, ವಸ್ತ್ರ, ಪುಷ್ಪ, ಅಲಂಕಾರ ಮುಂತಾದವನ್ನು ಮೊದಲು ಪರೀಕ್ಷಿಸದೆ ಉಪಭೋಗಿಸಬಾರದು.

೭೩. ತನ್ನ ಹಿತಚಿಂತಕರಿಂದ ಪರೀಕ್ಷೆಮಾಡಿಸದೆ ಜನಗಳ ಗುಂಪಿನಲ್ಲಾಗಲಿ, ಅಪರಿಚಿತವಾದ ಹೊಳೆಕೆರೆಗಳಲ್ಲಾಗಲಿ ಪ್ರವೇಶಿಸಬಾರದು.

೭೪. ಮದಹತ್ತಿದ ಆನೆಯನ್ನೂ ಸ್ವಾಧೀನಕ್ಕೆ ಬಾರದ ಕುದುರೆಯನ್ನೂ ಏರಬಾರದು. ಶೀಲಸ್ವಭಾವಾದಿಗಳು ತಿಳಿಯದ ಸ್ತ್ರೀಯೊಡನೆ ಕೂಡಬಾರದು. ದೇವರ ಉತ್ಸವ ನಡೆಯುವ ಸ್ಥಳದಲ್ಲಿ ವಾಸಿಸಲೇ ಬಾರದು.

ನರೇಂದ್ರಲಕ್ಷ್ಮ್ಯಾ ಧರ್ಮಜ್ಞಸ್ತ್ರಾತಾऽಶ್ರಾಂತೋ ಭವೇನ್ನೃಪಃ ।
ಸದ್ಭೃತ್ಯಾಶ್ಚ ತಥಾ ಪುಷ್ಟಾಃ ಸತತಂ ಪ್ರತಿಮಾನಿತಾಃ ॥೭೫॥

ರಾಜ್ಞಾ ಸಹಾಯಾಃ ಕರ್ತವ್ಯಾಃ ಪೃಥಿವೀಂ ಜೇತುಮಿಚ್ಛತಾ ।
ಯಥಾರ್ಹಂ ಚಾಪ್ಯಸುಭೃತೋ ರಾಜಾ ಕರ್ಮಸು ಯೋಜಯೇತ್ ॥೭೬॥

ಧರ್ಮಿಷ್ಠಾನ್ ಧರ್ಮಕಾರ್ಯೇಷು ಶೂರಾನ್ ಸಂಗ್ರಾಮಕರ್ಮಸು ।
ನಿಪುಣಾನರ್ಥಕೃತ್ಯೇಷು ಸರ್ವತ್ರೈವ ತಥಾ ಶುಚೀನ್ ॥೭೭॥

ಸ್ತ್ರೀಷು ಷಂಡಂ ನಿಯುಂಜೀತ ತೀಕ್ಷ್ಣಂ ದಾರುಣಕರ್ಮಸು ।
ಧರ್ಮೇ ಚಾರ್ಥೇ ಚ ಕಾಮೇ ಚ ನಯೇ ಚ ರವಿನಂದನ ॥೭೮॥

---

೭೫. ಧರ್ಮಜ್ಞನಾದ ರಾಜನು ರಾಜಲಕ್ಷ್ಮಿಯ ಪರಿಪಾಲಕನಾಗಬೇಕು. ಅದಕ್ಕಾಗಿ ಆಗುವ ಶ್ರಮವನ್ನು ಲೆಕ್ಕಿಸಬಾರದು. ಕರ್ತವ್ಯನಿಷ್ಠರೂ ರಾಜಭಕ್ತಿ ಪೂರ್ಣರೂ ಆದ ಸಮರ್ಥರಾದ ಅಧಿಕಾರಿಗಳನ್ನು ವೇತನಾದಿಗಳಿಂದ ಪೋಷಿಸಿ ಗೌರವಿಸಿ ತನಗೆ ಸಹಾಯಕರನ್ನಾಗಿ ಇಟ್ಟುಕೊಳ್ಳಬೇಕು. ಇಂತಹ ಅರಸನು ಭೂಮಿಯನ್ನೆಲ್ಲ ಗೆಲ್ಲಬಲ್ಲನು.

೭೬-೭೭. ಅಧಿಕಾರಿಗಳ ಅರ್ಹತೆ, ಸ್ವಭಾವ ಇವುಗಳಿಗೆ ತಕ್ಕಂತೆ ಅವರನ್ನು ಬೇರೆಬೇರೆ ಕಾರ್ಯಗಳಲ್ಲಿ ನಿಯಮಿಸಬೇಕು. ಧರ್ಮಕಾರ್ಯಗಳಿಗೆ ಧರ್ಮಿಷ್ಠರನ್ನೂ, ಯುದ್ಧಕಾರ್ಯಗಳಿಗೆ ಶೂರರನ್ನೂ, ಹಣಕಾಸಿಗೆ ಸಂಬಂಧಪಟ್ಟ ಕೆಲಸಗಳಿಗೆ ಸೂಕ್ಷ್ಮ ಬುದ್ಧಿಯುಳ್ಳವರನ್ನೂ ಗೊತ್ತುಮಾಡಬೇಕು. ಅಂತೂ ಎಲ್ಲೆಡೆಗಳಲ್ಲಿಯೂ ಮನ ಶ್ಶುದ್ಧಿಯಿರತಕ್ಕವರನ್ನೇ ಗೊತ್ತುಮಾಡಬೇಕು.

೭೮. ಅಂತಃಪುರದಲ್ಲಿ ಷಂಡರನ್ನೂ ಕ್ರೂರಕಾರ್ಯಗಳನ್ನು ನಡೆಸಲು ಕ್ರೂರ ಸ್ವಭಾವದವರನ್ನೂ ನಿಯಮಿಸಬೇಕು. ಓ ಮನುಚಕ್ರವರ್ತೀ, ಇಷ್ಟೇ ಸಾಲದು; ಧರ್ಮಾರ್ಥಕಾಮಾದಿಗಳಲ್ಲಿ ಪ್ರಜೆಗಳೂ ಅಧಿಕಾರಿಗಳೂ ಹೇಗೆ ನಡೆ ಯುತ್ತಿದ್ದಾರೆಂಬುದನ್ನು ಬೇರೆಬೇರೆ ಯುಕ್ತಿಗಳಿಂದ ಪರೀಕ್ಷಿಸಬೇಕು.

ರಾಜಾ ಯಥಾರ್ಹಂ ಕುರ್ಯಾಚ್ಚ ಉಪಧಾಭಿಃ ಪರೀಕ್ಷಣಂ ।
ಸಮಾನೀತೋಪದಾನ್ ಭೃತ್ಯಾನ್ ಕುರ್ಯಾಚ್ಛಸ್ತವನೇಚರಾನ್ ॥೭೯॥

ತತ್ಪಾದಾನ್ವೇಷಿಣೋ ಯತ್ತಾಂಸ್ತದಧ್ಯಕ್ಷಾಂಸ್ತು ಕಾರಯೇತ್ ।
ಏವಮಾದೀನಿ ಕರ್ಮಾಣಿ ನೃಪೈಃ ಕಾರ್ಯಾಣಿ ಪಾರ್ಥಿವ ॥೮೦॥

ಸರ್ವಥಾ ನೇಷ್ಯತೇ ರಾಜ್ಞಸ್ತೀಕ್ಷ್ಣೋಪಕರಣಕ್ರಮಃ ।
ಕರ್ಮಾಣಿ ಪಾಪಸಾಧ್ಯಾನಿ ಯಾನಿ ರಾಜ್ಞೋ ನರಾಧಿಪ । ॥೮೧॥

ಸಂತಸ್ತಾನಿ ನ ಕುರ್ವಂತಿ ತಸ್ಮಾತ್ತಾನಿ ತ್ಯಜೇನ್ನೃಪಃ ।
ನೇಷ್ಯತೇ ಪೃಥಿವೀಶಾನಾಂ ತೀಕ್ಷ್ಣೋಪಕರಣಕ್ರಿಯಾ ॥೮೨॥

ಯಸ್ಮಿನ್ ಕರ್ಮಣಿ ಯಸ್ಯ ಸ್ಯಾದ್ವಿಶೇಷೇಣ ಚ ಕೌಶಲಂ ।
ತಸ್ಮಿನ್ ಕರ್ಮಣಿ ತಂ ರಾಜಾ ಪರೀಕ್ಷ್ಯ ವಿನಿಯೋಜಯೇತ್ ।
ಪಿತೃಪೈತಾಮಹಾನ್ ಭೃತ್ಯಾನ್ ಸರ್ವಕರ್ಮಸು ಯೋಜಯೇತ್ ॥೮೩॥

---

೭೯. ಅರಣ್ಯದ ಮೇಲುವಿಚಾರಣೆಗೆ ನಿಯಮಿತರಾದ ಅಧಿಕಾರಿಗಳು ಶ್ರೇಷ್ಠವಾದ ಅರಣ್ಯವಸ್ತುಗಳನ್ನು ಕಾಣಿಕೆಯಾಗಿ ತಂದು ಒಪ್ಪಿಸಬೇಕು. ಕಾಡು ಮೃಗಗಳ ಹೆಜ್ಜೆಗಳನ್ನು ಗುರುತಿಸಿ ಅವುಗಳನ್ನು ಬೆನ್ನಟ್ಟುವುದರಲ್ಲಿ ದಕ್ಷರಾದವರನ್ನು ಅವರ ಮುಖ್ಯಾಧಿಕಾರಿಗಳನ್ನಾಗಿ ನಿಯಮಿಸಬೇಕು.

೮೦. ಓ ರಾಜಾ, ಇವೇ ಮುಂತಾದ ಕಾರ್ಯಗಳನ್ನು ಅರಸನು ಮಾಡಬೇಕು. ಏನೇ ಆಗಲಿ ಕಾರ್ಯಸಾಧನೆಗಾಗಿ ತೀಕ್ಷ್ಣವಾದ ಉಪಾಯಗಳಿಗೆ ಮಾತ್ರ ಕೈ ಹಾಕಬಾರದು.

೮೧-೮೨. ಪಾಪಾಚರಣೆಯ ಮೂಲಕ ನೆರವೇರಿಸಬೇಕಾದ ಕಾರ್ಯಗಳನ್ನು ಸತ್ಪುರುಷರು ಕೈಗೊಳ್ಳುವುದಿಲ್ಲ. ರಾಜಾ, ಆದುದರಿಂದ ಅರಸನು ಅಂತಹವುಗಳನ್ನು ದೂರಮಾಡಬೇಕು. ಉಗ್ರವಾದ ಸಾಧನಗಳಿಂದ ಕಾರ್ಯವನ್ನು ಸಾಧಿಸುವುದು ರಾಜರಿಗೆ ಯುಕ್ತವಲ್ಲ.

೮೩. ಯಾವ ಕೆಲಸದಲ್ಲಿ ಯಾವನಿಗೆ ಅತಿಶಯವಾದ ಕೌಶಲವುಂಟೋ ಆ ಕೆಲಸದಲ್ಲಿ ಆತನನ್ನು ಪರೀಕ್ಷಿಸಿ ನಿಯಮಿಸಬೇಕು. ತಂದೆತಾತಂದಿರ ಕುಲಪರಂಪರೆಯಿಂದ ಬಂದ ಅಧಿಕಾರಿಗಳನ್ನೇ ಎಲ್ಲ ಕಾರ್ಯಗಳಲ್ಲಿಯೂ ನಿಯೋಜಿಸಬೇಕು.

ವಿನಾ ದಾಯಾದಕೃತ್ಯೇಷು ತತ್ರ ತೇ ಹಿ ಸಮಾಗತಾಃ ।
ನಿಯುಂಜೀತ ಮಹಾಭಾಗ ತಸ್ಯ ತೇ ಹಿತಕಾರಿಣಃ ॥೮೪॥

ಪರರಾಜಗೃಹಾತ್ಪ್ರಾಪ್ತಾಞ್ಜನಸಂಗ್ರಹಕಾಮ್ಯಯಾ ।
ದುಷ್ಟಾನ್ವಾಪ್ಯಥವಾಽದುಷ್ಟಾನಾಶ್ರಯೀತ ಪ್ರಯತ್ನತಃ ॥೮೫॥

ದುಷ್ಟಂ ವಿಜ್ಞಾಯ ವಿಶ್ವಾಸಂ ನ ಕುರ್ಯಾತ್ತತ್ರ ಭೂಮಿಪಃ ।
ವೃತ್ತಿಂ ತಸ್ಯಾಪಿ ವರ್ತೇತ ಜನಸಂಗ್ರಹಕಾಮ್ಯಯಾ ॥೮೬॥

ರಾಜಾ ದೇಶಾಂತರಪ್ರಾಪ್ತಂ ಪುರುಷಂ ಪೂಜಯೇದ್ಭೃಶಂ ।
ಮಮಾಯಂ ದೇಶಸಂಪ್ರಾಪ್ತೋ ಬಹುಮಾನೇನ ಚಿಂತಯೇತ್ ॥೮೭॥

---

೮೪. ಹೀಗೆ ಪರಂಪರೆಯಿಂದ ಬಂದ ಭೃತ್ಯರನ್ನು ಜ್ಞಾತಿಸಂಬಂಧವಾದ ಕೃತ್ಯಗಳಲ್ಲಿ ಹೊರತು ಉಳಿದವುಗಳಲ್ಲೆಲ್ಲ ನಿಯಮಿಸಬಹುದು. ಮಹಾಮಹಿಮನಾದ ಓ ಮನುಚಕ್ರವರ್ತೀ, ಅವರು ನಿಜವಾಗಿಯೂ ರಾಜನಿಗೆ ಹಿತವನ್ನು ಮಾಡತಕ್ಕವರು.

೮೫. ಶತ್ರುರಾಜರನ್ನು ಬಿಟ್ಟು ತನ್ನ ಬಳಿಗೆ ಬಂದವರು ದುಷ್ಟರಾಗಲಿ, ಸಾಧುಗಳಾಗಲಿ ರಾಜನು ಅವರಿಗೆ ಪ್ರಯತ್ನದಿಂದ ಆಶ್ರಯವನ್ನು ಕೊಡಬೇಕು. ಏಕೆಂದರೆ ಶತ್ರುಪಕ್ಷೀಯರನ್ನು ತನ್ನ ಪಕ್ಷಕ್ಕೆ ಸೇರಿಸಿಕೊಳ್ಳುವುದು ಒಳ್ಳೆಯದು.

೮೬. ದುಷ್ಟನೆಂದು ಗೊತ್ತಾದಮೇಲೆ ರಾಜನು ಅವನಲ್ಲಿ ನಂಬಿಕೆಯನ್ನಿಡಬಾರದು. ಆದರೆ ಅವನಿಗೂ ಜೀವನವನ್ನು ಕಲ್ಪಿಸಬೇಕು. ಏಕೆಂದರೆ ಜನರನ್ನು ಸಂಗ್ರಹಿಸಬೇಕಾದದು ಆವಶ್ಯಕ. ಅವನನ್ನು ಓಡಿಸಿಬಿಟ್ಟರೆ ಅವನು ಶತ್ರುಪಕ್ಷಕ್ಕೆ ಹೋಗಿ ಸೇರಬಹುದು.

೮೭. ಬೇರೆ ದೇಶದಿಂದ ಬಂದ ಮನುಷ್ಯನನ್ನು ರಾಜನು ವಿಶೇಷವಾಗಿ ಗೌರವಿಸಬೇಕು. "ಇವನು ನನ್ನ ದೇಶಕ್ಕೆ ಬಂದಿದ್ದಾನೆ" ಎಂಬ ಹೆಮ್ಮೆಯಿಂದ ಅವನಿಗೆ ಮನ್ನಣೆಯನ್ನು ಕೊಡಬೇಕು.

ಕಾಮಂ ಭೃತ್ಯಾರ್ಜನಂ ರಾಜಾ ನೈವ ಕುರ್ಯಾನ್ನರಾಧಿಪ ।
ನ ಚ ವಾऽಸಂವಿಭಕ್ತಾಂಸ್ತಾನ್ ಭೃತ್ಯಾನ್ ಕುರ್ಯಾತ್ಕಥಂಚನ ॥೮೮॥

ಶತ್ರವೋऽಗ್ನಿರ್ವಿಷಂ ಸರ್ಪೋ ನಿಸ್ತ್ರಿಂಶ ಇತಿ ಚೈಕತಃ ।
ಭೃತ್ಯಾ ಮನುಜಶಾರ್ದೂಲ ರುಷಿತಾಶ್ಚ ತಥೈಕತಃ ॥೮೯॥

ತೇಷಾಂ ಚಾರೇಣ ಚಾರಿತ್ರಂ ರಾಜಾ ವಿಜ್ಞಾಯ ನಿತ್ಯಶಃ ।
ಗುಣಿನಾಂ ಪೂಜನಂ ಕುರ್ಯಾನ್ನಿರ್ಗುಣಾನಾಂ ಚ ಶಾಸನಂ ।
ಕಥಿತಾಃ ಸತತಂ ರಾಜನ್ ರಾಜಾನಶ್ಚಾರಚಕ್ಷುಷಃ ॥೯೦॥

ಸ್ವಕೇ ದೇಶೇ ಪರೇ ದೇಶೇ ಜ್ಞಾನಶೀಲಾನ್ ವಿಚಕ್ಷಣಾನ್ ।
ಅನಾಹಾರ್ಯಾನ್ ಕ್ಲೇಶಸಹಾನ್ ನಿಯುಂಜೀತ ತಥಾ ಚರಾನ್ ॥೯೧॥

---

೮೮. ಎಲೈ ಮನುಚಕ್ರವರ್ತೀ, ರಾಜನು ಅಧಿಕಾರಿಗಳ ಸಂಖ್ಯೆಯನ್ನು ಮಿತಿಮೀರಿ ಹೆಚ್ಚಿಸಬೇಬಾರದು. ಮತ್ತು ಅವರನ್ನು ಬೇರೆಬೇರೆಯಾಗಿ ವಿಂಗಡಿಸಿ ಇಡಬೇಕು. ಅವರು ಒಟ್ಟಿಗೆ ಸೇರಲು ಅವಕಾಶವನ್ನು ಕೊಡಬಾರದು.

೮೯. ಶತ್ರುಗಳು, ಅಗ್ನಿ, ವಿಷ, ಸರ್ಪ, ಕತ್ತಿ ಇವಿಷ್ಟೂ ಒಂದು ತೂಕ. ಅತೃಪ್ತಿಯಿಂದ ಸ್ವಾಮಿಯ ಮೇಲೆ ಸಿಟ್ಟುಗೊಂಡಿರುವ ಕೆಳಗಿನ ಅಧಿಕಾರಿಗಳೇ ಒಂದು ತೂಕ. ಎಂದರೆ ಶತ್ರು, ಅಗ್ನಿ ಮುಂತಾದುವುಗಳಿಗಿಂತ ಇಂತಹ ಭೃತ್ಯರಿಂದ ಅಪಾಯ ಹೆಚ್ಚು ಎಂದು ಅಭಿಪ್ರಾಯ.

೯೦. ಗೂಢಚಾರರ ಮೂಲಕ ಅವರ ನಡೆವಳಿಕೆಯನ್ನು ನಿತ್ಯವೂ ತಿಳಿದು ಕೊಳ್ಳುತ್ತ ಗುಣವಂತರಿಗೆ ಬಹುಮಾನವನ್ನು ಕೊಡಬೇಕು. ದುರ್ಗುಣಿಗಳಿಗೆ ದಂಡವನ್ನು ವಿಧಿಸಬೇಕು.

೯೧. ಜ್ಞಾನಿಗಳೂ, ತೀಕ್ಷ್ಣಬುದ್ಧಿಯವರೂ, ಶತ್ರುಗಳ ಮುಡ್ಡುಕಾಸುಗಳಿಗೆ ಸೋಲದ ಪ್ರಾಮಾಣಿಕರೂ, ಕಷ್ಟಸಹಿಷ್ಣುಗಳೂ ಆದ ಗೂಢಚಾರರನ್ನು ತನ್ನ ದೇಶದಲ್ಲಿಯೂ ಪರದೇಶದಲ್ಲಿಯೂ ನಿಯಮಿಸಬೇಕು.

**ಜನಸ್ಯಾವಿದಿತಾಃ ಸೌಮ್ಯಾಂಸ್ತಥಾಽಜ್ಞಾತಾಃ ಪರಸ್ಪರಂ ।**
**ವಣಿಜೋ ಮಂತ್ರಕುಶಲಾಃ ಸಾಂವತ್ಸರಚಿಕಿತ್ಸಕಾಃ ।**
**ತಥಾ ಪ್ರವ್ರಾಜಿತಾಕಾರಾಂಶ್ಚಾರಾನ್ರಾಜಾ ನಿಯೋಜಯೇತ್ ॥೯೨॥**

**ನೈಕಸ್ಯ ರಾಜಾ ಶ್ರದ್ಧಧ್ಯಾಚ್ಚಾರಸ್ಯಾಪಿ ಸುಭಾಷಿತಂ ।**
**ದ್ವಯೋಃ ಸಂಬಂಧಮಾಜ್ಞಾಯ ಶ್ರದ್ಧಧ್ಯಾನ್ನೃಪತಿಸ್ತದಾ ॥೯೩॥**

**ಪರಸ್ಪರಸ್ಯಾವಿದಿತೌ ಯದಿ ಸ್ಯಾತಾಂ ಚ ತಾವುಭೌ ।**
**ತಸ್ಮಾದ್ರಾಜಾ ಪ್ರಯತ್ನೇನ ಗೂಢಾಂಶ್ಚಾರಾಃ ನಿಯೋಜಯೇತ್ ॥೯೪॥**

**ರಾಜ್ಯಸ್ಯ ಮೂಲಮೇತಾವದ್ಯಾ ರಾಜ್ಞಶ್ಚಾರದರ್ಶಿತಾ ।**
**ಚಾರಾಣಾಮಪಿ ಯತ್ನೇನ ರಾಜ್ಞಾ ಕಾರ್ಯಂ ಪರೀಕ್ಷಣಂ ॥೯೫॥**

---

೯೨. ರಾಜನು ನಿಯೋಜಿಸುವ ಗೂಢಚಾರರು ಜನರಿಗಾಗಲಿ ತಮ್ಮಲ್ಲೇ ಒಬ್ಬರಿಗೊಬ್ಬರಾಗಲಿ ಗುರುತಿರಬಾರದು. ಅವರು ಸೌಮ್ಯರಾಗಿರಬೇಕು. ವರ್ತಕರ, ಮಂತ್ರಶಾಸ್ತ್ರಜ್ಞರ, ಜೋಯಿಸರ, ವೈದ್ಯರ ಮತ್ತು ಸಂನ್ಯಾಸಿಗಳ ವೇಷವನ್ನು ಹಾಕಿಕೊಂಡು ಸಂಚರಿಸಬೇಕು.

೯೩. ಎಂತಹ ಪ್ರಿಯವಾದ ಸಂಗತಿಯನ್ನೇ ಹೇಳಲಿ ಒಬ್ಬ ಚಾರನ ಮಾತಿನಿಂದಲೇ ಅದನ್ನು ನಂಬಿ ಬಿಡಬಾರದು. ಇಬ್ಬರ ಮಾತನ್ನೂ ಕೇಳಿ ಅವನ್ನು ಹೋಲಿಸಿ ನೋಡಿ ಆ ಬಳಿಕ ನಂಬಬೇಕು.

೯೪. ಆ ಚಾರರಿಬ್ಬರೂ ಒಬ್ಬರಿಗೊಬ್ಬರು ಪರಿಚಿತರಲ್ಲದಿದ್ದರೆ ಮಾತ್ರ ವಿಶ್ವಾಸವನ್ನಿಡಬೇಕು. ಆದುದರಿಂದ ರಾಜನು ಗೂಢಚಾರರನ್ನು ಪ್ರಯತ್ನ ಪೂರ್ವಕವಾಗಿ ಇಟ್ಟುಕೊಳ್ಳಬೇಕು.

೯೫. ಗೂಢಚಾರರ ವಿಷಯದಲ್ಲಿ ಎಚ್ಚರಿಕೆಯನ್ನು ತೆಗೆದುಕೊಂಡು ತಕ್ಕವರನ್ನು ನಿಯಮಿಸುವುದೇ ರಾಜ್ಯದ ಆಡಳಿತವೆಲ್ಲಕ್ಕೂ ಮೂಲವೆಂದು ತಿಳಿಯಬೇಕು. ಅಲ್ಲದೆ ರಾಜನು ತನ್ನ ಚಾರರನ್ನೂ ಕೂಡ ಪ್ರಯತ್ನಪೂರ್ವಕವಾಗಿ ಆಗಾಗ್ಗೆ ಪರೀಕ್ಷಿಸುತ್ತಿರಬೇಕು.

ರಾಗಾಪರಾಗೌ ಭೃತ್ಯಾನಾಂ ಜನಸ್ಯ ಚ ಗುಣಾಗುಣಾ ।
ಸರ್ವಂ ರಾಜ್ಞಾಂ ಚರಾಯತ್ತಂ ತೇಷು ಯತ್ನಪರೋ ಭವೇತ್ ||೯೬||

ಕರ್ಮಣಾ ಕೇನ ಮೇ ಲೋಕೇ ಜನಃ ಸರ್ವೋಽನುರಜ್ಯತೇ ।
ವಿರಜ್ಯತೇ ಕೇನ ತಥಾ ವಿಜ್ಞೇಯಂ ತನ್ಮಹೀಕ್ಷಿತಾ ||೯೭||

ಅನುರಾಗಕರಂ ಲೋಕೇ ಕರ್ಮ ಕಾರ್ಯಂ ಮಹೀಕ್ಷಿತಾ ।
ವಿರಾಗಜನಕಂ ಲೋಕೇ ವರ್ಜನೀಯಂ ವಿಶೇಷತಃ ||೯೮||

ಜನಾನುರಾಗಪ್ರಭವಾ ಹಿ ಲಕ್ಷ್ಮೀ
ರಾಜ್ಞಾಂ ಯತೋ ಭಾಸ್ಕರವಂಶಚಂದ್ರ ।
ತಸ್ಮಾತ್ಪ್ರಯತ್ನೇನ ನರೇಂದ್ರಮುಖ್ಯೈಃ
ಕಾರ್ಯೋಽನುರಾಗೋ ಭುವಿ ಮಾನವೇಷು ||೯೯||

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ರಾಜ್ಞಾಂ ಸಹಾಯಸಂಪತ್ತಿರ್ನಾಮ ಪಂಚದಶಾಧಿಕದ್ವಿಶತತಮೋಽಧ್ಯಾಯಃ**

---

೯೬. ಅಧಿಕಾರಿಗಳು ತನ್ನಲ್ಲಿ ಇಟ್ಟಿರುವ ಪ್ರೀತಿ ಮತ್ತು ಅಪ್ರೀತಿಗಳೂ, ಪ್ರಜೆಗಳ ಗುಣದೋಷಗಳೂ ಈ ಚಾರರಿಂದಲೇ ಗೊತ್ತಾಗಬೇಕಾಗಿದೆ. ಆದುದರಿಂದ ಅವರ ವಿಷಯದಲ್ಲಿ ಜಾಗರೂಕನಾಗಿರಬೇಕು.

೯೭. "ಯಾವ ಕೆಲಸವನ್ನು ನಾನು ಮಾಡಿದರೆ ಪ್ರಜೆಗಳು ಸಂತುಷ್ಟರಾದಾರು ? ಏತರಿಂದ ಅವರು ಬೇಸರಗೊಂಡಾರು" ಎಂಬ ವಿಷಯವನ್ನು ರಾಜನು ಚೆನ್ನಾಗಿ ಆಲೋಚಿಸಬೇಕು.

೯೮. ಪ್ರಜೆಗಳಿಗೆ ಪ್ರೀತಿಯನ್ನು ಹುಟ್ಟಿಸುವ ಕಾರ್ಯಗಳನ್ನು ರಾಜನು ಕೈಗೊಳ್ಳಬೇಕು. ಅವರಿಗೆ ಅಸಮಾಧಾನವಾಗತಕ್ಕದನ್ನು ಪ್ರಯತ್ನಪಟ್ಟು ಬಿಡಬೇಕು.

೯೯. ಸೂರ್ಯವಂಶಶ್ರೇಷ್ಠನಾದ ಎಲೈ ಮನುಚಕ್ರವರ್ತೀ, ಲೋಕದಲ್ಲಿ ರಾಜರ ಸಂಪತ್ತೆಲ್ಲವೂ ಜನರ ಅನುರಾಗದಿಂದ ಹುಟ್ಟತಕ್ಕದು. ಆದುದರಿಂದ ಭೂಪತಿಗಳು ತಮ್ಮ ಪ್ರಜೆಗಳಲ್ಲಿ ಪ್ರೀತಿಸಂತೋಷಗಳು ಹುಟ್ಟುವಂತೆ ಪ್ರಯತ್ನಿಸಬೇಕು.

ಶ್ರೀಮತ್ಸ್ಯಮಹಾಪುರಾಣಂ

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ರಾಜಧರ್ಮದ ವರ್ಣನೆಯು ಪ್ರಾರಂಭವಾಗಿದೆ.

ರಾಜನು ದಕ್ಷರೂ ಗುಣವಂತರೂ ಆದ ಅಧಿಕಾರಿಗಳನ್ನು ಆರಿಸಿ ಅವರಿಗೆ ತಕ್ಕಂತಹ ಕಾರ್ಯಗಳನ್ನು ಕೊಡಬೇಕು. ದೂತರು, ಲೇಖಕರು, ನ್ಯಾಯವಿಮರ್ಶಕರು, ಕೋಶಾಧಿಕಾರಿಗಳು, ಗಜಗಳ ಮತ್ತು ಅಶ್ವಗಳ ಅಧಿಕಾರಿಗಳು ಇವರೆಲ್ಲರೂ ತಕ್ಕ ಅರ್ಹತೆಯನ್ನು ಪಡೆದವರಾಗಿರಬೇಕು. ಮಂತ್ರಿಗಳೊಡನೆ ಬೇರೆ ಬೇರೆಯಾಗಿ ಮಂತ್ರಾಲೋಚನೆ ನಡೆಸಿ ಕೊನೆಗೆ ತಾನೇ ಒಂದು ತೀರ್ಮಾನಕ್ಕೆ ಬರಬೇಕು. ಗುಣಶಾಲಿಗಳಾದ ವಿದ್ವಾಂಸರಿಂದ ನಾನಾವಿಧವಾದ ವಿದ್ಯೆಗಳನ್ನು ಗ್ರಹಿಸಬೇಕು. ಪರೀಕ್ಷೆಮಾಡದೆ ಯಾರಲ್ಲಿಯೂ ವಿಶೇಷವಾಗಿ ನಂಬಿಕೆಯಿಡಬಾರದು. ಗೂಢಚಾರರ ಮೂಲಕ ಅಧಿಕಾರಿಗಳ ಮತ್ತು ಪ್ರಜೆಗಳ ಗುಣಾವಗುಣಗಳನ್ನು ತಿಳಿದುಕೊಳ್ಳುತ್ತಿರಬೇಕು. ಪ್ರಜಾನುರಾಗವೇ ಸಕಲಸಂಪತ್ತುಗಳ ಮೂಲ. ರಾಜನು ಪ್ರಯತ್ನಪಟ್ಟು ಅದನ್ನು ಸಂಪಾದಿಸಬೇಕು.

ಶ್ರೀಮತ್ಸ್ಯಮಹಾಪುರಾಣದಲ್ಲಿ ರಾಜರ ಸಹಾಯಸಂಪತ್ತಿಯೆಂಬ
ಇನ್ನೂರಹದಿನ್ಯೈದನೆಯ ಅಧ್ಯಾಯವು ಮುಗಿದುದು.

## ಅಥ ಷೋಡಶಾಧಿಕದ್ವಿಶತತಮೋಽಧ್ಯಾಯಃ

|| ಮತ್ಸ್ಯ ಉವಾಚ ||

ಯಥಾನುವರ್ತಿತವ್ಯಂ ಸ್ಯಾನ್ಮನೋ ರಾಜ್ಞೋಽನುಜೀವಿಭಿಃ ।
ತಥಾ ತೇ ಕಥಯಿಷ್ಯಾಮಿ ನಿಬೋಧ ಗದತೋ ಮಮ || ೧ ||

ಜ್ಞಾತ್ವಾ ಸರ್ವಾತ್ಮನಾ ಕಾರ್ಯಂ ಸ್ವಶಕ್ತ್ಯಾ ರವಿನಂದನ ।
ರಾಜಾ ಯತ್ತು ವದೇದ್ವಾಕ್ಯಂ ಶ್ರೋತವ್ಯಂ ತತ್ಪ್ರಯತ್ನತಃ ।
ಆಕ್ಷಿಪ್ಯ ವಚನಂ ತಸ್ಯ ನ ವಕ್ತವ್ಯಂ ತಥಾ ವಚಃ || ೨ ||

ಅನುಕೂಲಂ ಪ್ರಿಯಂ ತಸ್ಯ ವಕ್ತವ್ಯಂ ಜನಸಂಸದಿ ।
ರಹೋಗತಸ್ಯ ವಕ್ತವ್ಯಮಪ್ರಿಯಂ ಯದ್ಧಿತಂ ಭವೇತ್ || ೩ ||

---

೧. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಆಶ್ರಿತವರ್ಗದವರು ರಾಜನ ಮನಸ್ಸನ್ನು ಹೇಗೆ ಅನುವರ್ತಿಸಿ ನಡೆಯಬೇಕೆಂಬ ವಿಷಯವನ್ನು ವಿವರಿಸಿ ಹೇಳುವೆನು ಕೇಳು.

೨. ಸೂರ್ಯಪುತ್ರನಾದ ಎಲೈ ಮನುಚಕ್ರವರ್ತೀ, ರಾಜನ ಅಭಿಪ್ರಾಯವನ್ನು ಚೆನ್ನಾಗಿ ತಿಳಿದು ತಮ್ಮ ಕೈಯಲ್ಲಾದಷ್ಟು ಮಟ್ಟಿಗೆ ನಿರ್ವಂಚನೆಯಾಗಿ ಅದನ್ನು ನಡೆಸಬೇಕು. ಅವನು ಹೇಳುವ ಮಾತನ್ನು ಗಮನವಿಟ್ಟು ಕೇಳಬೇಕು. ನಡುವೆ ಆಕ್ಷೇಪಣೆಗಳನ್ನೆತ್ತಿ ಉತ್ತರವನ್ನು ಕೊಡಬಾರದು.

೩. ಸಭೆಯ ಮಧ್ಯದಲ್ಲಿ ರಾಜನಿಗೆ ಅನುಕೂಲವಾಗಿಯೂ ಪ್ರಿಯವಾಗಿಯೂ ಮಾತನಾಡಬೇಕು. ರಹಸ್ಯದಲ್ಲಿ ಬೇಕಾದರೆ ಅಪ್ರಿಯವಾದುದನ್ನು ನುಡಿಯಬಹುದು. ಆದರೆ ಮಾತ್ರ ಅದು ಅವನಿಗೆ ಮುಂದೆ ಶ್ರೇಯಸ್ಸನ್ನು ತರತಕ್ಕುದಾಗಿರಬೇಕು.

ಪರಾರ್ಥಮಸ್ಯ ವಕ್ತವ್ಯಂ ಸ್ವಸ್ಥೇ ಚೇತಸಿ ಪಾರ್ಥಿವ ।
ಸ್ವಾರ್ಥಃ ಸುಹೃದ್ಭಿರ್ವಕ್ತವ್ಯೋ ನ ಸ್ವಯಂ ತು ಕಥಂಚನ ॥ ೪ ॥

ಕಾರ್ಯಾತಿಪಾತಃ ಸರ್ವೇಷು ರಕ್ಷಿತವ್ಯಃ ಪ್ರಯತ್ನತಃ ।
ನ ಚ ಹಿಂಸ್ಯಂ ಧನಂ ಕಿಂಚಿನ್ನಿಯುಕ್ತೇನ ಚ ಕರ್ಮಣಿ ॥ ೫ ॥

ನೋಪೇಕ್ಷ್ಯಸ್ತಸ್ಯ ಮಾನಶ್ಚ ತಥಾ ರಾಜ್ಞಃ ಪ್ರಿಯೋ ಭವೇತ್ ।
ರಾಜ್ಞಶ್ಚ ನ ತಥಾ ಕಾರ್ಯಂ ವೇಷಭಾಷಿತಚೇಷ್ಟಿತಂ ॥ ೬ ॥

ರಾಜಲೀಲಾ ನ ಕರ್ತವ್ಯಾ ತದ್ವಿದ್ವಿಷ್ಟಂ ಚ ವರ್ಜಯೇತ್ ।
ರಾಜ್ಞಃ ಸಮೋಽಧಿಕೋ ವಾ ನ ಕಾರ್ಯೋ ವೇಷೋ ವಿಜಾನತಾ ॥ ೭ ॥

---

೪. ರಾಜಾ, ಅರಸನ ಮನಸ್ಸು ಶಾಂತವಾಗಿರುವಾಗ ಇತರರ ವಿಷಯವನ್ನು ಅವನೊಡನೆ ಹೇಳಬೇಕು. ತನ್ನ ವಿಷಯವನ್ನು ಅವನ ಮಿತ್ರರ ಮೂಲಕ ತಿಳಿಯ ಪಡಿಸಬೇಕು. ಏನೇ ಆಗಲಿ ತನಗೆ ಆಗಬೇಕಾದ ಪ್ರಯೋಜನದ ವಿಚಾರವನ್ನು ತಾನೇ ಪ್ರಭುವಿನಲ್ಲಿ ಹೇಳಿಕೊಳ್ಳಬಾರದು.

೫. ಎಲ್ಲ ಕಾರ್ಯಗಳನ್ನೂ ಆಯಾ ಸಮಯಗಳಲ್ಲಿಯೇ ಮಾಡಲು ಯತ್ನಿಸಬೇಕು. ರಾಜಕಾರ್ಯದಲ್ಲಿ ನಿಯುಕ್ತನಾದವನು ಇತರರನ್ನು ಹಿಂಸಿಸಿ ತನಗೆ ನ್ಯಾಯ ಪ್ರಾಪ್ತವಲ್ಲದ ಧನವನ್ನು ತೆಗೆದುಕೊಳ್ಳಬಾರದು.

೬. ರಾಜನ ಗೌರವಕ್ಕೆ ಕುಂದಕವನ್ನು ತರಬಾರದು. ಆತನ ಪ್ರೀತಿಗೆ ಪಾತ್ರನಾಗಲು ಇದೇ ದಾರಿ. ಪ್ರಭುವಿನ ವೇಷ, ಭಾಷೆ, ಕಾರ್ಯ ಇವನ್ನು ಅನುಕರಿಸಿ ತೋರಬಾರದು.

೭. ರಾಜನ ಆಟವನ್ನು ಆಡಬಾರದು. ಅವನ ಹಗೆಗಳೊಡನೆ ಸೇರ ಬಾರದು. ಅವನಿಗೆ ಸಮಾನವಾಗಿ ಅಥವಾ ಅಧಿಕವಾಗಿ ಉಡಿಗೆತೊಡಗೆಗಳನ್ನು ಧರಿಸಬಾರದು.

ದ್ಯೂತಾದಿಷು ತಥೈವಾಸ್ಯ ಕೌಶಲಂ ತು ಪ್ರದರ್ಶಯೇತ್ ।
ಪ್ರದರ್ಶ್ಯ ಕೌಶಲಂ ಚಾಸ್ಯ ರಾಜಾನಂ ತು ವಿಶೇಷಯೇತ್ ॥ ೮ ॥

ಅಂತಃಪುರಜನಾಧ್ಯಕ್ಷೈರ್ವೈರಿದೂತೈರ್ನಿರಾಕೃತೈಃ ।
ಸಂಸರ್ಗಂ ನ ವ್ರಜೇದ್ರಾಜನ್ವಿನಾ ಪಾರ್ಥಿವಶಾಸನಾತ್ ॥ ೯ ॥

ನಿಃಸ್ನೇಹತಾಂ ಚಾವಮಾನಂ ಪ್ರಯತ್ನೇನ ತು ಗೋಪಯೇತ್ ।
ಯಚ್ಚ ಗುಹ್ಯಂ ಭವೇದ್ರಾಜ್ಞೋ ನ ತಲ್ಲೋಕೇ ಪ್ರಕಾಶಯೇತ್ ॥೧೦॥

ನೃಪೇಣ ಶ್ರಾವಿತಂ ಯತ್ಸ್ಯಾದ್ವಾಚ್ಯಾವಾಚ್ಯಂ ನೃಪೋತ್ತಮ ।
ನ ತತ್ಸಂಶ್ರಾವಯೇಲ್ಲೋಕೇ ತಥಾ ರಾಜ್ಞೋಽಪ್ರಿಯೋ ಭವೇತ್ ॥೧೧॥

ಆಜ್ಞಾಪ್ಯಮಾನೇ ವಾನ್ಯಸ್ಮಿನ್ ಸಮುತ್ಥಾಯ ತ್ವರಾನ್ವಿತಃ ।
ಕಿಮಹಂ ಕರವಾಣೀತಿ ವಾಚ್ಯೋ ರಾಜಾ ವಿಜಾನತಾ ॥೧೨॥

---

೮. ಜೂಜು, ಬೇಟೆ ಮುಂತಾದುವುಗಳಲ್ಲಿ ತನ್ನ ಜಾಣ್ಮೆಯನ್ನು ತೋರ್ಪ ಡಿಸಬೇಕು. ಹಾಗೆ ತೋರಿಸಿದರೂ ತನಗಿಂತಲೂ ರಾಜನೇ ಕುಶಲನೆಂಬುದನ್ನು ವ್ಯಕ್ತಪಡಿಸಬೇಕು.

೯. ರಾಜಾ, ಅರಸನ ಅಪ್ಪಣೆಯಿಲ್ಲದೆ ಅವನ ರಾಣಿವಾಸದ ಮುಖ್ಯಾಧಿಕಾರಿ ಗಳೊಡನೆಯೂ, ಶತ್ರುಗಳ ಕಡೆಯ ದೂತರೊಡನೆಯೂ, ಅವನ ತಿರಸ್ಕಾರಕ್ಕೆ ಗುರಿಯಾದವರೊಡನೆಯೂ ಸಂಬಂಧವನ್ನು ಬೆಳಸಬಾರದು.

೧೦. ಸ್ನೇಹರಾಹಿತ್ಯ, ಅವಮಾನ ಇವುಗಳನ್ನು ಪ್ರಯತ್ನ ಪೂರ್ವಕವಾಗಿ ಮುಚ್ಚಿಡಬೇಕು. ರಾಜನ ಸಂಬಂಧವಾದ ರಹಸ್ಯವಿಚಾರಗಳನ್ನು ಉಳಿದವರಿಗೆ ಬಹಿರಂಗಪಡಿಸಬಾರದು.

೧೧. ಎಲೈ ರಾಜೋತ್ತಮಾ, ಅರಸನು ಹೇಳಿದ ಸಣ್ಣ ಪುಟ್ಟ ಮಾತು ಗಳನ್ನು ಜನರೊಡನೆ ಹೇಳಬಾರದು. ಅದರಿಂದ ಅವನ ಅಪ್ರೀತಿಗೆ ಪಾತ್ರ ನಾಗವನು.

೧೨. ದೊರೆಯು ಆಜ್ಞಾಪಿಸುವ ವೇಳೆಯಲ್ಲಿ ಅಥವಾ ಮತ್ತೊಂದು ಸಮಯದಲ್ಲಿ ತ್ವರೆಯಿಂದ ಎದ್ದು ನಿಂತು "ಏನಪ್ಪಣೆ'' ಎಂದು ಕೇಳಬೇಕು. ಇದು ವಿವೇಕಿಯ ಲಕ್ಷಣ.

ಕಾರ್ಯಾವಸ್ಥಾಂ ಚ ವಿಜ್ಞಾಯ ಕಾರ್ಯಮೇವ ಯಥಾ ಭವೇತ್ ।
ಸತತಂ ಕ್ರಿಯಮಾಣೇಽಸ್ಮಿಂಲ್ಲಾಘವಂ ತು ವ್ರಜೇದ್ಧ್ರುವಂ ||೧೩||

ರಾಜ್ಞಃ ಪ್ರಿಯಾಣಿ ವಾಕ್ಯಾನಿ ನ ಚಾತ್ಯರ್ಥಂ ಪುನಃ ಪುನಃ ।
ನ ಹಾಸ್ಯಶೀಲಸ್ತು ಭವೇನ್ನ ಚಾಪಿ ಭ್ರುಕುಟೀಮುಖಃ ||೧೪||

ನಾತಿವಕ್ತಾ ನ ನಿರ್ವಕ್ತಾ ನ ಚ ಮಾತ್ಸರಿಕಸ್ತಥಾ ।
ಆತ್ಮಸಂಭಾವಿತಶ್ಚೈವ ನ ಭವೇತ್ತು ಕಥಂಚನ ||೧೫||

ದುಷ್ಕೃತಾನಿ ನರೇಂದ್ರಸ್ಯ ನ ತು ಸಂಕೀರ್ತಯೇತ್ಕ್ವಚಿತ್ ।
ವಸ್ತ್ರಮಸ್ತ್ರಮಲಂಕಾರಂ ರಾಜ್ಞಾ ದತ್ತಂ ತು ಧಾರಯೇತ್ ||೧೬||

ಔದಾರ್ಯೇಣ ನ ತದ್ದೇಯಮನ್ಯಸ್ಮೈ ಭೂತಿಮಿಚ್ಛತಾ ।
ತತ್ರೈವೋಪಾಸನಂ ಕಾರ್ಯಂ ದಿವಾ ಸ್ವಪ್ನಂ ನ ಕಾರಯೇತ್ ||೧೭||

---

೧೩. ರಾಜನು ಕಾರ್ಯಾಂತರದಲ್ಲಿ ನಿರತನಾಗಿದ್ದರೆ ತಾನು ಮಾಡಬೇಕಾದ ಕೆಲಸವನ್ನು ಅವನ ಅಪ್ಪಣೆಗಾಗಿ ಕಾಯದೆ ಯಥಾವತ್ತಾಗಿ ನಡೆಸಬೇಕು. ಆದರೆ ಯಾವಾಗಲೂ ಹೀಗೆಯೇ ಮಾಡಬಾರದು. ಆದರಿಂದ ಅವನಿಗೆ ಕೋಪ ವುಂಟಾಗುವುದು. ಸಂಶಯವಿಲ್ಲ.

೧೪. ರಾಜನಿಗೆ ಪ್ರಿಯವಾದ ಮಾತುಗಳನ್ನು ಆಡಬೇಕು. ಆದರೆ ಮಿತಿಮೀರಿ ಪುನಃಪುನಃ ಹೇಳಬಾರದು. ನಕಲಿಯ ಸ್ವಭಾವದವನಾಗಬಾರದು. ಹುಬ್ಬುಗಂಟಿಕ್ಕಿಕೊಳ್ಳಲೂ ಬಾರದು.

೧೫. ಹೆಚ್ಚು ಮಾತಾಡುವುದು, ಮಾತಾಡದೆಯೇ ಇರುವುದು, ಮತ್ಸರವನ್ನು ತೋರುವುದು, ತಾನೇ ದೊಡ್ಡವನೆಂದು ತಿಳಿದುಕೊಳ್ಳುವುದು ಈ ಗುಣಗಳನ್ನು ಖಂಡಿತವಾಗಿ ಬಿಡಬೇಕು.

೧೬. ರಾಜನು ಮಾಡಿರಬಹುದಾದ ಅಕಾರ್ಯಗಳನ್ನು ಎಲ್ಲಿಯೂ ಹೇಳ ಬಾರದು. ಅವನು ಕೊಟ್ಟ ವಸ್ತ್ರ, ಅಸ್ತ್ರ, ಅಲಂಕಾರ ಇವನ್ನು ಧರಿಸಬೇಕು.

೧೭. ಶ್ರೇಯಸ್ಸನ್ನು ಬಯಸುವವನು ರಾಜನು ಕೊಟ್ಟ ವಸ್ತ್ರಾದಿಗಳನ್ನು ಔದಾರ್ಯದಿಂದ ಇತರರಿಗೆ ದಾನಮಾಡಿ ಬಿಡಬಾರದು. ಅರಸನ ಬಳಿಯಲ್ಲೇ ಸೇವೆ ಮಾಡುತ್ತಿರಬೇಕು. ಹಗಲು ಹೊತ್ತು ನಿದ್ದೆಮಾಡಬಾರದು.

ನಾನಿರ್ದಿಷ್ಟೇ ತಥಾ ದ್ವಾರೇ ಪ್ರವಿಶೇತ್ತು ಕಥಂಚನ ।
ನ ಚ ಪಶ್ಯೇತ್ತು ರಾಜಾನಮಯೋಗ್ಯಾಸು ಚ ಭೂಮಿಷು ॥೧೮॥

ರಾಜ್ಞಸ್ತು ದಕ್ಷಿಣೇ ಪಾರ್ಶ್ವೇ ವಾಮೇ ಚೋಪವಿಶೇತ್ತಥಾ ।
ಪುರಸ್ತಾಚ್ಚ ತಥಾ ಪಶ್ಚಾದಾಸನಂ ತು ವಿವರ್ಜಯೇತ್ ॥೧೯॥

ಜೃಂಭಾಂ ನಿಷ್ಠೀವನಂ ಕಾಸಂ ಕೋಪಂ ಪರ್ಯಸ್ತಿಕಾಶ್ರಯಂ
ಭೃಕುಟಿಂ ವಾಂತಮುದ್ಗಾರಂ ತತ್ಸಮೀಪೇ ವಿವರ್ಜಯೇತ್ ॥೨೦॥

ಸ್ವಯಂ ತತ್ರ ನ ಕುರ್ವೀತ ಸ್ವಗುಣಾಖ್ಯಾಪನಂ ಬುಧಃ ।
ಸ್ವಗುಣಾಖ್ಯಾಪನೇ ಯುಕ್ತ್ಯಾ ಪರಮೇವ ಪ್ರಯೋಜಯೇತ್ ॥೨೧॥

ಹೃದಯಂ ನಿರ್ಮಲಂ ಕೃತ್ವಾ ಪರಾಂ ಭಕ್ತಿಮುಪಾಶ್ರಿತೈಃ ।
ಅನುಜೀವಿಗಣೈರ್ಭಾವ್ಯಂ ನಿತ್ಯಂ ರಾಜ್ಞಾಮತಂದ್ರಿತೈಃ ॥೨೨॥

---

೧೮. ಇತರರಿಗೆ ಪ್ರವೇಶವಿಲ್ಲದಿರುವ ಬಾಗಿಲಲ್ಲಿ ಖಂಡಿತವಾಗಿ ಒಳ ಹೊಗಬಾರದು. ಅರಸನನ್ನು ಅನರ್ಹವಾದ ಸ್ಥಳಗಳಲ್ಲಿ ಕಾಣಬಾರದು.

೧೯. ದೊರೆಯ ಬಲಗಡೆಯೋ ಎಡಗಡೆಯೋ ಕುಳಿತುಕೊಳ್ಳಬೇಕು. ಮುಂದೆ ಅಥವಾ ಹಿಂದೆ ಕುಳಿತುಕೊಳ್ಳಬಾರದು.

೨೦. ಆಕಳಿಸುವುದು, ಉಗುಳುವುದು, ಕೆಮ್ಮುವುದು, ಸಿಟ್ಟಾಗುವುದು, ವೀರಾಸನದಲ್ಲಿ ಕುಳಿತುಕೊಳ್ಳುವುದು, ಕ್ಯಾಕರಿಸುವುದು, ವಾಂತಿಮಾಡುವುದು ಇವನ್ನು ಅವನ ಸಮೀಪದಲ್ಲಿ ಮಾಡಬಾರದು.

೨೧. ಪ್ರಾಜ್ಞನು ರಾಜನ ಮುಂದೆ ತನ್ನ ಗುಣಗಳನ್ನು ತಾನೇ ಹೊಗಳಿಕೊಳ್ಳಬಾರದು. ಹಾಗೆ ಹೇಳಬೇಕಾಗಿ ಬಂದರೆ ಯುಕ್ತಿಯಿಂದ ಮತ್ತೊಬ್ಬನನ್ನೇ ಆ ಕಾರ್ಯಕ್ಕೆ ನಿಯೋಜಿಸಬೇಕು.

೨೨. ರಾಜನ ಆಶ್ರಿತರು ನಿರ್ಮಲ ಹೃದಯದಿಂದಲೂ ಅತಿಶಯವಾದ ಭಕ್ತಿಯಿಂದಲೂ ಕೂಡಿ ಯಾವಾಗಲೂ ಜಾಗರೂಕತೆಯಿಂದ ಇರಬೇಕು.

ಶಾಠ್ಯಂ ಲೌಲ್ಯಂ ಚ ಪೈಶುನ್ಯಂ ನಾಸ್ತಿಕ್ಯಂ ಕ್ಷುದ್ರತಾ ತಥಾ ।
ಚಾಪಲ್ಯಂ ಚ ಪರಿತ್ಯಾಜ್ಯಂ ನಿತ್ಯಂ ರಾಜ್ಞೋಽನುಜೀವಿಭಿಃ ॥೨೩॥

ಶ್ರುತೇನ ವಿದ್ಯಾಶೀಲೈಶ್ಚ ಸಂಯೋಜ್ಯಾತ್ಮಾನಮಾತ್ಮನಾ ।
ರಾಜಸೇವಾಂ ತತಃ ಕುರ್ಯಾದ್ಭೂತಯೇ ಭೂತಿವರ್ಧನೀಂ ॥೨೪॥

ನಮಸ್ಕಾರ್ಯಾಃ ಸದಾ ಚಾಸ್ಯ ಪುತ್ರವಲ್ಲಭಮಂತ್ರಿಣಃ ।
ಸಚಿವೈಶ್ಚಾಸ್ಯ ವಿಶ್ವಾಸೋ ನ ತು ಕಾರ್ಯಂ ಕಥಂಚನ ॥೨೫॥

ಅಪೃಷ್ಟಶ್ಚಾಸ್ಯ ನ ಬ್ರೂಯಾತ್ಕಾಮಂ ಬ್ರೂಯಾತ್ತಥಾ ಯದಿ ।
ಹಿತಂ ತಥ್ಯಂ ಚ ವಚನಂ ಹಿತೈಃ ಸಹ ಸುನಿಶ್ಚಿತಂ ॥೨೬॥

ಚಿತ್ತಂ ಚೈವಾಸ್ಯ ವಿಜ್ಞೇಯಂ ನಿತ್ಯಮೇವಾನುಜೀವಿನಾ ।
ಭರ್ತುರಾರಾಧನಂ ಕುರ್ಯಾಚ್ಚಿತ್ತಜ್ಞೋ ಮಾನವಃ ಸುಖಂ ॥೨೭॥

---

೨೩. ಅರಸನ ಅನುಚರರು ಶಾಠ್ಯ, ಚಾಂಚಲ್ಯ, ಚಾಡಿಕೋರತನ, ನಾಸ್ತಿಕತೆ, ಕ್ಷುದ್ರಸ್ವಭಾವ, ಚಾಪಲ್ಯ ಈ ಗುಣಗಳನ್ನು ಸದಾ ಬಿಡಬೇಕು.

೨೪. ವೇದಗಳನ್ನೂ ನ್ಯಾಯಾದಿಶಾಸ್ತ್ರಗಳನ್ನೂ ಕಲಿತು ಒಳ್ಳೆಯ ನಡತೆವಂತನಾಗಿ ರಾಜಸೇವೆಯನ್ನು ಕೈಗೊಳ್ಳಬೇಕು. ಅದು ಸಂಪತ್ತನ್ನೂ ಶ್ರೇಯಸ್ಸನ್ನೂ ಬೆಳೆಸುವುದು.

೨೫. ರಾಜನ ಪುತ್ರರೂ, ಪ್ರೀತಿಪಾತ್ರರೂ, ಮಂತ್ರಿಗಳೂ ಯಾವಾಗಲೂ ಸತ್ಕಾರಕ್ಕೆ ಅರ್ಹರು. ಆದರೆ ಅವನ ಮಂತ್ರಿಗಳೊಡನೆ ವಿಶ್ವಾಸವನ್ನು ಮಾತ್ರ ಬೆಳೆಸಬಾರದು.

೨೬. ಪ್ರಶ್ನೆಮಾಡದಿರುವಾಗ ಪ್ರಭುವಿಗೆ ಏನೂ ಹೇಳಬಾರದು. ಒಂದು ವೇಳೆ ಹೇಳುವುದಾದರೆ ಹಿತಕರವೂ ನಂಬುವುದಕ್ಕೆ ಅರ್ಹವೂ, ನಿಶ್ಚಯವೂ ಆದ ಮಾತನ್ನು ಅವನ ಆಪ್ತರ ಸಂಗಡ ಹೇಳಬೇಕು.

೨೭. ಆಶ್ರಿತನು ಎಡೆಬಿಡದೆ ಪ್ರಭುವಿನ ಮನೋವೃತ್ತಿಯನ್ನರಿಯಬೇಕು. ಮನಸ್ಸನ್ನು ತಿಳಿದು ಅವನ ಸೇವೇಯನ್ನು ಮಾಡಬೇಕು. ಅದರಿಂದ ಸುಖವುಂಟು.

ರಾಗಾಪರಾಗೌ ಚೈವಾಸ್ಯ ವಿಜ್ಞೇಯೌ ಭೂತಿಮಿಚ್ಛತಾ ।
ತ್ಯಜೇದ್ವಿರಕ್ತೋ ನೃಪತೀ ರಕ್ತೋ ವೃತ್ತಿಂ ತು ಕಾರಯೇತ್ ॥೨೮॥

ವಿರಕ್ತಃ ಕಾರಯೇನ್ನಾಶಂ ವಿಪಕ್ಷಾಭ್ಯುದಯಂ ತಥಾ ।
ಆಶಾವರ್ಧನಕಂ ಕೃತ್ವಾ ಫಲನಾಶಂ ಕರೋತಿ ಚ ॥೨೯॥

ಅಕೋಪೋಽಪಿ ಸಕೋಪಾಭಃ ಪ್ರಸನ್ನೋಽಪಿ ಚ ನಿಷ್ಫಲಃ ।
ವಾಕ್ಯಂ ಚ ಸಮದಂ ವಕ್ತಿ ವೃತ್ತಿಚ್ಛೇದಂ ಕರೋತಿ ವೈ ॥೩೦॥

ಪ್ರವೇಶವಾಕ್ಯಮುದಿತೋ ನ ಚ ಸಂಭಾವಯೇತ್ತಥಾ ।
ಆರಾಧನಾಸು ಸರ್ವಾಸು ಸುಪ್ತವಚ್ಚ ವಿಚೇಷ್ಟಿತೇ ॥೩೧॥

ಕಥಾಸು ದೋಷಂ ಕ್ಷಿಪತಿ ವಾಕ್ಯಭಂಗಂ ಕರೋತಿ ಚ ।
ಲಕ್ಷ್ಯತೇ ವಿಮುಖಶ್ಚೈವ ಗುಣಸಂಕೀರ್ತನೇಽಪಿ ಚ ॥೩೨॥

---

೨೮. ಶ್ರೇಯಸ್ಸನ್ನು ಕೋರುವವನು ಇವನ ಪ್ರೀತಿ ಮತ್ತು ಅಪ್ರೀತಿಗಳನ್ನು ತಿಳಿದುಕೊಳ್ಳಬೇಕು. ಪ್ರೀತಿಯಿಲ್ಲದ ರಾಜನು ಕೈ ಬಿಡುವನು. ಅನುರಕ್ತನಾದವನು ಜೀವನವನ್ನು ಕಲ್ಪಿಸುವನು.

೨೯. ಪ್ರೀತಿಯಿಲ್ಲದ ಅರಸು ಕೇಡನ್ನು ತರುವನು. ಶತ್ರುಗಳಿಗೆ ಅಭಿವೃದ್ಧಿಯನ್ನುಂಟುಮಾಡುವನು. ಆಸೆಯನ್ನು ಹೆಚ್ಚಿಸಿ ಕೊನೆಗೆ ನಿರಾಶೆಗೊಳಿಸುವನು.

೩೦. ಕೋಪವಿಲ್ಲದಿದ್ದರೂ ಕೋಪಿಷ್ಟನಂತೆ ಕಾಣುವನು. ಪ್ರಸನ್ನನಾದರೂ ಫಲವನ್ನು ಕೊಡನು. ಸೊಕ್ಕಿನ ಮಾತನ್ನು ಆಡುವನು. ಕೊನೆಗೆ ಜೀವನಕ್ಕೂ ಕಲ್ಲುಹಾಕುವನು.

೩೧. ಸಮೀಪಕ್ಕೆ ಹೋಗಿ ಮಾತನ್ನು ಪ್ರಾರಂಭಿಸಿದಾಗ ಪ್ರೀತಿಗೊಂಡವನಂತೆ ಕಾಣುವನು. ಆದರೆ ಆದೇ ರೀತಿಯಲ್ಲಿ ಗೌರವಿಸುವುದಿಲ್ಲ. ಎಲ್ಲ ಉಪಚಾರಗಳನ್ನು ಮಾಡುತ್ತಿದ್ದರೂ ನಿದ್ದೆಯಲ್ಲಿದ್ದವನಂತೆ ನಟಿಸುತ್ತಾನೆ.

೩೨. ಮಾತುಗಳಲ್ಲಿ ತಪ್ಪುಗಳನ್ನು ಹುಡುಕುತ್ತಾನೆ. ನಡುವೆ ಬಾಯಿಹಾಕಿ ಮಾತನ್ನು ಮುಂದುವರಿಸದಂತೆ ಮಾಡುತ್ತಾನೆ. ಗುಣಗಳನ್ನು ಹೊಗಳುತ್ತಿದ್ದರೂ ಆದರವಿಲ್ಲದವನಂತೆ ತೋರ್ಪಡಿಸಿಕೊಳ್ಳುತ್ತಾನೆ.

ದೃಷ್ಟಿಂ ಕ್ಷಿಪತಿ ಚಾನ್ಯತ್ರ ಕ್ರಿಯಮಾಣೇ ಚ ಕರ್ಮಣಿ ।
ವಿರಕ್ತಲಕ್ಷಣಂ ಚೈತಚ್ಛೃಣು ರಕ್ತಸ್ಯ ಲಕ್ಷಣಂ ॥೩೩॥

ದೃಷ್ಟ್ವಾ ಪ್ರಸನ್ನೋ ಭವತಿ ವಾಕ್ಯಂ ಗೃಹ್ಣಾತಿ ಚಾದರಾತ್ ।
ಕುಶಲಾದಿಪರಿಪ್ರಶ್ನಂ ಸಂಪ್ರಯಚ್ಛತಿ ಚಾಸನಂ ॥೩೪॥

ವಿವಿಕ್ತದರ್ಶನೇ ಚಾಸ್ಯ ರಹಸ್ಯೇನಂ ನ ಶಂಕತೇ ।
ಜಾಯತೇ ಹೃಷ್ಟವದನಃ ಶ್ರುತ್ವಾ ತಸ್ಯ ತು ತತ್ಕಥಾಂ ॥೩೫॥

ಅಪ್ರಿಯಾಣ್ಯಪಿ ವಾಕ್ಯಾನಿ ತದುಕ್ತಾನ್ಯಭಿನಂದತೇ ।
ಉಪಾಯನಂ ಚ ಗೃಹ್ಣಾತಿ ಸ್ತೋಕಮಪ್ಯಾದರಾತ್ತಥಾ ॥೩೬॥

ಕಥಾಂತರೇಷು ಸ್ಮರತಿ ಪ್ರಹೃಷ್ಟವದನಸ್ತಥಾ ।
ಇತಿ ರಕ್ತಸ್ಯ ಕರ್ತವ್ಯಾ ಸೇವಾ ರವಿಕುಲೋದ್ವಹ ।
ಆಪತ್ಸು ನ ತ್ಯಜೇತ್ಪೂರ್ವಂ ವಿರಕ್ತಮಪಿ ಸೇವಿತಂ ॥೩೭॥

---

೩೩. ಹೇಳಿದ ಕೆಲಸವನ್ನು ಮಾಡುತ್ತಿದ್ದರೂ ನೋಟವನ್ನು ಬೇರೆಕಡೆ ಬೀರುತ್ತಾನೆ. ಇದೆಲ್ಲ ಪ್ರೀತಿಯಿಲ್ಲದ ಅರಸನ ಲಕ್ಷಣವಾಯಿತು. ಇನ್ನು ಸುಪ್ರೀತನಾದವನ ಲಕ್ಷಣವನ್ನು ಕೇಳು.

೩೪. ನೋಡಿದ ಕೂಡಲೆ ಪ್ರಸನ್ನನಾಗುತ್ತಾನೆ. ಹೇಳಿದ ಮಾತನ್ನು ಆದರದಿಂದ ಕೇಳುತ್ತಾನೆ. ಕುಶಲ ಪ್ರಶ್ನೆಗಳನ್ನು ಮಾಡುತ್ತಾನೆ. ಆಸನವನ್ನಿತ್ತು ಕುಳಿತುಕೊಳ್ಳುವಂತೆ ಹೇಳುತ್ತಾನೆ.

೩೫. ಏಕಾಂತಸ್ಥಳಗಳಲ್ಲಿ ರಹಸ್ಯವಾಗಿ ನೋಡಿದರೂ ಇವನ ವಿಷಯದಲ್ಲಿ ಸಂದೇಹಪಡುವದಿಲ್ಲ. ಆಶ್ರಿತನು ಮಾಡಿದ ತನ್ನ ಗುಣಕಥನವನ್ನು ಕೇಳಿ ಮುಖದಲ್ಲಿ ಹರ್ಷವನ್ನು ವ್ಯಕ್ತಪಡಿಸುವನು.

೩೬. ಅನುಚರನು ಆಡಿದ ಮಾತುಗಳು ಅಪ್ರಿಯವಾಗಿದ್ದರೂ ಶ್ಲಾಘಿಸುವನು. ಕಾಣಿಕೆಯು ಅಲ್ಪವಾಗಿದ್ದರೂ ಆದರದಿಂದ ಸ್ವೀಕರಿಸುವನು.

೩೭. ಬೇರೆ ಸಂದರ್ಭಗಳಲ್ಲಿ ನೆನಪು ಬಂದಾಗ ಮುಖದಲ್ಲಿ ಸಂತೋಷವನ್ನು ತೋರ್ಪಡಿಸುವನು. ಎಲೈ ಮನುಚಕ್ರವರ್ತೀ, ಹೀಗೆ ಅನುರಕ್ತನಾದ ರಾಜನ ಸೇವೆಯನ್ನು ಮಾಡಬೇಕು. ತಾನು ಹಿಂದೆ ಸೇವೆಮಾಡಿದ್ದ ರಾಜನು ಪ್ರೀತಿಯಿಲ್ಲದವನಾದರೂ ಕಷ್ಟಕಾಲಗಳಲ್ಲಿ ಅವನನ್ನು ತೊರೆಯಬಾರದು.

**ಮಿತ್ರಂ ನ ಚಾಪತ್ಸು ತಥಾ ಚ ಭೃತ್ಯಂ**
**ತ್ಯಜಂತಿ ಯೇ ನಿರ್ಗುಣಮಪ್ರಮೇಯಂ ।**
**ವಿಭುಂ ವಿಶೇಷೇಣ ಚ ತೇ ವ್ರಜಂತಿ**
**ಸುರೇಂದ್ರಧಾಮಾಮರವೃಂದಜುಷ್ಟಂ ॥೩೮॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ರಾಜಧರ್ಮೇಽನುಜೀವಿವರ್ತನಂ ನಾಮ ಷೋಡಶಾಧಿಕದ್ವಿಶತತಮೋಽಧ್ಯಾಯಃ**

---

೩೮. ಕಷ್ಟಕಾಲಗಳಲ್ಲಿ ಸ್ನೇಹಿತನನ್ನೂ ಭೃತ್ಯನನ್ನೂ ಯಾರು ಕೈ ಬಿಡುವುದಿಲ್ಲವೋ, ತ್ರಿಗುಣಾತೀತನೂ ಅಪ್ರಮೇಯನೂ ಆದ ಸರ್ವೇಶ್ವರನೇ ರಾಜನೆಂದು ತಿಳಿದು ಯಾರು ಅವನನ್ನು ವಿಶೇಷವಾಗಿ ಸೇವಿಸುವರೋ ಅಂತಹವರು ದೇವೇಂದ್ರನ ಭವನವನ್ನು ಸೇರಿ ದೇವತೆಗಳಿಂದ ಸತ್ಕಾರವನ್ನು ಪಡೆಯುವರು.

## ಅಧ್ಯಾಯದ ಸಾರಾಂಶ

ಆಶ್ರಿತರು ರಾಜನಲ್ಲಿ ನಡೆದುಕೊಳ್ಳಬೇಕಾದ ರೀತಿಯನ್ನು ಈ ಅಧ್ಯಾಯದಲ್ಲಿ ಹೇಳಿದೆ.

ಅನುಚರರು ಪ್ರಭುವಿಗೆ ವಿಧೇಯರಾಗಿದ್ದುಕೊಂಡು ಆತನ ಅಪ್ಪಣೆಯನ್ನು ಸಂತೋಷದಿಂದ ನಡೆಸಬೇಕು. ಅವನ ಮನಸ್ಸಿಗೆ ಅಸಮಾಧಾನವಾಗುವ ಕಾರ್ಯವೇನನ್ನೂ ಮಾಡಬಾರದು. ಅವನಿಗೆ ಸಮಾನವಾಗಿ ಕುಳಿತುಕೊಳ್ಳುವುದು, ಅವನಂತೆಯೇ ಉಡಿಗೆ ತೊಡಿಗೆಗಳನ್ನು ಧರಿಸುವುದು ಇದೆಲ್ಲ ತಪ್ಪು. ಕೇಳದಿರುವಾಗ ತಾನಾಗಿ ಯಾವುದನ್ನೂ ಹೇಳಲು ಹೋಗಬಾರದು. ದೊರೆಗೆ ತನ್ನಲ್ಲಿ ಪ್ರೀತಿಯಿದೆ ಅಥವಾ ಇಲ್ಲವೆಂಬುದು ಅವನ ನಡತೆಯಿಂದಲೇ ಗೊತ್ತಾಗುತ್ತದೆ. ಸರ್ವೇಶ್ವರನೇ ರಾಜನ ರೂಪದಿಂದಿರುವನೆಂದು ತಿಳಿಯಬೇಕು. ಕಷ್ಟಕಾಲಗಳಲ್ಲಿ ಆತನನ್ನು ತೊರೆಯಬಾರದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ರಾಜಧರ್ಮದಲ್ಲಿ ರಾಜನ ಅನುಜೀವಿಗಳ ವರ್ತನವೆಂಬ ಇನ್ನೂರಹದಿನಾರನೆಯ ಅಧ್ಯಾಯವು ಮುಗಿದುದು.

## ಅಥ ಸಪ್ತದಶಾಧಿಕದ್ವಿಶತತಮೋಽಧ್ಯಾಯಃ

॥ ಮತ್ಸ್ಯ ಉವಾಚ ॥

ರಾಜಾ ಸಹಾಯಸಂಯುಕ್ತಃ ಪ್ರಭೂತಯುವಸೇಂಧನಂ ।
ರಮ್ಯಮಾನತಸಾಮಂತಂ ಮಧ್ಯಮಂ ದೇಶಮಾವಸೇತ್ ॥ ೧ ॥

ವೈಶ್ಯಶೂದ್ರಜನಪ್ರಾಯಮನಾಹಾರ್ಯಂ ತಥಾ ಪರೈಃ ।
ಕಿಂಚಿದ್ಬ್ರಾಹ್ಮಣಸಂಯುಕ್ತಂ ಬಹುಕರ್ಮಕರಂ ತಥಾ ॥ ೨ ॥

ಅದೇವಮಾತೃಕಂ ರಮ್ಯಮನುರಕ್ತಜನಾನ್ವಿತಂ ।
ಕರೈರಪೀಡಿತಂ ಚಾಪಿ ಬಹುಪುಷ್ಪಫಲಂ ತಥಾ ॥ ೩ ॥

ಅಗಮ್ಯಂ ಪರಚಕ್ರಾಣಾಂ ತದ್ವಾಸಗೃಹಮಾಪದಿ ।
ಸಮದುಃಖಸುಖಂ ರಾಜ್ಞಃ ಸತತಂ ಪ್ರಿಯಮಾಸ್ಥಿತಂ ॥ ೪ ॥

---

೧. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಸಹಾಯಸಂಪತ್ತಿಗಳಿಂದ ಕೂಡಿದ ರಾಜನು ವಿಧೇಯರಾದ ಸಾಮಂತರಾಜರು ಸುತ್ತಲೂ ತಮ್ಮ ನಾಡುಗಳನ್ನು ಆಳುತ್ತಿರಲು, ನಡುವೆ ತೃಣಕಾಷ್ಠಸಮೃದ್ಧವಾಗಿ ರಮ್ಯವಾಗಿರುವ ದೇಶದಲ್ಲಿ ವಾಸಿಸಬೇಕು.

೨-೪. ರಾಜನು ವಾಸಮಾಡುವ ದೇಶವು ವೈಶ್ಯರಿಂದಲೂ ಶೂದ್ರರಿಂದಲೂ ತುಂಬಿರಬೇಕು. ಅಲ್ಪಸಂಖ್ಯೆಯ ಬ್ರಾಹ್ಮಣರಿದ್ದರೂ ಸಾಕು. ಶತ್ರುಗಳ ಆಕ್ರಮಣಕ್ಕೆ ಅದು ತುತ್ತಾಗಬಾರದು. ಅಲ್ಲಿ ಕೆಲಸಗಾರರು ಬಹಳ ಜನರಿರಬೇಕು. ಮಳೆಯನ್ನೇ ನಂಬಿಕೊಂಡಿರದೆ ನದಿಯ ಆಸರೆಯಿಂದ ಭೂವ್ಯವಸಾಯವು ನಡೆಯುವ ಹಾಗಿರಬೇಕು. ಜನರಿಗೆ ರಾಜನಲ್ಲಿ ಪ್ರೀತಿಯಿರಬೇಕು. ಕಂದಾಯದ ಹೊರೆ ಹೆಚ್ಚಾಗಿರಬಾರದು. ಮರಗಳಲ್ಲಿ ಹೂಹಣ್ಣುಗಳು ಕಿಕ್ಕಿರಿಯುತ್ತಿರಬೇಕು. ಕಷ್ಟಕಾಲದಲ್ಲಿ ಶತ್ರುಸೈನ್ಯಗಳು ರಾಜನ ವಾಸಗೃಹವನ್ನು ಮುತ್ತುವಂತಿರಬಾರದು.

**ಸರೀಸೃಪವಿಹೀನಂ ಚ ವ್ಯಾಘ್ರತಸ್ಕರವರ್ಜಿತಂ ।**
**ಏವಂವಿಧಂ ಯಥಾಲಾಭಂ ರಾಜಾ ವಿಷಯಮಾವಸೇತ್ ॥ ೫ ॥**

**ತತ್ರ ದುರ್ಗಂ ನೃಪಃ ಕುರ್ಯಾತ್ ಷಣ್ಣಾಮೇಕತಮಂ ಬುಧಃ ।**
**ಧನುರ್ದುರ್ಗಂ ಮಹೀದುರ್ಗಂ ನರದುರ್ಗಂ ತಥೈವ ಚ ॥ ೬ ॥**

**ವಾರ್ಕ್ಷಂ ಚೈವಾಂಬುದುರ್ಗಂ ಚ ಗಿರಿದುರ್ಗಂ ಚ ಪಾರ್ಥಿವ ।**
**ಸರ್ವೇಷಾಮೇವ ದುರ್ಗಾಣಾಂ ಗಿರಿದುರ್ಗಂ ಪ್ರಶಸ್ಯತೇ ॥ ೭ ॥**

**ದುರ್ಗಂ ಚ ಪರಿಖೋಪೇತಂ ವಪ್ರಾಟ್ಟಾಲಕಸಂಯುತಂ ।**
**ಶತಘ್ನೀಯಂತ್ರಮುಖ್ಯೈಶ್ಚ ಶತಶಶ್ಚ ಸಮಾವೃತಂ ॥ ೮ ॥**

---

ಅದು ರಾಜನಿಗೆ ಪ್ರಿಯಕರವಾಗಿ, ಸುಖದುಃಖಗಳಲ್ಲಿ ಸಮಾನವಾಗಿ, ಮನಶ್ಶಾಂತಿಯನ್ನೀಯುವಂತಿರಬೇಕು. ಹಾವುಗಳು, ಹುಲಿಗಳು, ಕಳ್ಳಕಾಕರು ಇವರ ಬಾಧೆಯಿರಬಾರದು.

೬-೭. ಕೋಟೆಗಳಲ್ಲಿ ಆರು ವಿಧಗಳಿವೆ. ಧನುರ್ಧಾರಿಗಳಾದ ಶೂರರು ಸುತ್ತಲೂ ಕಾವಲಿದ್ದರೆ ಧನುರ್ದುರ್ಗ ಅಥವಾ ಬಿಲ್ಲಿನ ಕೋಟೆಯೆನಿಸುವುದು. ಒಳಕ್ಕೆ ಪ್ರವೇಶಿಸುವ ಬಾಗಿಲು ಕಾಣದಂತೆ ನೆಲದಲ್ಲಿಯೇ ಸುರಂಗಮಾರ್ಗವಿದ್ದರೆ ಮಹೀದುರ್ಗವೆನ್ನುವರು. ಶಸ್ತ್ರಯುದ್ಧ, ಮಲ್ಲಯುದ್ಧಗಳಲ್ಲಿ ಸಮರ್ಥರಾದ ಜನರಿಂದ ತುಂಬಿದ್ದರೆ ನರದುರ್ಗವೆಂದು ಹೆಸರು. ಸುತ್ತಲೂ ಎತ್ತರವಾದ ಮುಳ್ಳುಮರಗಳು ಬೆಳೆದು ಪ್ರವೇಶಕ್ಕೆ ಅಸಾಧ್ಯವಾಗಿದ್ದರೆ ವೃಕ್ಷದುರ್ಗವೆಂದು ಹೇಳುತ್ತಾರೆ. ಹತ್ತುವುದಕ್ಕಾಗದ ಬೆಟ್ಟದ ಮೇಲೆ ಕೋಟೆಕಟ್ಟಿದರೆ ಗಿರಿದುರ್ಗವೆನಿಸುವುದು. ಇವುಗಳಲ್ಲೆಲ್ಲ ಗಿರಿದುರ್ಗವೇ ಶ್ರೇಷ್ಠವಾದುದು. ನೀತಿಶಾಸ್ತ್ರಜ್ಞನಾದ ರಾಜನು ಇವುಗಳಲ್ಲಿ ಒಂದನ್ನು ನಿರ್ಮಿಸಿಕೊಳ್ಳಬೇಕು.

೮. ಕೋಟೆಯ ಸುತ್ತಲೂ ಕಂದಕವಿರಬೇಕು. ಊರೆಗೋಡೆಯೂ ಮೇಲ್ಗಡೆ ಮುಗಿಲಟ್ಟಳೆಯೂ ಇರಬೇಕು. ಪಿರಂಗಿ ಮೊದಲಾದ ನೂರಾರು ಯಂತ್ರಗಳನ್ನು ಸುತ್ತಲೂ ಇಟ್ಟಿರಬೇಕು.

ಗೋಪುರಂ ಸಕಪಾಟಂ ಚ ತತ್ರ ಸ್ಯಾತ್ಸುಮನೋಹರಂ ।
ಸಪತಾಕಂ ಗಜಾರೂಢೋ ಯೇನ ರಾಜಾ ವಿಶೇತ್ಪುರಂ ॥ ೯ ॥

ಚತಸ್ರಶ್ಚ ತಥಾ ತತ್ರ ಕಾರ್ಯಾಸ್ತ್ವಾಯತವೀಥಯಃ ।
ಏಕಸ್ಮಿಂಸ್ತತ್ರ ವೀಥ್ಯಗ್ರೇ ದೇವವೇಶ್ಮ ಭವೇದ್ದೃಢಂ ॥೧೦॥

ವೀಥ್ಯಗ್ರೇ ಚ ದ್ವಿತಿಯೇ ಚ ರಾಜವೇಶ್ಮ ವಿಧೀಯತೇ ।
ಧರ್ಮಾಧಿಕರಣಂ ಕಾರ್ಯಂ ವೀಥ್ಯಗ್ರೇ ಚ ತೃತೀಯಕೇ ॥೧೧॥

ಚತುರ್ಥೇ ತ್ವಥ ವೀಥ್ಯಗ್ರೇ ಗೋಪುರಂ ಚ ವಿಧೀಯತೇ
ಆಯತಂ ಚತುರಸ್ರಂ ವಾ ವೃತ್ತಂ ವಾ ಕಾರಯೇತ್ಪುರಂ ॥೧೨॥

ಮುಕ್ತಿಹೀನಂ ತ್ರಿಕೋಣಂ ಚ ಯವಮಧ್ಯಂ ತಥೈವ ಚ ।
ಅರ್ಧಚಂದ್ರಪ್ರಕಾರಂ ಚ ವಜ್ರಾಕರಂ ಚ ಕಾರಯೇತ್ ॥೧೩॥

---

೯. ದಿಡ್ಡಿಯ ಬಾಗಿಲು ಬಲವಾದ ಕಂದಕಗಳಿಂದ ಕೂಡಿ ಮನೋಹರವಾಗಿ ಕಾಣಬೇಕು. ಬಾವುಟವನ್ನು ಹಾರಿಸಿಕೊಂಡು, ಆನೆಯನ್ನೇರಿ ರಾಜನು ನಗರವನ್ನು ಪ್ರವೇಶಿಸುವಷ್ಟು ಎತ್ತರವಾಗಿ ಅದು ಇರಬೇಕು.

೧೦. ನಗರದಲ್ಲಿ ವಿಸ್ತಾರವಾದ ನಾಲ್ಕು ಬೀದಿಗಳನ್ನು ನಿರ್ಮಿಸಬೇಕು. ಅವುಗಳಲ್ಲಿ ಮೊದಲನೆಯದರ ಮುಂಭಾಗದಲ್ಲಿ ದೃಢವಾದ ದೇವಸ್ಥಾನವನ್ನು ಕಟ್ಟಬೇಕು.

೧೧. ಎರಡನೆಯ ಬೀದಿಯ ಮುಂಗಡೆಯಲ್ಲಿ ಅರಮನೆಯೂ, ಮೂರನೆಯದರಲ್ಲಿ ನ್ಯಾಯಸ್ಥಾನವೂ ನಿರ್ಮಿತವಾಗಬೇಕು.

೧೨. ನಾಲ್ಕನೆಯ ಬೀದಿಯ ಪ್ರಾರಂಭದಲ್ಲಿ ಹೆಬ್ಬಾಗಿಲನ್ನು ಕಟ್ಟಿಸಬೇಕು. ಪಟ್ಟಣವು ಚಚ್ಚೌಕವಾಗಿಯೋ ಗುಂಡಾಗಿಯೋ ಇರಬಹುದು.

೧೩. ರಾಜಾಜ್ಞೆಯಿಲ್ಲದೆ ಜನರು ಮನಸ್ಸು ಬಂದಂತೆ ನಗರದ ಹೊರಕ್ಕೆ ಹೋಗುವಂತಿರಬಾರದು. ಪಟ್ಟಣವು ತ್ರಿಕೋಣಾಕಾರವಾಗಿರಬಹುದು. ಯವ ಧಾನ್ಯದಂತೆ ಮಧ್ಯದಲ್ಲಿ ಅಗಲವಾಗಿ ಪಾರ್ಶ್ವಗಳಲ್ಲಿ ಕಿರಿದಾಗಿರಬಹುದು. ಅರ್ಧ ಚಂದ್ರಾಕಾರವಾಗಿರಬಹುದು ; ಅಥವಾ ವಜ್ರಾಯುಧದ ಆಕಾರವಾಗಿರಬಹುದು.

ಅರ್ಧಚಂದ್ರಂ ಪ್ರಶಂಸಂತಿ ನದೀತೀರೇಷು ತದ್ವಶಾತ್ ।
ಅನ್ಯತ್ರ ತನ್ನ ಕರ್ತವ್ಯಂ ಪ್ರಯತ್ನೇನ ವಿಜಾನತಾ ||೧೪||

ರಾಜ್ಞಾ ಕೋಶಗೃಹಂ ಕಾರ್ಯಂ ದಕ್ಷಿಣೇ ರಾಜವೇಶ್ಮನಃ ।
ತಸ್ಯಾಽಪಿ ದಕ್ಷಿಣೇ ಭಾಗೇ ಗಜಸ್ಥಾನಂ ವಿಧೀಯತೇ ||೧೫||

ಗಜಾನಾಂ ಪ್ರಾಙ್ಮುಖೀ ಶಾಲಾ ಕರ್ತವ್ಯಾ ವಾಪ್ಯುದಙ್ಮುಖೀ ।
ಆಗ್ನೇಯೇ ಚ ತಥಾ ಭಾಗೇ ಆಯುಧಾಗರಮಿಷ್ಯತೇ ||೧೬||

ಮಹಾನಸಂ ಚ ಧರ್ಮಜ್ಞ ಕರ್ಮಶಾಲಾಸ್ತಥಾ ಪರಾಃ ।
ಗೃಹಂ ಪುರೋಧಸಃ ಕಾರ್ಯಂ ವಾಮತೋ ರಾಜವೇಶ್ಮನಃ ||೧೭||

ಮಂತ್ರಿವೇದವಿದಾಂ ಚೈವ ಚಿಕಿತ್ಸಾಕರ್ತುರೇವ ಚ ।
ತತ್ರೈವ ಚ ತಥಾ ಭಾಗೇ ಕೋಷ್ಠಾಗಾರಂ ವಿಧೀಯತೇ ||೧೮||

---

೧೪. ನದೀತೀರಗಳಲ್ಲಿ ಪಟ್ಟಣವು ಅರ್ಧಚಂದ್ರಾಕಾರವಾಗಿರುವುದು ಒಳ್ಳೆಯದೆನ್ನುತ್ತಾರೆ. ನೀತಿಜ್ಞನಾದ ರಾಜನು ಬೇರೆ ಕಡೆಗಳಲ್ಲಿ ಹಾಗೆ ಕಟ್ಟಲು ಯತ್ನಿಸಬಾರದು.

೧೫. ಅರಮನೆಯ ಬಲಭಾಗದಲ್ಲಿ ಬೊಕ್ಕಸವನ್ನೂ ಅದಕ್ಕೂ ಬಲಭಾಗದಲ್ಲಿ ಗಜಶಾಲೆಯನ್ನೂ ನಿರ್ಮಿಸಬೇಕು.

೧೬. ಗಜಶಾಲೆಯು ಪೂರ್ವಾಭಿಮುಖವಾಗಿಯೋ ಉತ್ತರಾಭಿಮುಖವಾಗಿಯೋ ಇರಬೇಕು. ಅದರ ಆಗ್ನೇಯ ಭಾಗದಲ್ಲಿ ಆಯುಧಶಾಲೆಯನ್ನು ಕಟ್ಟಬೇಕು.

೧೭. ಧರ್ಮಜ್ಞನಾದ ಓ ರಾಜಾ, ಅರಮನೆಯ ಎಡಗಡೆಯಲ್ಲಿ ಪಾಕಶಾಲೆಯನ್ನೂ, ಇನ್ನೂ ಉಳಿದ ಕೆಲಸಗಳನ್ನು ನಡೆಸುವ ಕರ್ಮಶಾಲೆಗಳನ್ನೂ, ಪುರೋಹಿತನ ಮನೆಯನ್ನೂ ನಿರ್ಮಿಸಬೇಕು.

೧೮. ಮಂತ್ರಿಗಳ, ವೇದಶಾಸ್ತ್ರಜ್ಞರ, ಮತ್ತು ರಾಜವೈದ್ಯರ ವಾಸಗೃಹಗಳನ್ನೂ ಉಗ್ರಾಣವನ್ನೂ ಆ ಕಡೆಯಲ್ಲಿಯೇ ಕಟ್ಟಬೇಕು.

**ಗವಾಂ ಸ್ಥಾನಂ ತಥೈವಾತ್ರ ತುರಗಾಣಾಂ ತಥೈವ ಚ ।**
**ಉತ್ತರಾಭಿಮುಖಾ ಶ್ರೇಣೀ ತುರಗಾಣಾಂ ವಿಧೀಯತೇ ॥೧೯॥**

**ದಕ್ಷಿಣಾಭಿಮುಖಾ ವಾಥ ಪರಿಶಿಷ್ಟಾಸ್ತು ಗರ್ಹಿತಾಃ ।**
**ತುರಗಾಸ್ತೇ ತಥಾ ಧಾರ್ಯಾಃ ಪ್ರದೀಪೈಃ ಸಾರ್ವರಾತ್ರಿಕೈಃ ॥೨೦॥**

**ಕುಕ್ಕುಟಾರ್ನ್ ವಾನರಾಂಶ್ಚೈವ ಮರ್ಕಟಾಂಶ್ಚ ವಿಶೇಷತಃ ।**
**ಧಾರಯೇದಶ್ವಶಾಲಾಸು ಸವತ್ಸಾಂ ಧೇನುಮೇವ ಚ ॥೨೧॥**

**ಅಜಾಶ್ಚ ಧಾರ್ಯಾ ಯತ್ನೇನ ತುರಗಾಣಾಂ ಹಿತೈಷಿಣಾ ।**
**ಗೋಗಜಾಶ್ವಾದಿಶಾಲಾಸು ತತ್ಪುರೀಷಸ್ಯ ನಿರ್ಗಮಃ ॥೨೨॥**

---

೧೯-೨೦. ಹಸುಗಳ ಕೊಟ್ಟಿಗೆಗೂ ಕುದುರೆಗಳ ಲಾಯಕ್ಕೂ ಇಲ್ಲೇ ಸ್ಥಳವನ್ನು ಗೊತ್ತುಮಾಡಬೇಕು. ಅಶ್ವಶಾಲೆಯು ಉತ್ತರಾಭಿಮುಖವಾಗಿಯೋ ದಕ್ಷಿಣಾಭಿಮುಖವಾಗಿಯೋ ಇರಬೇಕು. ಉಳಿದ ದಿಕ್ಕುಗಳು ಶ್ಲಾಘ್ಯವಲ್ಲ. ಕುದುರೆಲಾಯದಲ್ಲಿ ರಾತ್ರಿಯೆಲ್ಲ ದೀಪಗಳು ಉರಿಯುತ್ತಿರಬೇಕು.

೨೧. ಕೋಳಿಗಳನ್ನೂ, ಶಿಂಗಳೀಕಗಳನ್ನೂ, ಕರುವಿನೊಡಗೂಡಿದ ಹಸುವನ್ನೂ ಅಶ್ವಶಾಲೆಯಲ್ಲಿ ಕಟ್ಟಿಹಾಕಬೇಕು. ಕುದುರೆಗಳ ಹಿತವನ್ನು ಕೋರುವ ರಾಜನು ಪ್ರಯತ್ನಪೂರ್ವಕವಾಗಿ ಆಡುಗಳನ್ನು ಸಾಕಬೇಕು. (ಏಕೆಂದರೆ ಕುದುರೆಗಳ ರೋಗಕ್ಕೆ ಕೋಳಿ, ಕಪಿ, ಆಡು ಮುಂತಾದ ಪ್ರಾಣಿಗಳ ರಕ್ತ, ಮಾಂಸ, ಮೂತ್ರ ಮೊದಲಾದುವು ಉಪಯೋಗಕ್ಕೆ ಬರುತ್ತವೆಂದು ಅಶ್ವಶಾಸ್ತ್ರಜ್ಞರಾದ ಶಾಲಿಹೋತ್ರರು ಹೇಳಿದ್ದಾರೆ.)

೨೨. ಸೂರ್ಯನು ಮುಳುಗಿದ ತರುವಾಯ ಗೋಶಾಲೆ, ಗಜಶಾಲೆ ಮತ್ತು ಅಶ್ವಶಾಲೆ ಮುಂತಾದುವುಗಳಲ್ಲಿನ ಗೊಬ್ಬರವನ್ನು ಹೊರಕ್ಕೆ ಹಾಕಬಾರದು.

ಅಸ್ತಂಗತೇ ನ ಕರ್ತವ್ಯೋ ದೇವದೇವೇ ದಿವಾಕರೇ ।
ತತ್ರ ತತ್ರ ಯಥಾಸ್ಥಾನಂ ರಾಜಾ ವಿಜ್ಞಾಯ ಸಾರಥೀನ್ ॥೨೩॥

ದದ್ಯಾದಾವಸಥಸ್ಥಾನಂ ಸರ್ವೇಷಾಮನುಪೂರ್ವಶಃ ।
ಯೋಧಾನಾಂ ಶಿಲ್ಪಿನಾಂ ಚೈವ ಸರ್ವೇಷಾಮವಿಶೇಷತಃ । ॥೨೪॥

ದದ್ಯಾದಾವಸಥಂ ದುರ್ಗೇ ಕಾಲಮಂತ್ರವಿದಾಂ ಶುಭಾನ್।
ಗೋವೈದ್ಯಾನಶ್ವವೈದ್ಯಾಂಶ್ಚ ಗಜವೈದ್ಯಾಂಸ್ತಥೈವ ಚ ॥೨೫॥

ಆಹರೇತ ಭೃಶಂ ರಾಜಾ ದುರ್ಗೇ ಹಿ ಪ್ರಬಲಾ ರುಜಃ ।
ಕುಶೀಲವಾನಾಂ ವಿಪ್ರಾಣಾಂ ದುರ್ಗೇ ಸ್ಥಾನಂ ವಿಧೀಯತೇ ॥೨೬॥

ನ ಬಹೂನಾಮತೋ ದುರ್ಗೇ ವಿನಾ ಕಾರ್ಯಂ ತಥಾ ಭವೇತ್ ।
ದುರ್ಗೇ ಚ ತತ್ರ ಕರ್ತವ್ಯಾ ನಾನಾಪ್ರಹರಣಾನ್ವಿತಾಃ ॥೨೭॥

---

೨೩-೨೪. ರಾಜನು ಅವರವರ ಯೋಗ್ಯತೆಯನ್ನರಿತು ಸಾರಥಿಗಳ್ನು ಯೋಧರು, ಶಿಲ್ಪಿಗಳು ಇವರಿಗೆಲ್ಲ ತಕ್ಕಂತೆ ಕ್ರಮವಾಗಿ ವಾಸಕ್ಕೆ ಸ್ಥಾನವನು ಕೊಡಬೇಕು.

೨೫-೨೬. ಜ್ಯೋತಿಷ್ಕರಿಗೂ ಮಂತ್ರಶಾಸ್ತ್ರಜ್ಞರಿಗೂ ಕೋಟೆಯೊಳಗೆ ಒಳ್ಳೆಯ ಮನೆಗಳನ್ನು ಕಟ್ಟಿಸಿಕೊಡಬೇಕು. ಹಲವರು ಗೋವೈದ್ಯರು, ಅಶ್ವವೈದ್ಯರು ಮತ್ತು ಗಜವೈದ್ಯರಿಗೆ ಆಶ್ರಯಕೊಟ್ಟು ಇಟ್ಟುಕೊಂಡಿರಬೇಕು. ಏಕೆಂದರೆ ದುರ್ಗದೊಳಗೆ ರೋಗಗಳು ಪ್ರಬಲವಾಗಬಹುದು. ಸಂಗೀತಗಾರರಿಗೂ ಬ್ರಾಹ್ಮಣರಿಗೂ ಕೋಟೆಯೊಳಗೆ ಸ್ಥಳಕೊಡಬೇಕು.

೨೭. ಕೆಲಸವಿಲ್ಲದೆ ಬಹಳ ಮಂದಿ ದುರ್ಗದೊಳಗೆ ವಾಸಮಾಡಬಾರದು. ಎಲ್ಲೈ ರಾಜಾ, ಕೋಟೆಯ ಕಾವಲಿಗಾಗಿ ಬಗೆಬಗೆಯ ಆಯುಧಗಳನ್ನು ಧರಿಸಿ ಸಾವಿರಾರು ಮಂದಿಯನ್ನು ಕೊಲ್ಲಬಲ್ಲ ವೀರರು ಸಿದ್ಧರಾಗಿ ಇರಬೇಕು.

ಸಹಸ್ರಘಾತಿನೋ ರಾಜಂಸ್ತೈಸ್ತು ರಕ್ಷಾ ವಿಧೀಯತೇ ।
ದುರ್ಗೇ ದ್ವಾರಾಣಿ ಗುಪ್ತಾನಿ ಕಾರ್ಯಾಣ್ಯಪಿ ಚ ಭೂಭುಜಾ ॥೨೮॥

ಸಂಚಯಶ್ಚಾತ್ರ ಸರ್ವೇಷಾಮಾಯುಧಾನಾಂ ಪ್ರಶಸ್ಯತೇ ।
ಧನುಷಾಂ ಕ್ಷೇಪಣೀಯಾನಾಂ ತೋಮರಾಣಾಂ ಚ ಪಾರ್ಥಿವ ॥೨೯॥

ಶರಾಣಾಮಥ ಖಡ್ಗಾನಾಂ ಕವಚಾನಾಂ ತಥೈವ ಚ ।
ಲಗುಡಾನಾಂ ಗುಡಾನಾಂ ಚ ಹುಡಾನಾಂ ಪರಿಘೈಃ ಸಹ ॥೩೦॥

ಅಶ್ಮನಾಂ ಚ ಪ್ರಭೂತಾನಾಂ ಮುದ್ಗರಾಣಾಂ ತಥೈವ ಚ ।
ತ್ರಿಶೂಲಾನಾಂ ಪಟ್ಟಿಶಾನಾಂ ಕುಠಾರಾಣಾಂ ಚ ಪಾರ್ಥಿವ ॥೩೧॥

ಪ್ರಾಸಾನಾಂ ಚ ಸಶೂಲಾನಾಂ ಶಕ್ತೀನಾಂ ಚ ನರೋತ್ತಮ ।
ಪರಶ್ವಧಾನಾಂ ಚಕ್ರಾಣಾಂ ವರ್ಮಣಾಂ ಚರ್ಮಭಿಃ ಸಹ ॥೩೨॥

ಕುದ್ದಾಲರಜ್ಜುವೇತ್ರಾಣಾಂ ಪೀಠಕಾನಾಂ ತಥೈವ ಚ ।
ತುಷಾಣಾಂ ಚೈವ ದಾತ್ರಾಣಾಮಂಗಾರಾಣಾಂ ಚ ಸಂಚಯಃ ॥೩೩॥

ಸರ್ವೇಷಾಂ ಶಿಲ್ಪಿಭಾಂಡಾನಾಂ ಸಂಚಯಶ್ಚಾತ್ರ ಚೇಷ್ಯತೇ ।
ವಾದಿತ್ರಾಣಾಂ ಚ ಸರ್ವೇಷಾಮೋಷಧೀನಾಂ ತಥೈವ ಚ ॥೩೪॥

---

೨೮-೩೩. ರಾಜನು ದುರ್ಗದೊಳಗೆ ರಹಸ್ಯವಾದ ಸುರಂಗಗಳನ್ನು ಮಾಡಿಸಬೇಕು. ಎಲ್ಲಬಗೆಯ ಆಯುಧಗಳನ್ನೂ ಸಂಗ್ರಹಿಸಿಡಬೇಕು. ಬಿಲ್ಲುಗಳು, ಕವಣೆಗಳು, ತೋಮರಗಳು, ಬಾಣಗಳು, ಕತ್ತಿಗಳು, ಕವಚಗಳು, ದೊಣ್ಣೆಗಳು, ಗುಳಗಳು, ಗದೆಗಳು, ಪರಿಘಗಗಳು, ದೊಡ್ಡ ದೊಡ್ಡ ಗುಂಡುಕಲ್ಲುಗಳು, ಮುದ್ಗರಗಳು, ತ್ರಿಶೂಲಗಳು, ಪಟ್ಟಿಶಗಳು, ಕೊಡಲಿಗಳು, ಪ್ರಾಸಗಳು, ಚಕ್ರಗಳು, ಕಬ್ಬಿಣದ ಕವಚಗಳು, ಗುರಾಣಿಗಳು, ಗುದ್ದಲಿಗಳು, ಹಗ್ಗಗಳು, ಬೆತ್ತಗಳು ಹಲಗೆಗಳು, ಮಚ್ಚುಗಳು, ಹೊಟ್ಟು ಮತ್ತು ಇದ್ದಿಲು ಇವೆಲ್ಲವನ್ನೂ ಕೂಡಿಡಬೇಕು.

೩೪. ಶಿಲ್ಪಕಾರ್ಯಗಳಿಗೆ ಬೇಕಾದ ಎಲ್ಲ ಉಪಕರಣಗಳನ್ನೂ, ಸಕಲ ವಾದ್ಯಗಳನ್ನೂ ಮೂಲಿಕೆಗಳನ್ನೂ ಇಲ್ಲಿ ಶೇಖರಿಸಿಡಬೇಕು.

ಯವಸಾನಾಂ ಪ್ರಭೂತಾನಾಮಿಂಧನಸ್ಯ ಚ ಸಂಚಯಃ ।
ಗುಡಸ್ಯ ಸರ್ವತೈಲಾನಾಂ ಗೋರಸಾನಾಂ ತಥೈವ ಚ ॥೩೫॥

ವಸಾನಾಮಥ ಮಜ್ಜಾನಾಂ ಸ್ನಾಯೂನಾಮಸ್ಥಿಭಿಃ ಸಹ ।
ಗೋಚರ್ಮಪಟಹಾನಾಂ ಚ ಧಾನ್ಯಾನಾಂ ಸರ್ವತಸ್ತಥಾ ॥೩೬॥

ತಥೈವಾಭ್ರಪಟಾನಾಂ ಚ ಯವಗೋಧೂಮಯೋರಪಿ ।
ರತ್ನಾನಾಂ ಸರ್ವವಸ್ತ್ರಾಣಾಂ ಲೋಹಾನಾಮಪ್ಯಶೇಷತಃ ॥೩೭॥

ಕಲಾಯಮುದ್ಗಮಾಷಾಣಾಂ ಚಣಕಾನಾಂ ತಿಲೈಃ ಸಹ ।
ತಥಾ ಚ ಸರ್ವಸಸ್ಯಾನಾಂ ಪಾಂಸುಗೋಮಯಯೋರಪಿ ॥೩೮॥

ಶಣಸರ್ಜರಸಂ ಭೂರ್ಜಂ ಜತು ಲಾಕ್ಷಾ ಚ ಟಂಕಣಂ ।
ರಾಜಾ ಸಂಚಿನುಯಾದ್ದುರ್ಗೇ ಯಚ್ಚಾನ್ಯದಪಿ ಕಿಂಚನ ॥೩೯॥

ಕುಂಭಾಶ್ಚಾಶೀವಿಷೈಃ ಕಾರ್ಯಾ ವ್ಯಾಲಸಿಂಹಾದಯಸ್ತಥಾ ।
ಮೃಗಾಶ್ಚ ಪಕ್ಷಿಣಶ್ಚೈವ ರಕ್ಷ್ಯಾಸ್ತೇ ಚ ಪರಸ್ಪರಂ ॥೪೦॥

---

೩೫-೩೯. ಬೇಕಾದಷ್ಟು ಹುಲ್ಲು, ಸೌದೆ, ಬೆಲ್ಲ, ಬಗೆಬಗೆಯ ಎಣ್ಣೆ, ಮಜ್ಜಿಗೆ, ಕೊಬ್ಬು, ಮಾಂಸಸಾರ, ನರ, ಮೂಳೆ, ಹಸುವಿನ ಚರ್ಮ, ತಮಟೆ, ಎಲ್ಲವಿಧವಾದ ಧಾನ್ಯ, ಗೋಧವೆ, ರತ್ನ, ಬಗೆಬಗೆಯ ವಸ್ತ್ರ, ಲೋಹ, ನೆಲಗಡಲೆ, ಹೆಸರು, ಉದ್ದು, ಕಡಲೆ, ಎಳ್ಳು, ನಾನಾಜಾತಿಯ ಸಸ್ಯ, ಧೂಳು, ಮಣ್ಣು, ಸಗಣಿ, ಸಣಬಿನನಾರು, ಸರ್ಜರಸ, ಭೂರ್ಜಪತ್ರ, ಬೇರೆಬೇರೆ ಜಾತಿಯ ಅರಗು, ಬಿಳುಗಾರ ಇವೇ ಮುಂತಾದ ಆವಶ್ಯಕವಾದ ವಸ್ತುಗಳನ್ನು ದೊರೆಯು ದುರ್ಗದಲ್ಲಿ ಸಂಗ್ರಹಿಸಿರಬೇಕು.

೪೦. ಹಾವುಗಳನ್ನು ಗಡಿಗೆಗಳಲ್ಲಿಟ್ಟು ಸಾಕಬೇಕು. ಇವನ್ನೇ ಘಟಸರ್ಪಗಳೆನ್ನುವರು. ಮದಿಸಿದ ಆನೆ, ಸಿಂಹ ಮೊದಲಾದ ಮೃಗಗಳನ್ನೂ ಪಾರಿವಾಳ ಮೊದಲಾದ ಪಕ್ಷಿಗಳನ್ನೂ ಕಾಪಾಡಬೇಕು.

ಸ್ಥಾನಾನಿ ಚ ವಿರುದ್ಧಾನಾಂ ಸುಗುಪ್ತಾನಿ ಪೃಥಕ್ ಪೃಥಕ್ ।
ಕರ್ತವ್ಯಾನಿ ಮಹಾಭಾಗ ಯತ್ನೇನ ಪೃಥಿವೀಕ್ಷಿತಾ ॥೪೧॥

ಉಕ್ತಾನಿ ಚಾಪ್ಯನುಕ್ತಾನಿ ರಾಜಾ ದ್ರವ್ಯಾಣ್ಯಶೇಷತಃ ।
ಸುಗುಪ್ತಾನಿ ಪುರೇ ಕುರ್ಯಾಜ್ಜನಾನಾಂ ಹಿತಕಾಮ್ಯಯಾ ॥೪೨॥

ಜೀವಕರ್ಷಭಕಾಕೋಲವಾಮಲಕ್ಯಾಟರೂಷಕಾಃ ।
ಶಾಲಪರ್ಣೀ ಪ್ರಶ್ನಿಪರ್ಣೀ ಮುದ್ಗಪರ್ಣೀ ತಥೈವ ಚ ॥೪೩॥

ಮಾಷಪರ್ಣೀ ಚ ಮೇದೇ ದ್ವೇ ಶಾರಿವೇ ದ್ವೇ ಬಲಾತ್ರಯಂ ।
ವೀರಾ ಶ್ವಸಂತೀ ವೃಷ್ಯಾ ಚ ಬೃಹತೀ ಕಂಟಕಾರಿಕಾ ॥೪೪॥

ಶೃಂಗೀ ಶೃಂಗಾಟಕೀ ದ್ರೋಣೀ ವರ್ಷಾಭೂರ್ದರ್ಭರೇಣುಕಾ ।
ಮಧುಪರ್ಣೀ ವಿದಾರ್ಯೌ ದ್ವೇ ಮಹಾಕ್ಷೀರಾ ಮಹಾತಪಾಃ ॥೪೫॥

ಧನ್ವನಃ ಸಹದೇವಾಹ್ವಾ ಕಟುಕೈರಂಡಕಂ ವಿಷಃ ।
ಪರ್ಣೀ ಶತಾಹ್ವಾ ಮೃದ್ವೀಕಾ ಫಲ್ಗುಖರ್ಜೂರಯಷ್ಟಿಕಾಃ ॥೪೬॥

---

೪೧. ಮಹಿಮಾವಂತನಾದ ಎಲೈ ರಾಜಾ, ಅರಸನು ತನಗೆ ವಿರೋಧಿಗಳಾದವರ ಸ್ಥಾನಗಳ ಮೇಲೆ ಬೇರೆ ಬೇರೆಯಾಗಿ ಬಲವಾಗಿ ಕಾವಲನ್ನಿರಿಸಿ ಎಚ್ಚರಿಕೆಯಿಂದಿರಬೇಕು.

೪೨. ಮೇಲೆ ಹೇಳಿದವುಗಳನ್ನೂ ಹೇಳದಿರುವ ಅವಶ್ಯಕವಾದ ಇತರ ದ್ರವ್ಯಗಳನ್ನೂ ರಾಜನು ಜನರ ಹಿತಕ್ಕಾಗಿ ನಗರದಲ್ಲಿ ಚೆನ್ನಾಗಿ ರಕ್ಷಿಸಿಡಬೇಕು.

೪೩-೫೪. ರಾಜನು ಈ ಮುಂದೆ ಹೇಳುವ ಗಿಡಮೂಲಿಕೆಗಳನ್ನು ತನ್ನ ನಗರದಲ್ಲಿ ಶೇಖರಿಸಿ ಇಡಬೇಕು. ಜೀವಕ, ಋಷಭಕ, ಕಾಕೋಲಿ, ನೆಲ್ಲಿ, ಆಡುಸೋಗೆ, ಮೂರೆಲೆಹೊನ್ನೆ, ಒಂದೆಲೆಹೊನ್ನೆ, ಕಾಡುಹೆಸರು, ಕಾಡುಉದ್ದು, ಮೇದೆ, ಮಹಾಮೇದೆ, ಮಾಗಳಿ, ನೆಲಮಾಗಳಿ, ಕಳ್ಳಂಗಡಲೆ, ಬೋಳಂಗಡಲೆ, ಕುರುಬೆ, ಕ್ಷೀರಕಾಕೋಲಿ, ವಾಸಂತಿ, ನೆಲನೆಲ್ಲಿ, ಹೆಗ್ಗುಳ್ಳ, ನೆಲಗುಳ್ಳ, ಕರ್ಕಾಟಕಶೃಂಗಿ,

ಶುಕ್ರಾತಿಶುಕ್ರಕಾಶ್ಮರ್ಯಶ್ಛತ್ರಾತಿಚ್ಛತ್ರವೀರಣಾಃ ।
ಇಕ್ಷುರಿಕ್ಷುವಿಕಾರಾಶ್ಚ ಫಾಣಿತಾದ್ಯಾಶ್ಚ ಸತ್ತಮ ॥೪೭॥

ಸಿಂಹೀ ಚ ಸಹದೇವೀ ಚ ವಿಶ್ವೇದೇವಾಶ್ಚರೋಧಕಂ ।
ಮಧುಕಂ ಪುಷ್ಪಹಂಸಾಖ್ಯಾ ಶತಪುಷ್ಪಾ ಮಧೂಲಿಕಾ ॥೪೮॥

ಶತಾವರೀ ಮಧೂಕೇ ಚ ಪಿಪ್ಪಲಂ ತಾಲಮೇವ ಚ ।
ಆತ್ಮಗುಪ್ತಾ ಕಟ್ಫಲಾಖ್ಯಾ ದಾರ್ವಿಕಾ ರಾಜಶೀರ್ಷಕೀ ॥೪೯॥

ರಾಜಸರ್ಷಪಧಾನ್ಯಾಕಮೃಷ್ಯಪ್ರೋಕ್ತಾ ತಥೋತ್ಕಟಾ ।
ಕಾಲಶಾಕಂ ಪದ್ಮಬೀಜಂ ಗೋವಲ್ಲೀ ಮಧುವಲ್ಲಿಕಾ ॥೫೦॥

ಶೀತಪಾಕೀ ಕುಲಿಂಗಾಕ್ಷೀ ಕಾಕಜಿಹ್ವೋರುಪುಷ್ಪಿಕಾ ।
ಪರ್ವತತ್ರಪುಸೌ ಚೋಭೌ ಗುಂಜಾತಕಪುನರ್ನವೇ ॥೫೧॥

ಕಸೇರುಕಾ ತು ಕಾಕ್ಮೀರೀ ಬಿಲ್ವಶಾಲೂಕಕೇಸರಂ ।
ತುಷಧಾನ್ಯಾನಿ ಸರ್ವಾಣಿ ಶಮೀಧಾನ್ಯಾನಿ ಚೈವ ಹಿ ॥೫೨॥

---

ಶೃಂಗಾಟಕಿ, ನೀಲಿ, ಕಹಿಬಸರಿ, ದರ್ಭೆ, ರೇಣುಕೆ, ಅಮೃತವಳ್ಳಿ, ನೆಲಗುಂಬಳ, ಹಾಲುಗುಂಬಳ, ಮಹಾಕ್ಷೀರ, ಮಹಾಕಪ, ಗೇರು, ಸಹದೇವಿ, ಕಟುಕರೋಹಿಣಿ, ಹರಳು, ಅತಿಬಜೆ, ಸಬ್ಬಸಿಗೆ, ಶತಾಹ್ವೆ, ದ್ರಾಕ್ಷಿ, ಫಲ್ಗು, ಅತಿಮಧುರ, ಬಿದಿರುಪ್ಪು, ಅತಿಶುಕ್ರ, ಶಿವನಿ, ಕೊತ್ತುಂಬರಿ, ಅತಿಚ್ಛತ್ರ, ಲಾಳೀಕಡ್ಡಿ, ನಾನಾಜಾತಿಯ ಕಬ್ಬುಗಳು, ಅವುಗಳಿಂದ ಉತ್ಪನ್ನವಾದ ಬೆಲ್ಲ, ಉಂಡೆಬೆಲ್ಲ, ಕಾಕಂಬಿ ಮುಂತಾದುವು, ಮುಳ್ಳುಬದನೆ, ಸಹದೇವಿ, ವಿಶ್ವೇದೇವಿ. ರೋಧಕ, ಮಧಕ, ಪುಷ್ಪಹಂಸ, ಶತಪುಷ್ಪ, ಮಧೂಲಿಕ, ಶತಾವರಿ, ಮಧೂಕ, ಪಿಪ್ಪಲಿ, ತಾಲ, ಆತ್ಮಗುಪ್ತ, ಕಟ್ಫಲ, ದಾರ್ವಿಕಾ, ರಾಜಶೀರ್ಷಕಿ, ರಾಜಸರ್ಷಪ, ಧಾನ್ಯಾಕ, ಋಷ್ಯಪ್ರೋಕ್ತ, ಉತ್ಕಟ, ಕಾಲಶಾಕ, ಪದ್ಮಬೀಜ, ಗೋವಲ್ಲಿ, ಮಧುವಲ್ಲಿ, ಶೀತಪಾಕಿ, ಕುಲಿಂಗಾಕ್ಷಿ, ಕಾಕಜಿಹ್ವೆ, ಉಗುಪುಷ್ಪಿ, ಪರ್ವತ. ತ್ರಪುಸ, ಗುಂಜಾತಕ, ಪುನರ್ನವ, ಕಸೇರು,

ಕ್ಷೀರಂ ಕ್ಷೌದ್ರಂ ತಥಾ ತಕ್ರಂ ತೈಲಂ ಮಜ್ಜಾ ವಸಾ ಘೃತಂ ।
ನೀಪಶ್ಚಾರಿಷ್ಟಕಕ್ಷೋಡವಾತಾಮಾಸೋಮಬಾಣಕಂ ॥೫೪॥

ಏವಮಾದೀನಿ ಚಾನ್ಯಾನಿ ವಿಜ್ಞೇಯೋ ಮಧುರೋ ಗಣಃ ।
ರಾಜಾ ಸಂಚಿನುಯಾತ್ಸರ್ವಂ ಪುರೇ ನಿರವಶೇಷತಃ ॥೫೫॥

ದಾಡಿಮಾಮ್ರಾತಕೌ ಚೈವ ತಿಂತಿಡೀಕಾಮ್ಲವೇತಸಂ ।
ಭವ್ಯಕರ್ಕಂಧುಲಕುಚಕರಮರ್ದಕರೂಷಕಂ ॥೫೬॥

ಬೀಜಪೂರಕಕಂಡೂರೇ ಮಾಲತೀ ರಾಜಬಂಧುಕಂ ।
ಕೋಲಕದ್ವಯಪರ್ಣಾನಿ ದ್ವಯೋರಾಮ್ರಾತಯೋರಪಿ ॥೫೭॥

ಪಾರಾವತಂ ನಾಗರಕಂ ಪ್ರಾಚೀನಾರುಕಮೇವ ಚ ।
ಕಪಿತ್ಥಾಮಲಕಂ ಚುಕ್ರಫಲಂ ದಂತಶಠಸ್ಯ ಚ ॥೫೮॥

ಜಾಂಬವಂ ನವನೀತಂ ಚ ಸೌವೀರಕರುಷೋದಕೇ ।
ಸುರಾಸವಂ ಚ ಮದ್ಯಾನಿ ಮಂಡತಕ್ರದಧೀನಿ ಚ ॥೫೯॥

---

ಕಾಶ್ಮೀರಿ, ಬಿಲ್ವ, ಶಾಲೂಕ, ಕೇಸರ, ತುಷಧಾನ್ಯ, ಶಮೀಧಾನ್ಯ, ಹಾಲು, ಜೇನು, ಮಜ್ಜಿಗೆ, ಎಣ್ಣೆ, ಮಜ್ಜಾ, ವಸಾ, ಘೃತ, ನೀಪ, ಅರಿಷ್ಟಕ, ಕ್ಷೋಡವಾತ, ಅಮಾಸೋಮ, ಬಾಣಕ ಮುಂತಾದ ಔಷಧಕ್ಕೆ ಆವಶ್ಯಕವಾದ ಸಾಮಗ್ರಿಗಳು ಮಧುರಗಣಕ್ಕೆ ಸೇರಿದುವು.

೫೬-೫೯. ದಾಡಿಮ, ಆಮ್ರಾತಕ, ತಿಂತಿಡೀಕ, ಆಮ್ಲವೇತಸ, ಭವ್ಯ, ಕರ್ಕಂಧು, ಲಕುಚ, ಕರಮರ್ದ, ಕರೂಷಕ, ಬೀಜಪೂರ, ಕಂಡೂರ, ಮಾಲತಿ, ರಾಜಬಂಧುಕ, ಎರಡು ಜಾತಿಯ ಕೋಲಕಗಳು ಮತ್ತು ಅವುಗಳ ಎಲೆಗಳು, ಎರಡು ಬಗೆಯ ಆಮ್ರಾತಕಗಳು ಮತ್ತು ಅವುಗಳ ಎಲೆಗಳು, ಪಾರಾವತ, ನಾಗರಕ, ಪ್ರಾಚೀನಾರುಕ, ಕಪಿತ್ಥ, ಆಮಲಕ, ಚುಕ್ರಫಲ, ದಂತಶಠ, ಜಾಂಬವ, ನವನೀತ, ಸೌವೀರ, ಕರುಷೋದಕ, ಸುರಾ, ಆಸವ, ಮದ್ಯ ಮೊದಲಾದ ಮಾದಕ

ಶುಕ್ಲಾನಿ ಚೈವ ಸರ್ವಾಣಿ ಜ್ಞೇಯಮಾಮ್ಲಗಣಂ ದ್ವಿಜ ।
ಏವಮಾದೀನಿ ಚಾನ್ಯಾನಿ ರಾಜಾ ಸಂಚಿನುಯಾತ್ಪುರೇ ॥೫೯॥

ಸೈಂಧವೋದ್ಭಿದಪಾಠೇಯಪಾಕ್ಯಸಾಮುದ್ರಲೋಮಕಂ ।
ಕುಪ್ಯಸೌವರ್ಚಲವಿಡಂ ಬಾಲಕೇಯಂ ಯವಾಹ್ವಕಂ ॥೬೦॥

ಔರ್ವಂ ಕ್ಷಾರಂ ಕಾಲಿಭಸ್ಮ ವಿಜ್ಞೇಯೋ ಲವಣೋ ಗಣಃ ।
ಏವಮಾದೀನಿ ಚಾನ್ಯಾನಿ ರಾಜಾ ಸಂಚಿನುಯಾತ್ಪುರೇ ॥೬೧॥

ಪಿಪ್ಪಲೀ ಪಿಪ್ಪಲೀಮೂಲಚವ್ಯಚಿತ್ರಕನಾಗರಂ ।
ಕುಬೇರಕಂ ಮರಿಚಕಂ ಶಿಗ್ರುಭಲ್ಲಾತಸರ್ಷಪಾಃ ॥೬೨॥

ಕುಷ್ಠಾಜಮೋದಾ ಕಿಣಿಹೀ ಹಿಂಗುಮೂಲಕಧಾನ್ಯಕಂ ।
ಕಾರವೀ ಕುಂಚಿಕಾ ಯಾಜ್ಯಾ ಸುಮುಖಾ ಕಲಮಾಲಿಕಾ ॥೬೩॥

ಫಣಿಜ್ಜಕೋಽಥ ಲಶುನಂ ಭೂಸ್ತೃಣಂ ಸುರಸಂ ತಥಾ ।
ಕಾಯಸ್ಥಾ ಚ ವಯಃಸ್ಥಾ ಚ ಹರಿತಾಲಂ ಮನಃಶಿಲಾ ॥೬೪॥

---

ದ್ರವ್ಯಗಳು, ದ್ರವವಸ್ತುಗಳ ಮೇಲ್ಗಡೆಯ ಹೆಪ್ಪು ಮಜ್ಜಿಗೆ, ಮೊಸರು ಇವು ಶುಕ್ರಜಾತಿಯವು; ಆಮ್ಲಗಣಕ್ಕೆ ಸೇರಿದುವು. ರಾಜನು ಇವುಗಳೆಲ್ಲವನ್ನೂ ಸಂಗ್ರಹಿಸಬೇಕು.

೬೦-೬೧. ಸೈಂಧವ, ಉದ್ಭಿದ, ಪಾಠೇಯ, ಪಾಕ್ಯ, ಸಾಮುದ್ರ, ಲೋಮಕ, ಕುಪ್ಯ, ಸೌವರ್ಚ, ಲವಿಡ, ಬಾಲಕೇಯ, ಯವಾಹ್ವ, ಔರ್ವ, ಕ್ಷಾರ, ಕಾಲಿಭಸ್ಮ ಇವುಗಳು ಲವಣಗಣಕ್ಕೆ ಸಂಬಂಧಪಟ್ಟುವು. ಇವುಗಳನ್ನೂ ಇದೇ ಜಾತಿಗೆ ಸೇರಿದ ಇತರ ವಸ್ತುಗಳನ್ನೂ ರಾಜನು ತನ್ನ ನಗರದಲ್ಲಿ ಶೇಖರಿಸಿ ಇಡಬೇಕು.

೬೨-೬೭. ಪಿಪ್ಪಲಿ, ಪಿಪ್ಪಲೀಮೂಲ, ಚವ್ಯ, ಚಿತ್ರಕ, ನಾಗರ, ಕುಬೇರಕ, ಮರಿಚಕ, ಶಿಗ್ರು, ಭಲ್ಲಾತ, ಸರ್ಷಪ, ಕುಷ್ಠ ಅಜಮೋದ, ಕಿಣಹಿ, ಹಿಂಗು, ಮೂಲಕ, ಧಾನ್ಯಕ, ಕಾರವಿ, ಕುಂಜಿಕಾ, ಯಾಜ್ಯಾ, ಸುಮುಖಾ, ಕಲಮಾಲಿಕಾ,

ಅಮೃತಾ ಚ ರುದಂತೀ ಚ ರೋಹಿಷಂ ಕುಂಕುಮಂ ತಥಾ ।
ಜಯಾ ಏರಂಡಕಾಂಡೀರಂ ಶಲ್ಲಕೀ ಹಂಜಿಕಾ ತಥಾ ॥೬೫॥

ಸರ್ವಪಿತ್ತಾನಿ ಮೂತ್ರಾಣಿ ಪ್ರಾಯೋ ಹರಿತಕಾನಿ ಚ ।
ಫಲಾನಿ ಚೈವ ಹಿ ತಥಾ ಸೂಕ್ಷ್ಮೈಲಾ ಹಿಂಗುಪತ್ರಿಕಾ ॥೬೬॥

ಏವಮಾದೀನಿ ಚಾನ್ಯಾನಿ ಗಣಃ ಕಟುಕಸಂಜ್ಞಿತಃ ।
ರಾಜಾ ಸಂಚಿನುಯಾದ್ದುರ್ಗೇ ಪ್ರಯತ್ನೇನ ನೃಪೋತ್ತಮ ॥೬೭॥

ಮುಸ್ತಂ ಚಂದನಹ್ರೀಬೇರಕೃತಮಾಲಕದಾರವಃ ।
ಹರಿದ್ರಾನಲದೋಶೀರನಕ್ತಮಾಲಕದಂಬಕಂ ॥೬೮॥

ದೂರ್ವಾ ಪಟೋಲಕಟುಕಾ ದಂತೀತ್ವಕ್ಪತ್ರಕಂ ತ್ವಚಾ ।
ಕಿರಾತತಿಕ್ತಭೂತುಂಬೀ ವಿಷಾ ಚಾತಿವಿಷಾ ತಥಾ ॥೬೯॥

ತಾಲೀಶಪತ್ರತಗರಂ ಸಪ್ತಪರ್ಣವಿಕಂಕತಾಃ ।
ಕಾಕೋದುಂಬರಿಕಾ ದಿವ್ಯಾಸ್ತಥಾ ಚೈವ ಸುರೋದ್ಭವಾ ॥೭೦॥

---

ಫಣಿಜ್ಝಕ, ಲಶುನ, ಭೂಸ್ತೃಣ, ಸುರಸ, ಕಾಯಸ್ಥಾ, ವಯಃಸ್ಥಾ, ಹರಿತಾಲ, ಮನಃಶಿಲಾ, ಅಮೃತಾ, ರುದಂತೀ, ರೋಹಿಷ, ಕುಂಕುಮ, ಜಯಾ, ಏರಂಡ, ಕಾಂಡೀರ, ಶಲ್ಲಕೀ, ಹಂಜಿಕಾ, ಅತಿವಿಷ, ಸೂಕ್ಷ್ಮೈಲಾ, ಹಿಂಗುಪತ್ರಿಕಾ ಇವೆಲ್ಲವೂ ಔಷಧಕ್ಕೆ ಉಪಯುಕ್ತವಾದ ವಸ್ತುಗಳು. ಇವುಗಳಲ್ಲದೆ ಅನೇಕ ಪ್ರಾಣಿಗಳ ಪಿತ್ತರಸ, ಮೂತ್ರ, ನಾನಾಜಾತಿಯ ಗಿಡಬಳ್ಳಿಗಳ ಬೇರು ಇವುಗಳೂ ಕೂಡ ಆವಶ್ಯಕವಾದುವು. ಇವೆಲ್ಲವೂ ಕಟುಗಣಕ್ಕೆ ಸೇರಿದುವು. ರಾಜನು ತನ್ನ ದುರ್ಗದಲ್ಲಿ ಇವುಗಳನ್ನು ಕೂಡಿಸಿ ಇಡಬೇಕು.

೬೮-೭೪. ಮುಸ್ತ, ಚಂದನ, ಹ್ರೀಬೇರ, ಕೃತಮಾಲ, ದಾರು, ಹರಿದ್ರಾ, ನಲದ, ಉಶೀರ, ನಕ್ತಮಾಲ, ಕದಂಬಕ, ದೂರ್ವಾ, ಪಟೋಲ, ಕಟುಕಾ, ದಂತೀತ್ವಕ್, ಪತ್ರಕ, ವಚಾ, ಕಿರಾತ, ತಿಕ್ತ, ಭೂತುಂಬಿ ವಿಷಾ, ಅತಿವಿಷಾ,

ಷಡ್ಗ್ರಂಥಾ ರೋಹಿಣೀ ಮಾಂಸೀ ಪರ್ಪಟಶ್ಚಾಥ ದಂತಿಕಾ ।
ರಸಾಂಜನಂ ಭೃಂಗರಾಜಂ ಪತಂಗೀ ಪರಿಪೇಲವಂ ॥೨೧॥

ದುಃಸ್ಪರ್ಶಾ ಗುರುಣೀ ಕಾಸೂ ಶ್ಯಾಮಾಕಂ ಗಂಧನಾಕುಲೀ ।
ತುಷಪರ್ಣೀ ವ್ಯಾಘ್ರನಖಂ ಮಂಜಿಷ್ಠಾ ಚತುರಂಗುಲಾ ॥೨೨॥

ರಂಭಾ ಚೈವಾಂಕುರಾಸ್ಫೋತಾ ತಾಲಾಸ್ಫೋತಾ ಹರೇಣುಕಾ ।
ವೇತ್ರಾಗ್ರವೇತಸಸ್ತುಂಬೀ ವಿಷಾಣೀ ಲೋಧ್ರಪುಷ್ಪಿಣೀ ॥೨೩॥

ಮಾಲತೀ ಕರಕೃಷ್ಣಾಖ್ಯಾ ವೃಶ್ಚಿಕಾ ಜೀವಿತಾ ತಥಾ ।
ಪರ್ಣಿಕಾ ಚ ಗುಡೂಚೀ ಚ ಸ ಗಣಸ್ತಿಕ್ತಸಂಜ್ಞಕಃ ॥೨೪॥

ಏವಮಾದೀನಿ ಚಾನ್ಯಾನಿ ರಾಜಾ ಸಂಚಿನುಯಾತ್ಪುರೇ ।
ಅಭಯಾಮಲಕೇ ಚೋಭೇ ತಥೈವ ಚ ಬಿಭೀತಕಂ ॥೨೫॥

ಪ್ರಿಯಂಗುಧಾತಕೀಪುಷ್ಪಂ ಮೋಚಾಖ್ಯಾ ಚಾರ್ಜುನಾಸನಾಃ ।
ಅನಂತಾ ಸ್ತ್ರೀತುವರಿಕಾ ಶ್ಯೋಣಾಕಂ ಕಟ್ಫಲಂ ತಥಾ ॥೨೬॥

---

ತಾಲೀಶಪತ್ರ, ತಗರ, ಸಪ್ತಪರ್ಣ, ವಿಕಂಕತ, ಕಾಕೋದುಂಬರ, ಸುರೋದ್ಭವಾ, ಷಡ್ಗ್ರಂಥಾ, ರೋಹಿಣೀ, ಜಟಾಮಾಂಸಿ, ಪರ್ಪಟ, ದಂತಿಕಾ, ರಸಾಂಜನ, ಭೃಂಗರಾಜ, ಪತಂಗೀ, ಪರಿಪೇಲವ, ದುಃಸ್ಪರ್ಶಾ, ಗುರುಣೀ, ಕಾಮಾ, ಶ್ಯಾಮಾಕ ಗಂಧನಾಕುಲಿ, ತುಷಪರ್ಣಿ, ವ್ಯಾಘ್ರನಖ, ಮಂಜಿಷ್ಠಾ, ಚತುರಂಗುಲಾ, ರಂಭಾ, ರಂಭಾಂಕುರ, ಸ್ಫೋತಾ, ತಾಲಾಸ್ಫೋತಾ, ಹರೇಣುಕಾ, ವೇತ್ರಾಗ್ರ, ವೇತಸ, ತುಂಬೀ, ವಿಷಾಣೀ, ಲೋಧ್ರಪುಷ್ಪಿಣೀ, ಮಾಲತೀ, ಕರಕೃಷ್ಣಾ, ವೃಶ್ಚಿಕಾ, ಜೀವಿತಾ ಪರ್ಣಿಕಾ, ಗುಡೂಚಿ ಇವುಗಳು ತಿಕ್ತಗಣಕ್ಕೆ ಸೇರಿದವು. ರಾಜನು ಇಂತಹವುಗಳನ್ನು ತನ್ನ ಪಟ್ಟಣದಲ್ಲಿ ಶೇಖರಿಸಬೇಕು.

೨೫-೬೧. ಎರಡು ಜಾತಿಯ ಅಭಯಗಳು ಮತ್ತು ಆಮಲಕಗಳು. ಬಿಭೀತಕ, ಪ್ರಿಯಂಗು, ಧಾತಕೀಪುಷ್ಪ, ಮೋಚಾ, ಅರ್ಜುನ, ಆಸನ, ಅನಂತಾ, ಸ್ತ್ರೀತುವರಿಕಾ, ಶ್ಯೋಣಾಕ, ಕಟ್ಫಲ, ಭೂರ್ಜಪತ್ರ, ಶಿಲಾಪತ್ರ, ಪಾಟಲಾಪತ್ರ, ಲೋಮಕ, ಸಮಂಗಾಮೂಲ, ತ್ರಿವೃತಾಮೂಲ, ಕಾರ್ಪಾಸ,

ಭೂರ್ಜಪತ್ರಂ ಶಿಲಾಪತ್ರಂ ಪಾಟಲಾಪತ್ರಲೋಮಕಂ ।
ಸಮಂಗಾತ್ರಿವೃತಾಮೂಲಕಾರ್ಪಾಸಂ ಗೈರಿಕಾಂಜನಂ ॥೭೭॥

ವಿದ್ರುಮಂ ಸಮಧೂಚ್ಛಿಷ್ಟಂ ಕುಂಭಿಕಾ ಕುಮುದೋತ್ಪಲಂ ।
ನ್ಯಗ್ರೋಧೋದುಂಬರಾಶ್ವತ್ಥಕಿಂಶುಕಾಃ ಶಿಂಶಪಾ ಶಮೀ ॥೭೮॥

ಪ್ರಿಯಾಲಪೀಲುಕಾಸಾರಿಶಿರೀಷಾಃ ಪದ್ಮಕಂ ತಥಾ ।
ಬಿಲ್ವೋಽಗ್ನಿಮಂಥಃ ಪ್ಲಕ್ಷಶ್ಚ ಶ್ಯಾಮಾಕಂ ಚ ಬಕೋಘನಂ ॥೭೯॥

ರಾಜಾದನಂ ಕರೀರಂ ಚ ಧಾನ್ಯಕಂ ಪ್ರಿಯಕಸ್ತಥಾ ।
ಕಂಕೋಲಾಶೋಕಬದರಾಃ ಕದಂಬಖದಿರದ್ವಯಂ ॥೮೦॥

ಏಷಾಂ ಪತ್ರಾಣಿ ಸಾರಾಣಿ ಮೂಲಾನಿ ಕುಸುಮಾನಿ ಚ ।
ಏವಮಾದೀನಿ ಚಾನ್ಯಾನಿ ಕಷಾಯಾಖ್ಯೋ ಗಣೋ ಮತಃ ॥೮೧॥

ಪ್ರಯತ್ನೇನ ನೃಪಶ್ರೇಷ್ಠ ರಾಜಾ ಸಂಚಿನುಯಾತ್ಪುರೇ ।
ಕೀಟಾಶ್ಚ ಮಾರಣೇ ಯೋಗ್ಯಾ ವ್ಯಂಗ್ಯತಾಯಾಂ ತಥೈವ ಚ ॥೮೨॥

ವಾತಧೂಮಾಂಬುಮಾರ್ಗಾಣಾಂ ದೂಷಣಾನಿ ತಥೈವ ಚ ।
ಧಾರ್ಯಾಣಿ ಪಾರ್ಥಿವೈರ್ದುರ್ಗೇ ತಾನಿ ವಕ್ಷ್ಯಾಮಿ ಪಾರ್ಥಿವ ॥೮೩॥

---

ಗೈರಿಕಾಂಜನ, ವಿದ್ರುಮ, ಮಧೂಚ್ಛಿಷ್ಟ, ಕುಂಭಿಕಾ, ಕುಮುದ, ಉತ್ಪಲ, ನ್ಯಗ್ರೋಧ, ಉದುಂಬರ, ಅಶ್ವತ್ಥ, ಕಿಂಶುಕ, ಶಿಂಶಪ, ಶಮಿ, ಪ್ರಿಯಾಲ, ಪೀಲು, ಕಾಸಾರಿ, ಶಿರೀಷ, ಪದ್ಮಕ, ಬಿಲ್ವ, ಅಗ್ನಿಮಂಥ, ಪ್ಲಕ್ಷ, ಶ್ಯಾಮಾಕ, ಬಕೋಘನ, ರಾಜಾದನ, ಕರೀರ, ಧಾನ್ಯಕ, ಪ್ರಿಯಕ, ಕಂಕೋಲ. ಅಶೋಕ, ಬದರ, ಕದಂಬ, ಖಧಿರದ್ವಯ ಇವುಗಳ ಎಲೆ, ಬೇರು, ಹೂ ಇವೆಲ್ಲವೂ ಸಾರವಾದುವು. ಇವು ಕಷಾಯಗಣಕ್ಕೆ ಸೇರಿದುವು. ಭೂಪತಿಯು ಇವುಗಳನ್ನು ಪ್ರಯತ್ನಪಟ್ಟು ಸಂಗ್ರಹಿಸಿ ಇಡಬೇಕು.

೮೨-೮೩. ಶತ್ರುಗಳನ್ನು ಕೊಲ್ಲುವುದಕ್ಕೂ, ಅಂಗಹೀನರನ್ನಾಗಿ ಮಾಡುವುದಕ್ಕೂ, ಗಾಳಿ, ಹೊಗೆ, ನೀರು ಇವುಗಳ ಸಂಚಾರಮಾರ್ಗಗಳಲ್ಲಿ ಸೇರಿ ರೋಗವನ್ನು ಹರಡುವುದಕ್ಕೂ ಶಕ್ತಿಯುಳ್ಳ ಕ್ರಿಮಿಕೀಟಗಳನ್ನೂ ವಿಷಪದಾರ್ಥಗಳನ್ನೂ ರಾಜನು ಸಂಗ್ರಹಿಸಬೇಕು.

ವಿಷಾಣಾಂ ಧಾರಣಂ ಕಾರ್ಯಂ ಪ್ರಯತ್ನೇನ ಮಹೀಭುಜಾ ।
ವಿಚಿತ್ರಾಶ್ಚಾಗದಾ ಧಾರ್ಯಾ ವಿಷಸ್ಯ ಶಮನಾಸ್ತಥಾ ॥೮೪॥

ರಕ್ಷೋಭೂತಪಿಶಾಚಘ್ನಾಃ ಪಾಪಘ್ನಾಃ ಪುಷ್ಟಿವರ್ಧನಾಃ ।
ಕಲಾವಿದಶ್ಚ ಪುರುಷಾಃ ಪುರೇ ಧಾರ್ಯಾಃ ಪ್ರಯತ್ನತಃ ॥೮೫॥

ಭೀತಾನ್ ಪ್ರಮತ್ತಾನ್ ಕುಪಿತಾಂಸ್ತಥೈವ ಚ ವಿಮಾನಿತಾನ್ ।
ಕುಭೃತ್ಯಾನ್ ಪಾಪಶೀಲಾಂಶ್ಚ ನ ರಾಜಾ ವಾಸಯೇತ್ಪುರೇ ॥೮೬॥

ಯಂತ್ರಾಯುಧಾಟ್ಟಾಲಚಯೋಪಪನ್ನಂ
ಸಮಗ್ರಧಾನ್ಯೌಷಧಿಸಂಪ್ರಯುಕ್ತಂ ।
ವಣಿಗ್ಜನೈಶ್ಚಾವೃತಮಾವಸೇತ
ದುರ್ಗಂ ಸುಗುಪ್ತಂ ನೃಪತಿಃ ಸದೈವ ॥೮೭॥

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ದುರ್ಗಸಂಪತ್ತಿಕಥನಂ ನಾಮ ಸಪ್ತದಶಾಧಿಕದ್ವಿಶತತಮೋಽಧ್ಯಾಯಃ**

---

೮೪. ಬಗೆಬಗೆಯ ವಿಷದ್ರವ್ಯಗಳನ್ನೂ ವಿಷಪರಿಹಾರಕವಾದ ವಿಚಿತ್ರಶಕ್ತಿಯುಳ್ಳ ಔಷಧಗಳನ್ನೂ ಭೂಪಾಲಕನು ಪ್ರಯತ್ನದಿಂದ ಕೂಡಿಡಬೇಕು.

೮೫. ರಾಕ್ಷಸರು, ಭೂತಗಳು, ಪಿಶಾಚಗಳು, ಪಾಪಿಷ್ಠರು ಇವರನ್ನು ಅಡಗಿಸಿ ಪುಷ್ಟಿಯನ್ನು ಕೊಡಬಲ್ಲ ಮಣಿಮಂತ್ರಮೂಲಿಕೆಗಳನ್ನು ಸಂಪಾದಿಸಬೇಕು. ಗೀತನೃತ್ಯಾದಿ ವಿವಿಧಕಲೆಗಳಲ್ಲಿ ಪರಿಣತರಾದವರಿಗೆ ಆಶ್ರಯವನ್ನು ಕೊಟ್ಟು ತನ್ನ ಆಸ್ಥಾನದಲ್ಲಿ ಇರಿಸಿಕೊಳ್ಳಬೇಕು.

೮೬. ಹೇಡಿಗಳು, ಉನ್ಮತ್ತರು, ಕೋಪಿಷ್ಠರು, ಅವಮಾನಿತರು, ಕೆಟ್ಟ ನಡತೆಯ ಅಧಿಕಾರಿಗಳು, ಪಾಪಸ್ವಭಾವದವರು ಇಂತಹವರನ್ನು ರಾಜನು ತನ್ನ ಪಟ್ಟಣದಲ್ಲಿ ಇರಗೊಡಿಸಬಾರದು.

೮೭. ಯಂತ್ರಗಳು, ಆಯುಧಗಳು, ಅಟ್ಟಲೆಗಳು ಇವುಗಳಿಂದ ಕೂಡಿ, ಧಾನ್ಯಗಳಿಂದಲೂ ಔಷಧಿಗಳಿಂದಲೂ ವರ್ತಕರಿಂದಲೂ ಪರಿಪೂರ್ಣವಾಗಿ, ಬಲವಾದ ರಕ್ಷಣೆಯಿಂದ ಯುಕ್ತವಾದ ಕೋಟೆಯೊಳಗೆ ಭೂಪಾಲಕನು ವಾಸ ಮಾಡಬೇಕು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ದುರ್ಗನಿರ್ಮಾಣದ ರೀತಿಯನ್ನೂ ಅದರಲ್ಲಿ ಸಂಗ್ರಹಿಸಬೇಕಾದ ದ್ರವ್ಯಗಳನ್ನೂ ತಿಳಿಸಿದೆ.

ರಾಜನು ವಿಧೇಯರಾದ ತನ್ನ ಸಾಮಂತರಾಜರ ದೇಶಗಳ ನಡುವೆ ವಾಸಮಾಡಬೇಕು. ಸುರಕ್ಷಿತವಾದ ಕಡೆಯಲ್ಲಿ ನಗರವನ್ನು ನಿರ್ಮಿಸಿಕೊಳ್ಳಬೇಕು. ಬಿಲ್ಲಿನ ಕೋಟೆ, ಮಣ್ಣಿನ ಕೋಟೆ, ಬೆಟ್ಟದ ಕೋಟೆ, ಮರದ ಕೋಟೆ ಮುಂತಾದುವುಗಳಲ್ಲಿ ಯಾವುದಾದರೂ ಒಂದು ಬಗೆಯ ಕೋಟೆಯನ್ನು ಕಟ್ಟಿಕೊಳ್ಳಬೇಕು. ಆದರೆ ಬೆಟ್ಟದ ಕೋಟೆಯೇ ಎಲ್ಲಕ್ಕಿಂತಲೂ ಶ್ರೇಷ್ಠವಾದುದು. ಕೋಟೆಯನ್ನು ಕಂದಕ, ಅಟ್ಟಳೆ, ಬುರುಜು ಇವುಗಳಿಂದ ಬಲವಾಗಿ ರಕ್ಷಿಸಬೇಕು.

ದುರ್ಗದೊಳಗೆ ಆಯುಧಶಾಲೆ, ಗಜಶಾಲೆ, ಅಶ್ವಶಾಲೆ, ದೇವಾಲಯ ಮುಂತಾದುವುಗಳನ್ನು ಆಯಾ ಸ್ಥಳಗಳಲ್ಲಿ ಕಟ್ಟಿಸಬೇಕು. ರಕ್ಷಣೆಗಾಗಿ ಆವಶ್ಯಕವಾದ ಸಕಲಸಿದ್ಧತೆಗಳನ್ನೂ ಮಾಡಿರಬೇಕು. ಬೇಕಾದಷ್ಟು ಧನಧಾನ್ಯಗಳು, ಅತ್ಯಂತ ಉಪಯುಕ್ತವಾದ ಮೂಲಿಕೆಗಳು, ಔಷಧಗಳು ಇವೆಲ್ಲವನ್ನೂ ಸಂಗ್ರಹಿಸಬೇಕು. ರಾಜನ ಹಿತೈಷಿಗಳು ಮಾತ್ರವೇ ಕೋಟೆಯಲ್ಲಿ ವಾಸಮಾಡಬೇಕು.

ಶ್ರೀಮತ್ಸ್ಯಮಹಾಪುರಾಣದಲ್ಲಿ ದುರ್ಗಸಂಪತ್ತಿಕಥನವೆಂಬ
ಇನ್ನೂರ ಹದಿನೇಳನೆಯ ಅಧ್ಯಾಯವು ಮುಗಿದುದು

## ಅಥಾಷ್ಟಾದಶಾಧಿಕದ್ವಿಶತತಮೋಽಧ್ಯಾಯಃ

|| ಮನುರುವಾಚ ||

ರಕ್ಷೋಘ್ನಾನಿ ವಿಷಘ್ನಾನಿ ಯಾನಿ ಧಾರ್ಯಾಣಿ ಭೂಭುಜಾ ।
ಅಗದಾನಿ ಸಮಾಚಕ್ಷ್ವ ತಾನಿ ಧರ್ಮಭೃತಾಂ ವರ || ೧ ||

|| ಮತ್ಸ್ಯ ಉವಾಚ ||

ಬಿಲ್ವಾಟಕೀ ಯವಕ್ಷಾರಂ ಪಾಟಲಾ ಬಾಹ್ಲಿಕೋಷಣಾಃ ।
ಶ್ರೀಪರ್ಣೀ ಶಲ್ಲಕೀಯುಕ್ತೋ ನಿಕ್ವಾಥಃ ಪ್ರೋಕ್ಷಣಂ ಪರಂ || ೨ ||

ಸವಿಷಂ ಪ್ರೋಕ್ಷಿತಂ ತೇನ ಸದ್ಯೋ ಭವತಿ ನಿರ್ವಿಷಂ ।
ಯವಸೈಂಧವಪಾನೀಯವಸ್ತ್ರಶಯ್ಯಾಸನೋದಕಂ || ೩ ||

---

೧. ಮನುಚಕ್ರವರ್ತಿ ಹೇಳಿದನು.—ಧರ್ಮಶೀಲರಲ್ಲಿ ಅಗ್ರಗಣ್ಯನಾದ ಓ ದೇವಾ, ರಾಕ್ಷಸರ ಬಾಧೆಯನ್ನೂ, ವಿಷಗಳ ದೋಷವನ್ನೂ ಪರಿಹರಿಸುವ ಸಲುವಾಗಿ ಯಾವಯಾವ ಔಷಧಗಳನ್ನು ರಾಜನು ಸಂಗ್ರಹಿಸಿ ಇಡಬೇಕು. ಅದನ್ನು ನನಗೆ ತಿಳಿಸು.

೨-೩. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಬಿಲ್ವಪತ್ರೆಯ ಹೀಚು, ಯವಕ್ಷಾರ, ಪಾದರಿಚಕ್ಕೆ, ಹಿಂಗು, ಮೆಣಸು, ಶಿವನಿಬೇರು, ನಾಯಿ ಬೇಲದಚಕ್ಕೆ ಇವುಗಳ ಕಷಾಯವನ್ನು ವಿಷಮಿಶ್ರವಾದ ಪದಾರ್ಥಗಳ ಮೇಲೆ ಚಿಮುಕಿಸಿದರೆ ಕೂಡಲೆ ವಿಷವು ಪರಿಹಾರವಾಗುವುದು. ಯವಧಾನ್ಯ, ಸೈಂಧವ ಲವಣ, ಪಾನದ್ರವ್ಯ, ವಸನ, ಶಯನ, ಆಸನ, ಉದಕ ಇಂತಹ ಉಪಯುಕ್ತವಾದ ಪದಾರ್ಥಗಳನ್ನು ಈ ಕಷಾಯದಿಂದ ಪ್ರೋಕ್ಷಿಸಿದರೆ ಅವುಗಳಲ್ಲಿ ವಿಷದ ದೋಷವು ನಾಶವಾಗುವುದು.

ಕವಚಾಭರಣಂ ಛತ್ರಂ ವಾಲವ್ಯಜನವೇಶ್ಮನಾಂ ।
ಶೇಲುಃ ಪಾಟಲ್ಯತಿವಿಷಾ ಶಿಗ್ರು ಮೂರ್ವಾ ಪುನರ್ನವಾ ॥ ೪ ॥

ಸಮಂಗಾ ವೃಷಮೂಲಂ ಚ ಕಪಿತ್ಥವೃಷಶೋಷಿತಂ ।
ಸಹದೇವಾ ಹರಿದ್ರೇ ತು ವಿಶನಾಶಂ ಪ್ರಕೀರ್ತಿತಂ ॥ ೫ ॥

ಲಾಕ್ಷಾಪ್ರಿಯಂಗುಮಂಜಿಷ್ಠಾ ಸಮಮೇಲಾ ಹರೇಣುಕಾ ।
ಯಷ್ಟ್ಯಾಹ್ವಾ ಮಧುರಾ ಚೈವ ಬಭ್ರುಪಿತ್ತೇನ ಕಲ್ಪಿತಾಃ ॥ ೬ ॥

ನಿಖನೇದ್ಗೋವಿಷಾಣಸ್ಥಂ ಸಪ್ತರಾತ್ರಂ ಮಹೀತಲೇ ।
ತತಃ ಕೃತ್ವಾ ಮಣಿಂ ಹೇಮ್ನಾ ಬದ್ಧಂ ಹಸ್ತೇನ ಧಾರಯೇತ್ ॥ ೭ ॥

ಸಂಸ್ಪೃಷ್ಟಂ ಸವಿಷಂ ತೇನ ಸದ್ಯೋ ಭವತಿ ನಿರ್ವಿಷಂ ।
ಮನೋಹ್ವಯಾ ಶಮೀಪತ್ರಂ ತುಂಬಿಕಾ ಶ್ವೇತಸರ್ಷಪಾಃ ॥ ೮ ॥

---

೪-೫. ಚಿಳ್ಳಿ, ಪಾದರೀ ಅತಿಬಜೆ, ನುಗ್ಗೆ, ಕೊರಟಗೆ, ಕೋವೆ, ಮಂಜಿಷ್ಠ, ಆಡುಸೋಗೆ, ಬೇಲ, ಅರಳಿ, ಕೆಂಪುಗಂಧ, ಸಹದೇವಿ, ಅರಸಿನ, ಮರದರಸಿನ ಇವೆಲ್ಲವೂ ವಿಷನಾಶನಿಗಳು. ಇವುಗಳ ಕಷಾಯವನ್ನು ಕವಚ, ಆಭರಣ, ಛತ್ರ, ಚಾಮರ, ಗೃಹ ಇವುಗಳಿಗೆ ಪ್ರೋಕ್ಷಿಸಿದರೆ ವಿಷದ ಬಾಧೆ ತೊಲಗುವುದು.

೬-೭. ಅರಗು, ಪ್ರೇಂಖಣದ ಚಕ್ಕೆ, ಮಂಜಿಷ್ಠೆ, ಏಲಕ್ಕಿ, ರೇಣುಕೆಯ ಬೀಜ, ಅತಿಮಧುರ ಇವುಗಳನ್ನು ಮುಂಗಸಿಯ ಪಿತ್ತರಸದೊಡನೆ ಬೆರಸಿ, ಎತ್ತಿನ ಕೊಂಬಿನಲ್ಲಿಟ್ಟು ಏಳು ರಾತ್ರಿ ನೆಲದೊಳಗೆ ಹೂಳಬೇಕು. ಬಳಿಕ ಅದನ್ನು ಚೆನ್ನಾಗಿ ಅರೆದು ಮಣಿಗಳಾಗಿ ಮಾಡಿ ಚಿನ್ನದ ತಂತಿಯಲ್ಲಿ ಪೋಣಿಸಿ ಕೈಗೆ ಕಟ್ಟಿಕೊಳ್ಳಬೇಕು. ವಿಷಮಿಶ್ರವಾದ ಪದಾರ್ಥಗಳಿಗೆ ಅದು ತಗಲಿದಕೂಡಲೆ ವಿಷದ ದೋಷವು ದೂರವಾಗುವುದು.

೮-೯. ಮಣಸಿಲೆ, ಬನ್ನಿಯೆಲೆ, ತುಂಬೇಯೆಲೆ, ಬಿಳೀಸಾಸುವೆ, ಬೇಲದ ಹಣ್ಣಿನ ಕರಟ, ಚಂಗಲುಕೋಷ್ಠ, ಮಂಜಿಷ್ಠೆ ಇವುಗಳನ್ನು ನಾಯಿಯ ಅಥವಾ

ಕಪಿತ್ಥಕುಷ್ಠಮಂಜಿಷ್ಠಾಃ ಪಿತ್ತೇನ ಶ್ಲಕ್ಷ್ಣಚೂರ್ಣಿತಾಃ ।
ಶುನೋ ಗೋಃ ಕಪಿಲಾಯಾಶ್ಚ ಸೌಮ್ಯಾಕ್ಷಿಪ್ತೋಽಪರೋಗದಃ ॥ ೯ ॥

ವಿಷಜಿತ್ಪರಮಂ ಕಾರ್ಯಂ ಮಣಿರತ್ನಂ ಚ ಪೂರ್ವವತ್ ।
ಮೂಷಿಕಾ ಜತುಕಾ ಚಾಪಿ ಹಸ್ತೇ ಬದ್ಧ್ವಾ ವಿಷಾಪಹಾ ॥೧೦॥

ಹರೇಣುಮಾಂಸೀ ಮಂಜಿಷ್ಠಾ ರಜನೀ ಮಧುಕಾ ಮಧು ।
ಅಕ್ಷತ್ವಕ್ಸುರಸಂ ಲಾಕ್ಷಾ ಶ್ವಪಿತ್ತಂ ಪೂರ್ವವದ್ಭುವಿ ॥೧೧॥

ವಾದಿತ್ರಾಣಿ ಪತಾಕಾಶ್ಚ ಪಿಷ್ಟೈರೇತೈಃ ಪ್ರಲೇಪಿತಾಃ ।
ಶ್ರುತ್ವಾ ದೃಷ್ಟ್ವಾ ಸಮಾಘ್ರಾಯ ಸದ್ಯೋ ಭವತಿ ನಿರ್ವಿಷಃ ॥೧೨॥

ತ್ರ್ಯೂಷಣಂ ಪಂಚಲವಣಂ ಮಂಜಿಷ್ಠಾ ರಜನೀದ್ವಯಂ ।
ಸೂಕ್ಷ್ಮೈಲಾ ತ್ರಿವೃತಾಪತ್ರಂ ವಿಡಂಗಾನೀಂದ್ರವಾರುಣೀ ॥೧೩॥

---

ಕಪಿಲವರ್ಣದ ಹಸುವಿನ ಪಿತ್ತರಸದಲ್ಲಿ ನುಣ್ಣಗೆ ಅರೆದು ಮತ್ತೊಂದು ಬಗೆಯ ವಿಷನಾಶಕವಾದ ಔಷಧವನ್ನು ಸಿದ್ಧಪಡಿಸಬಹುದು.

೧೦. ಏಲಕ್ಕಿಯ ಬೇರು, ಚಕ್ರವರ್ತಿನಿಯೆಂಬ ವನಸ್ಪತಿಯ ಬೇರು ಇವುಗಳಿಂದಲೂ ಮೇಲೆ ಹೇಳಿದಂತೆ ವಿಷನಾಶಕವಾದ ಮಣಿಗಳನ್ನು ಮಾಡಬಹುದು. ಇವುಗಳನ್ನು ಕೈಗೆ ಕಟ್ಟಿಕೊಂಡರೂ ಕೂಡ ವಿಷದ ದೋಷವು ಹೋಗುವುದು.

೧೧-೧೨. ರೇಣುಕೆಯ ಬೀಜ, ಜಟಾಮಾಂಸಿ, ಮಂಜಿಷ್ಠೆ, ಅರಸಿನ, ಅತಿಮಧುರ, ಜೇನುತುಪ್ಪ ತಾರೆಯಚಕ್ಕೆ, ಈಶ್ವರೀಬೇರು, ಅರಗು ಇವುಗಳನ್ನು ನಾಯಿಯ ಪಿತ್ತರಸದಲ್ಲಿ ಬೆರಸಿ ಹಿಂದೆಹೇಳಿದಂತೆ ಏಳುದಿನ ನೆಲದಲ್ಲಿ ಹೂಳಿಟ್ಟು ಹಿಟ್ಟಿನಂತೆ ಚೆನ್ನಾಗಿ ಅರೆಯಬೇಕು. ಅವನ್ನು ವಾದ್ಯಗಳಿಗೂ ಬಾವುಟಗಳಿಗೂ ಲೇಪಿಸಬಹುದು. ಈ ಔಷಧವನ್ನು ನೋಡಲಿ, ಮೂಸಿನೋಡಲಿ, ಕೊನೆಗೆ ಇದರ ಹೆಸರನ್ನಾದರೂ ಕೇಳಲಿ ಕೂಡಲೆ ವಿಷವು ಪರಿಹಾರವಾಗುವುದು.

೧೩-೧೮. ಹಿಪ್ಪಲಿ, ಮೆಣಸು, ಶುಂಠಿ, ಸಮುದ್ರಲವಣ, ಸೈಂಧವಲವಣ, ಬಿಡಲವಣ, ಕಾಚಲವಣ, ಸೌವರ್ಚಲವಣ, ಮಂಜಿಷ್ಠೆ, ಅರಸಿನ, ಮರದರಸಿನ ಕಿರಿಯೇಲಕ್ಕಿ, ತಿಗಡೆಯೆಲೆ, ವಾಯಿವಳಂಗ, ಹಾವುಮೆಕ್ಕೆ, ಅತಿಮಧುರ, ನೀರಂಜಿಚಕ್ಕೆ,

ಮಧುಕಂ ವೇತಸಂ ಕ್ಷೌದ್ರಂ ವಿಷಾಣೇ ಚ ನಿಧಾಪಯೇತ್ ।
ತಸ್ಮಾದುಷ್ಣಾಂಬುನಾ ಮಾತ್ರಂ ಪ್ರಾಗುಕ್ತಂ ಯೋಜಯೇತ್ತತಃ ॥೧೪॥

ವಿಷಭುಕ್ತಂ ಜರಂ ಯಾತಿ ನಿರ್ವಿಷಂ ಪಿತ್ತದೋಷಕೃತ್ ।
ಶುಕ್ಲಂ ಸರ್ಜರಸೋಪೇತಂ ಸರ್ಷಪಾ ಏಲವಾಲುಕೈಃ ॥೧೫॥

ಸುವೇಗಾತಸ್ಕರಸುರೌ ಕುಸುಮೈರರ್ಜುನಸ್ಯ ತು ।
ಧೂಪೋ ವಾಸಗೃಹೇ ಹಂತಿ ವಿಷಂ ಸ್ಥಾವರಜಂಗಮಂ ॥೧೬॥

ನ ತತ್ರ ಕೀಟಾ ನ ವಿಷಂ ದರ್ದುರಾ ನ ಸರೀಸೃಪಾಃ ।
ನ ಕೃತ್ಯಾ ಕರ್ಮಣಾಂ ಚಾಪಿ ಧೂಪೋಽಯಂ ಯತ್ರ ದಹ್ಯತೇ ॥೧೭॥

ಕಲ್ಪಿತೈಶ್ಚಂದನಕ್ಷೀರಪಲಾಶದ್ರುಮವಲ್ಕಲೈಃ ।
ಮೂಲೈಲಾವಾಲುಸರಳಾನಾಕುಲೀ ತಂಡುಲೀಯಕೈಃ ॥೧೮॥

---

ಜೇನುತುಪ್ಪ ಇವುಗಳನ್ನು ಹಸುವಿನ ಕೊಂಬಿನೊಳಗಿಟ್ಟು ನೆಲದಲ್ಲಿ ಏಳುದಿನ ಹೂಳಬೇಕು. ತರುವಾಯ ಚೂರ್ಣಮಾಡಿ ಪ್ರಮಾಣಾನುಗುಣವಾಗಿ ಊಟಕ್ಕೆ ಮೊದಲು ಬಿಸಿನೀರಿನಲ್ಲಿ ಸೇವಿಸಬೇಕು. ಆಹಾರದಲ್ಲಿ ಸೇರಿದ ವಿಷವು ಇದರಿಂದ ಜೀರ್ಣವಾಗುವುದು. ವಿಷನಿವೃತ್ತಿಯಾದ ಮೇಲೂ ಸೇವಿಸುತ್ತಿದ್ದರೆ ಪಿತ್ತದೋಷ ಉಂಟುಮಾಡುವುದು.

೧೫-೧೭. ಬಿಳೀಜೀರಿಗೆ, ಧೂಪ, ಸಾಸುವೆ, ಏಲಾವಾಲುಕ, ಗಂಗುಂಗೆ ಬೀಜ, ಕಾಗೆತೊಂಡೆ, ದೇವದಾರು ಚಕ್ಕೆ ಇವುಗಳನ್ನು ಮತ್ತಿಯ ಹೂವಿನೊಡನೆ ಸೇರಿಸಿ ಪುಡಿಮಾಡಿ ವಾಸದ ಮನೆಯಲ್ಲಿ ಹೊಗೆಹಾಕಿದರೆ ಚರಾಚರವಸ್ತು ಸಂಬಂಧವಾದ ವಿಷವು ನಾಶವಾಗುವುದು. ಅಲ್ಲಿ ಕ್ರಿಮಿಕೀಟಗಳು, ಕಪ್ಪೆಗಳು, ಬೇರೆ ತೆರನಾದ ವಿಷಪ್ರಾಣಿಗಳು ಯಾವುವೂ ಸುಳಿಯುವುದಿಲ್ಲ. ಈ ಪುಡಿಯ ಧೂಪವನ್ನು ಹಾಕಿದ ಕಡೆಯಲ್ಲಿ ಮಾಟ, ಮಾಯೆ ಇವುಗಳ ಕಾಟವೂ ಕೂಡ ತಪ್ಪುವುದು.

೧೮. ಶ್ರೀಗಂಧ, ಹಾಲೆತೊಗಟೆ, ಮುತ್ತುಗದತೊಗಟೆ, ಕೊರಟಗೆ, ಏಲಾವಾಲು, ಕೆಂಪುತಿಗಡೆಯ ಚಕ್ಕೆ, ಈಶ್ವರೀಬೇರು, ಕಿರಗುಸೋಲೆ ಸೊಪ್ಪು, ಗಣಿಕೇಗಿಡ ಇವುಗಳ ಕಷಾಯವು ಸ್ನಾನಪಾನಾದಿ ಸಕಲವಿಧ ಕಾರ್ಯಗಳಿಗೂ ಪ್ರಶಸ್ತವಾದುದು.

ಕ್ವಾಥಃ ಸರ್ವೋದಕಾರ್ಯೇಷು ಕಾಕಮಾಚೀಯುತೋ ಹಿತಃ ।
ರೋಚನಾಪತ್ರನೇಪಾಲೀಕುಂಕುಮೈಸ್ತಿಲಕಾನ್ ವಹನ್ ॥೧೯॥

ವಿಷೈರ್ನ ಬಾಧ್ಯತೇಽಸ್ಮಾಚ್ಚ ನರನಾರೀನೃಪಪ್ರಿಯಃ ।
ಚೂರ್ಣೈರ್ಹರಿದ್ರಾಮಂಜಿಷ್ಠಾಕಿಣಿಹೀಕಣನಿಂಬಜೈಃ ॥೨೦॥

ದಿಗ್ಧಂ ನಿರ್ವಿಷತಾಮೇತಿ ಗಾತ್ರಂ ಸರ್ವವಿಷಾರ್ದಿತಂ ।
ಶಿರೀಷಸ್ಯ ಫಲಂ ಪತ್ರಂ ಪುಷ್ಪಂ ತ್ವಙ್ಮೂಲಮೇವ ಚ ॥೨೧॥

ಗೋಮೂತ್ರಘೃಷ್ಟೋ ಹ್ಯಗದಃ ಸರ್ವಕರ್ಮಕರಃ ಸ್ಮೃತಃ ।
ಏಕವೀರ ಮಹೌಷಧ್ಯಃ ಶೃಣು ಚಾತಃ ಪರಂ ನೃಪ ॥೨೨॥

ವಂಧ್ಯಾ ಕರ್ಕೋಟಕೀ ರಾಜನ್ ವಿಷ್ಣುಕ್ರಾಂತಾ ತಥೋತ್ಕಟಾ ।
ಶತಮೂಲೀ ಸಿತಾನಂದಾ ಬಲಾ ಮೋಚಾ ಪಟೋಲಿಕಾ ॥೨೩॥

---

೧೯. ಗೋರೋಚನ, ತಾಳೀಶಪತ್ರೆ, ಮಣಸಿಲೆ, ಕುಂಕುಮಕೇಸರಿ ಇವುಗಳ ಚೂರ್ಣದಿಂದ ತಿಲಕವನ್ನು ಹಚ್ಚಿಕೊಂಡವನಿಗೆ ವಿಷದ ಬಾಧೆ ತಟ್ಟದು. ಆತನು ಪುರುಷರ, ಸ್ತ್ರೀಯರ ಮತ್ತು ಅರಸನ ಪ್ರೀತಿಗೆ ಪಾತ್ರನಾಗುವನು.

೨೦. ಅರಿಸಿನ, ಮಂಜಿಷ್ಠೆ, ಉತ್ತರಣಿ, ಹಿಪ್ಪಲಿ, ಬೇವಿನಚಿಕ್ಕೆ ಇವುಗಳ ಚೂರ್ಣವನ್ನು ಮೈಗೆ ಹಚ್ಚಿಕೊಂಡರೆ ಎಲ್ಲಬಗೆಯ ವಿಷಬಾಧೆಗಳೂ ಪರಿಹಾರ ವಾಗುವುವು.

೨೧-೨೨. ಬಾಗೆಯ ಕಾಯಿ, ಎಲೆ, ಹೂ, ಚಕ್ಕೆ, ಬೇರು ಇವುಗಳನ್ನು ಗೋಮೂತ್ರದಲ್ಲಿ ಅರೆದು ಸಿದ್ಧಪಡಿಸಿದ ಔಷಧವು ಎಲ್ಲ ಬಗೆಯ ವಿಷದ ಮೇಲೂ ಪರಿಣಾಮಕಾರಿಯಾಗಿ ಕೆಲಸಮಾಡಬಲ್ಲುದು. ಓ ರಾಜಾ, ಇನ್ನುಮುಂದೆ ಸುಪ್ರಸಿದ್ಧವಾದ ಮೂಲಿಕೆಗಳ ಹೆಸರನ್ನು ಹೇಳುವೆನು ಕೇಳು.

೨೩-೩೫ ಕಾಡುಹಾಗಲ, ಕರ್ಕೋಟಕಿ, ವಿಷ್ಣುಕ್ರಾಂತಿ, ಲವಂಗ, ಶತಮೂಲಿ, ಬಾವಂತಿ, ರಾಮಫಲ, ಕಳ್ಳಂಗಡಲೆ, ಬೂರುಗ, ಪಡವಲ, ಒಂದೆಲಗ,

ಸೋಮಾ ಪಿಂಡಾ ನಿಶಾ ಚೈವ ತಥಾ ದಗ್ಧರುಹಾ ಚ ಯಾ ।
ಸ್ಥಲೀ ಕಮಲಿನೀ ಯಾ ಚ ವಿಶಾಲೀ ಶಂಖಮೂಲಿಕಾ ॥೨೪॥

ಚಾಂಡಾಲೀ ಹಸ್ತಿಮಗಧಾ ಗೋಜಾಪರ್ಣೀ ಕರಂಭಿಕಾ ।
ರಕ್ತಾ ಚೈವ ಮಹಾರಕ್ತಾ ತಥಾ ಬರ್ಹಿಶಿಖಾ ಚ ಯಾ ॥೨೫॥

ಕೋಶಾತಕೀ ನಕ್ತಮಾಲಂ ಪ್ರಿಯಾಲಂ ಚ ಸುಲೋಚನೀ ।
ವಾರುಣೀ ವಸುಗಂಧಾ ಚ ತಥಾ ವೈ ಗಂಧನಾಕುಲೀ ॥೨೬॥

ಈಶ್ವರೀ ಶಿವಗಂಧಾ ಚ ಶ್ಯಾಮಲಾ ವಂಶನಾಲಿಕಾ ।
ಜತುಕಾಲೀ ಮಹಾಶ್ವೇತಾ ಶ್ವೇತಾ ಚ ಮಧುಯಷ್ಟಿಕಾ ॥೨೭॥

ವಜ್ರಕಃ ಪಾರಿಭದ್ರಶ್ಚ ತಥಾ ವೈ ಸಿಂಧುವಾರಕಾಃ ।
ಜೀವಾನಂದಾ ವಸುಚ್ಛಿದ್ರಾ ನತನಾಗರಕಂಟಕಾ ॥೨೮॥

ನಾಲಂ ಚ ಜಾಲೀ ಜಾತೀ ಚ ತಥಾ ಚ ವಟಪತ್ರಿಕಾ ।
ಕಾರ್ತಸ್ವರಂ ಮಹಾನೀಲಾ ಕುಂದುರುರ್ಹಂಸಪಾದಿಕಾ ॥೨೯॥

---

ಖರ್ಜೂರ, ಅರಸಿನ, ದಗ್ಧರುಹಾ, ನೆಲದಾವರೆ, ಹಾವುಮೆಕ್ಕೆ ಗಿರಿಕರ್ಣಿಕೆ, ಇಲಿಕಿವಿ, ಆನೆಹಿಪ್ಪಲಿ, ಕೊರಟಿಗೆ, ಆಡುಮುಟ್ಟದಸೊಪ್ಪು, ಉತ್ತರಣೆ, ಕೆಂಪು ಉತ್ತರಣೆ, ಬರ್ಹಿಶಿಖಾ, ಹೀರೆ, ಹೊಂಗೆ, ಪ್ರಿಯಾಲ, ಕಗ್ಗಲಿ, ವಾರುಣಿ, ವಸುಗಂಧಾ, ನಂಜಾರೆ, ಈಶ್ವರಿ, ಶಿವಗಂಧಾ, ಅಶ್ವಗಂಧಾ, ವಂಶನಾಳಿಕಾ, ಜತುಕಾಲಿ, ನೆಲಗುಂಬಳ, ಬಿಳೀಗುಳ್ಳ, ಇಷ್ಟಮಧುಕ, ವಜ್ರಕ ದೇವದಾರು, ಲಕ್ಕಿ, ಜೀವಕ, ನಂದಾ, ಮೇದೆ, ಗ್ರಂಥಿಕತತಗರ, ಒಣಶುಂಠಿ, ನೆಗ್ಗಿಲು, ನಾಲ, ಜಾಲಿ, ಜಾತಿ, ಆಲದೆಲೆ, ಕಾರ್ತಸ್ವರ ಮಹಾನೀಲ, ಧೂಪ, ಹಂಸಪಾದಿ, ಮಂಡೂಕ ಪರ್ಣಿ, ವಾರಾಹಿ, ಕಿರಗುಸೊಲೆ, ಸರ್ಪಾಕ್ಷಿ, ಲವಲಿ, ಬ್ರಾಹ್ಮಿ, ಅತಿಬಜೆ, ಸುಖಾಕಾರಾ, ರುಜಾಪಹಾ, ವೃದ್ಧಿಕರಿ, ಶಲ್ಯದಾ, ಲವಂಗಪತ್ರಿ, ಕಟುಕರೋಹಿಣಿ,

ಮಂಡೂಕಪರ್ಣೀ ವಾರಾಹೀ ದ್ವೇ ತಥಾ ತಂಡುಲೀಯಕೇ ।
ಸರ್ಪಾಕ್ಷೀ ಲವಲೀ ಬ್ರಾಹ್ಮೀ ವಿಶ್ವರೂಪಾ ಸುಖಾಕರಾ ॥೩೦॥

ರುಜಾಪಹಾ ವೃದ್ಧಿಕರೀ ತಥಾ ಚೈವ ತು ಶಲ್ಯದಾ ।
ಪತ್ರಿಕಾ ರೋಹಿಣೀ ಚೈವ ರಕ್ತಮಾಲಾ ಮಹೌಷಧೀ ॥೩೧॥

ತಥಾಮಲಕವಂದಾಕಂ ಶ್ಯಾಮಚಿತ್ರಫಲಾ ಚ ಯಾ ।
ಕಾಕೋಲೀ ಕ್ಷೀರಕಾಕೋಲೀ ಪೀಲುಪರ್ಣೀ ತಥೈವ ಚ ॥೩೨॥

ಕೇಶಿನೀ ವೃಶ್ಚಿಕಾಲೀ ಚ ಮಹಾನಾಗಾ ಶತಾವರೀ ।
ಗರುಡೀ ಚ ತಥಾ ವೇಗಾ ಜಲೇ ಕುಮುದಿನೀ ತಥಾ ॥೩೩॥

ಸ್ಥಲೇ ಚೋತ್ಪಲಿನೀ ಯಾ ಚ ಮಹಾಭೂಮಿಲತಾ ಚ ಯಾ ।
ಉನ್ಮಾದಿನೀ ಸೋಮರಾಜೀ ಸರ್ವರತ್ನಾನಿ ಪಾರ್ಥಿವ ॥೩೪॥

ವಿಶೇಷಾನ್ಮರಕತಾದೀನಿ ಕೀಟಪಕ್ಷಂ ವಿಶೇಷತಃ ।
ಜೀವಜಾತಾಶ್ಚ ಮಣಯಃ ಸರ್ವೇ ಧಾರ್ಯಾಃ ಪ್ರಯತ್ನತಃ ॥೩೫॥

---

ರಕ್ತಮಾಲಾ, ಶುಂಠಿ, ಆಮಲಕ, ಬದನಿಕೆ, ದತ್ತೂರ, ಚಿತ್ರಫಲಾ, ಕಾಕೋಲಿ, ಕ್ಷೀರಕಾಕೋಲಿ, ಪೀಲುಕರ್ಣಿ, ಕೇಶಿನಿ, ಚೇಳುಕೊಂಡಿ, ಮಹಾನಾಗಾ, ಅಷಾಢೀ, ಗರುಡೀ, ವೇಗಾ, ನೀರುನೈದಿಲೆ, ನೆಲನೈದಿಲೆ, ಮಹಾಭೂಮಿಲತೆ, ಉನ್ಮಾದಿನಿ, ಸೋಮರಾಜಿ, ಇವೆಲ್ಲವೂ ಅತಿಶ್ರೇಷ್ಠವಾದ ಮತ್ತು ಉಪಯುಕ್ತಗಳಾದ ಮೂಲಿಕೆ ಗಳು. ಇವುಗಳನ್ನು ರಾಜನು ಅವಶ್ಯವಾಗಿ ಸಂಗ್ರಹಿಸಬೇಕು. ಇಷ್ಟೇ ಅಲ್ಲದೆ ಬಗೆ ಬಗೆಯ ರತ್ನಗಳನ್ನೂ ಅದರಲ್ಲೂ ಮುಖ್ಯವಾಗಿ ಪಚ್ಚೆಯನ್ನೂ ಕೀಟಪಕ್ಷಗಳನ್ನೂ, ಸರ್ಪ, ಗಜ ಮುಂತಾದ ಪ್ರಾಣಿಗಳ ಶರೀರದಲ್ಲಿ ಉತ್ಪನ್ನವಾದ ಮಣಿವಿಶೇಷಗಳನ್ನೂ ಶೇಖರಿಸಿ ಇಡಬೇಕು.

ರಕ್ಷೋಘ್ನಾಶ್ಚ ವಿಷಘ್ನಾಶ್ಚ ಕೃತ್ಯಾವೈತಾಲನಾಶನಾಃ ।
ವಿಶೇಷಾನ್ನರನಾಗಾಶ್ಚ ಗೋಖರೋಷ್ಟ್ರಸಮುದ್ಭವಾಃ ॥೩೬॥

ಸರ್ಪತಿತ್ತಿರಗೋಮಾಯುಬಭ್ರುಮಂಡುಕಜಾಶ್ಚ ಯೇ ।
ಸಿಂಹವ್ಯಾಘ್ರರ್ಕ್ಷಮಾರ್ಜಾರದ್ವಿಪವಾನರಸಂಭವಾಃ ।
ಕಪಿಂಜಲಾಗಜಾವಾಜಿಮಹಿಷ್ಯೈಣಭವಾಶ್ಚ ಯೇ ॥೩೭॥

ಇತ್ಯೇವಮೇತೈಃ ಸಕಲೈರುಪೇತೈ
ದ್ರವ್ಯೈಃ ಪರಾರ್ಘ್ಯೈಃ ಪರಿರಕ್ಷಿತಃ ಸ್ಯಾತ್ ।
ರಾಜಾ ವಸೇತ್ತತ್ರ ಗೃಹೇ ಸುಶುಭ್ರೇ
ಗುಣಾನ್ವಿತೇ ಲಕ್ಷಣಸಂಪ್ರಯುಕ್ತೇ ॥೩೮॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇಽಗದಾಧ್ಯಯೋ ನಾಮಾಷ್ಟಾದಶಾಧಿಕ ದ್ವಿಶತತಮೋಽಧ್ಯಾಯಃ

---

೩೬-೩೭. ರಾಕ್ಷಸರ ಭೀತಿಯನ್ನೂ, ವಿಷದ ಭಾಧೆಯನ್ನೂ, ಭೂತಬೇತಾಳಗಳ ಉಪದ್ರವವನ್ನೂ ಪರಿಹರಿಸುವ ಮಣಿಮಂತ್ರೌಷಧಾದಿಗಳನ್ನೂ ಸಂಪಾದಿಸಬೇಕು. ಆನೆ, ಹಸು, ಕತ್ತೆ, ಒಂಟೆ, ಹಾವು, ಹಸುಬನಹಕ್ಕಿ, ನರಿ, ಮುಂಗುಸಿ, ಕಪ್ಪೆ, ಸಿಂಹ, ಹುಲಿ, ಬೆಕ್ಕು, ಕಪಿ, ಚಾತಕ, ಹೆಣ್ಣಾನೆ, ಕುದುರೆ, ಕೋಣ, ಜಿಂಕೆ ಇವುಗಳ ದೇಹದಲ್ಲಿರುವ ಮಣಿಗಳನ್ನು (ಗ್ರಂಥಿವಿಶೇಷಗಳನ್ನು) ರಾಜನು ಶೇಖರಿಸಬೇಕು

೩೮. ಮೇಲೆ ಹೇಳಿದ ಎಲ್ಲ ಬಗೆಯ ಉತ್ತಮವಾದ ವಸ್ತುಗಳಿಂದ ಅರಸನು ವಿಷದ ಭಾಧೆ, ಭೂತಪೀಡೆ ಮುಂತಾದವುಗಳಿಂದ ರಕ್ಷಣೆಯನ್ನು ಪಡೆದು ನಿರ್ಮಲವೂ ಸಲಕ್ಷಣವೂ, ಸುಗುಣಪೂರ್ಣವೂ ಆದ ಅರಮನೆಯಲ್ಲಿ ವಾಸಮಾಡಬೇಕು.

## ಅಧ್ಯಾಯ ೨೧೮

### ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ರಾಜನು ವಿಷದಬಾಧೆ, ಭೂತಪೀಡೆ ಮುಂತಾದುವುಗಳಿಂದ ಪಾರಾಗುವುದಕ್ಕಾಗಿ ಸಂಗ್ರಹಿಸಿ ಇಡಬೇಕಾದ ಔಷಧವಿಶೇಷಗಳನ್ನು ವಿವರಿಸಿದೆ. ಇವುಗಳಲ್ಲಿ ಕೆಲವು ಸೇವನೆಗೆ ತಕ್ಕುವು. ಇನ್ನು ಕೆಲವು ಲೇಪ ಹಾಕತಕ್ಕುವು. ಹಲವು ಧೂಪಹಾಕತಕ್ಕುವು. ಬಗೆಬಗೆಯ ಮಣಿಗಳು ಬಂಗಾರದ ತಂತಿಯಲ್ಲಿ ಪೋಣಿಸಿ ಕೈಗೆ ಕಟ್ಟಿಕೊಳ್ಳತಕ್ಕುವು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಅಗದಾಧ್ಯಾಯವೆಂಬ ಇನ್ನೂರಹದಿನೆಂಟನೆಯ ಅಧ್ಯಾಯವು ಮುಗಿದುದು



## ಅಥೈಕೋನವಿಂಶತ್ಯಧಿಕದ್ವಿಶತತಮೋಽಧ್ಯಾಯಃ

|| ಮನುರುವಾಚ ||

ರಾಜರಕ್ಷಾರಹಸ್ಯಾನಿ ಯಾನಿ ದುರ್ಗೇ ನಿಧಾಪಯೇತ್ ।
ಕಾರಯೇದ್ವಾ ಮಹೀಭರ್ತಾ ಬ್ರೂಹಿ ತತ್ತ್ವಾನಿ ತಾನಿ ಮೇ || ೧ ||

|| ಮತ್ಸ್ಯ ಉವಾಚ ||

ಶಿರೀಷೋದುಂಬರಶಮೀಬೀಜಪೂರಂ ಘೃತಪ್ಲುತಂ ।
ಕ್ಷುದ್ಯೋಗಃ ಕಥಿತೋ ರಾಜನ್ ಮಾಸಾರ್ಧಸ್ಯ ಪುರಾತನೈಃ || ೨ ||

ಕಶೇರುಫಲಮೂಲಾನಿ ಇಕ್ಷುಮೂಲಂ ತಥಾ ಬಿಸಂ ।
ದೂರ್ವಾಕ್ಷೀರಘೃತೈರ್ಮಂಡಃ ಸಿದ್ಧೋಽಯಂ ಮಾಸಿಕಃ ಪರಃ || ೩ ||

---

೧. ಮನುಚಕ್ರವರ್ತಿ ಹೇಳಿದನು.—ರಾಜನ ರಕ್ಷಣೆಗಾಗಿ ಅವಶ್ಯವಾಗಿ ಬೇಕಾದ ಯಾವಯಾವ ರಹಸ್ಯಸಾಧನಗಳು ದುರ್ಗದಲ್ಲಿ ಇರಬೇಕು? ಅಥವಾ ಏರ್ಪಡಿಸಲ್ಪಡಬೇಕು? ಅವುಗಳನ್ನು ನನಗೆ ಹೇಳು.

೨. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಎಲೈ ರಾಜಶ್ರೇಷ್ಠನೇ, ಬಾಗೇಹೂ, ಅತ್ತಿಯ ಚಕ್ಕೆ ಇವುಗಳ ಚೂರ್ಣವನ್ನು ಮಾವಳದ ಹಣ್ಣಿನರಸದಲ್ಲಿ ಕಲಸಿ, ತುಪ್ಪದೊಡನೆ ಬೆರಸಿ ಹದಿನೈದು ದಿನಗಳು ಹಾಗೆಯೇ ಇಟ್ಟಿದ್ದು ಬಳಿಕ ಸೇವಿಸಿದರೆ ಹಸಿವನ್ನು ತಡೆಯುವ ಸಾಮರ್ಥ್ಯವುಂಟಾಗುವುದು.

೩. ಕೊನ್ನಾರೆ ಗೆಡ್ಡೆ, ಅಂಕೋಲೆ ಬೇರು, ಕಬ್ಬಿನ ಬೇರು, ತಾವರೆದಂಟು ಇವುಗಳನ್ನು ಗರಿಕೆ, ಹಾಲು ಮತ್ತು ತುಪ್ಪಗಳಿಂದ ಸಿದ್ಧಪಡಿಸಿದ ಗಂಜಿಯಲ್ಲಿ ಒಂದು ತಿಂಗಳಕಾಲ ಇಟ್ಟಿದ್ದು ಸೇವನೆಮಾಡಿದರೆ ಶಸ್ತ್ರಘಾತವನ್ನು ಪಡೆದ ಮನುಷ್ಯನಿಗೆ ಮರಣವು ಬಾರದು.

ನರಃ ಶಸ್ತ್ರಹತಂ ಪ್ರಾಪ್ತೋ ನ ತಸ್ಯ ಮರಣಂ ಭವೇತ್ ।
ಕಲ್ಮಾಷವೇಣುನಾ ತತ್ರ ಜನಯೇತ್ತು ವಿಭಾವಸುಂ ॥ ೪ ॥

ಗೃಹೇ ತ್ರಿರಪಸವ್ಯಂ ತು ಕ್ರಿಯತೇ ಯತ್ರ ಪಾರ್ಥಿವ ।
ನಾನ್ಯೋಽಗ್ನಿರ್ಜ್ವಲತೇ ತತ್ರ ನಾತ್ರ ಕಾರ್ಯಾ ವಿಚಾರಣಾ ॥ ೫ ॥

ಕಾರ್ಪಾಸಾಸ್ಥ್ನಾ ಭುಜಂಗಸ್ಯ ತೇನ ನಿರ್ಮೋಚನಂ ಭವೇತ್ ।
ಸರ್ಪನಿರ್ವಾಸನೇ ಧೂಪಃ ಪ್ರಶಸ್ತಃ ಸತತಂ ಗೃಹೇ ॥ ೬ ॥

ಸಾಮುದ್ರಸೈಂಧವಯವಾ ವಿದ್ಯುದ್ದಗ್ಧಾ ಚ ಮೃತ್ತಿಕಾ ।
ತಯಾನುಲಿಪ್ತಂ ಯದ್ವೇಶ್ಮ ನಾಗ್ನಿನಾ ದಹ್ಯತೇ ನೃಪ ॥ ೭ ॥

ದಿವಾ ಚ ದುರ್ಗೇ ರಕ್ಷ್ಯೋಽಗ್ನಿರ್ವಾತಿ ವಾತೇ ವಿಶೇಷತಃ ।
ವಿಷಾಚ್ಚ ರಕ್ಷ್ಯೋ ನೃಪತಿಸ್ತತ್ರ ಯುಕ್ತಿಂ ನಿಬೋಧ ಮೇ ॥ ೮ ॥

---

೪-೫. ಕಲ್ಮಾಷವೇಣುವಿನಿಂದ (ಒಂದು ಜಾತಿಯ ಬಿದಿರು) ಅಗ್ನಿಯನ್ನು ನಿರ್ಮಿಸಿ, ಅದನ್ನು ಮೂರುಸಾರಿ ಅಪ್ರದಕ್ಷಿಣವಾಗಿ ಬಳಸಿತಂದರೆ ಆ ಮನೆಗೆ ಬೇರೆ ವಿಧವಾದ ಅಗ್ನಿಭಾಧೆಯು ಉಂಟಾಗದು. ಇದರಲ್ಲಿ ಸಂದೇಹವೇ ಇಲ್ಲ.

೬. ಹಾವಿನ ಮೂಳೆಯನ್ನು ಪುಡಿಮಾಡಿ ಹತ್ತಿಯೊಡನೆ ಬೆರಸಿ ಮನೆಯಲ್ಲಿ ಅದರ ಹೊಗೆ ಹಾಕುತ್ತಿದ್ದರೆ ಹಾವು ಆ ಕಡೆಗೇ ಸುಳಿಯುವುದಿಲ್ಲ.

೭. ಓ ರಾಜಾ, ಸಮುದ್ರದ ಉಪ್ಪು, ಯವಕ್ಷಾರ, ಸಿಡಿಲು ಬಡಿದ ನೆಲದ ಮಣ್ಣು ಇವುಗಳನ್ನು ಬೆರಸಿ ನೆಲಕ್ಕೂ ಗೋಡೆಗೂ ಬಳಿದರೆ ಆ ಮನೆಗೆ ಬೆಂಕಿಯು ತಗಲುವುದಿಲ್ಲ.

೮. ಕೋಟೆಯೊಳಗೆ ಬೆಂಕಿಯಿಂದ ಅನಾಹುತಗಳು ಆಗದಂತೆ ಹಗಲೂ ರಾತ್ರಿಯೂ ಎಚ್ಚರಿಕೆಯಿಂದಿರಬೇಕು. ಅದರಲ್ಲೂ ಗಾಳಿಬೀಸುವಾಗ ಬಹು ಜಾಗರೂಕರಾಗಿರಬೇಕು. ರಾಜನಿಗೆ ವಿಷದಿಂದ ಅಪಾಯವಾಗದಂತೆ ನೋಡಿ ಕೊಳ್ಳುವುದು ಆವಶ್ಯಕ. ಆದರ ಯುಕ್ತಿಯನ್ನು ಹೇಳುವೆನು, ಕೇಳು.

ಕ್ರೀಡಾನಿಮಿತ್ತಂ ನೃಪತಿರ್ಧಾರಯೇನ್ಮೃಗಪಕ್ಷಿಣಃ ।
ಅನ್ನಂ ವೈ ಪ್ರಾಕ್ಪರೀಕ್ಷೇತ ವಹ್ನೌ ಚಾನ್ಯತರೇಷು ಚ ॥ ೯ ॥

ವಸ್ತ್ರಂ ಪುಷ್ಪಮಲಂಕಾರಂ ಭೋಜನಾಚ್ಛಾದನಂ ತಥಾ ।
ನಾಪರೀಕ್ಷಿತಪೂರ್ವಂ ತು ಸ್ಪೃಶೇದಪಿ ಮಹೀಪತಿಃ ॥೧೦॥

ಸ್ಯಾಚ್ಚಾಸೌ ವಕ್ತ್ರಸಂತಪ್ತಃ ಸೋದ್ವೇಗಂ ಚ ನಿರೀಕ್ಷತೇ ।
ವಿಷದೋಽಥ ವಿಷಂ ದತ್ತಂ ಯಚ್ಚ ತತ್ರ ಪರೀಕ್ಷ್ಯತೇ ॥೧೧॥

ಸ್ರಸ್ತೋತ್ತರೀಯೋ ವಿಮನಾಃ ಸ್ತಂಭಕುಡ್ಯಾದಿಭಿಸ್ತಥಾ ।
ಪ್ರಚ್ಛಾದಯತಿ ಚಾತ್ಮಾನಂ ಲಜ್ಜತೇ ತ್ವರತೇ ತಥಾ ॥೧೨॥

ಭುವಂ ವಿಲಿಖತಿ ಗ್ರೀವಾಂ ತಥಾ ಚಾಲಯತೇ ನೃಪ ।
ಕಂಡೂಯತಿ ಚ ಮೂರ್ಧಾನಂ ಪರಿಲೋಢ್ಯಾನನಂ ತಥಾ ॥೧೩॥

---

೯. ರಾಜನು ಕ್ರೀಡಾರ್ಥವಾಗಿ ಮೃಗಗಳನ್ನೂ ಪಕ್ಷಿಗಳನ್ನೂ ಸಾಕಬೇಕು. ಊಟಮಾಡುವ ಮೊದಲು ಅನ್ನವನ್ನು ಬೆಂಕಿಯ ಮೂಲಕವೂ ಮೃಗಪಕ್ಷಿಗಳಲ್ಲಿ ಒಂದರ ಮೂಲಕವೂ ಪರೀಕ್ಷಿಸಬೇಕು.

೧೦. ವಸ್ತ್ರ, ಪುಷ್ಪ, ಆಭರಣ, ಭೋಜನ, ಆಚ್ಛಾದನ ಇವುಗಳನ್ನು ಮೊದಲು ಪರೀಕ್ಷೆಮಾಡದೆ ರಾಜನು ಕೈಯಿಂದಲೂ ಸಹ ಮುಟ್ಟಬಾರದು.

೧೧-೧೪. ವಿಷವನ್ನು ಹಾಕಿದವನ ಮುಖದಲ್ಲಿ ಸಂತಾಪವು ವ್ಯಕ್ತವಾಗುತ್ತದೆ. ಅವನು ಗಾಬರಿಯಿಂದ ನೋಡುತ್ತಾನೆ. ವಿಷವನ್ನು ಪರೀಕ್ಷೆಮಾಡುವುದಕ್ಕೆ ತೊಡಗಿದಾಗಲಂತೂ ಅವನ ಸ್ಥಿತಿಯನ್ನು ಹೇಳತೀರದು. ಅವನ ಧೋತ್ರವು ಜಾರಿ ಬೀಳುತ್ತದೆ. ಮನಸ್ಸು ಪೆಚ್ಚಾಗುತ್ತದೆ. ಅವನು ಕಂಬದ ಹಿಂದೆ ಅಥವಾ ಗೋಡೆಯ ಹಿಂದೆ ಅವಿತುಕೊಳ್ಳುತ್ತಾನೆ. ನಾಚಿಕೆಯಿಂದ ಚಡಪಡಿಸುತ್ತಾನೆ. ನೆಲವನ್ನು ಕೆರೆಯುತ್ತಾನೆ. ಕುತ್ತಿಗೆಯನ್ನು ಅಲುಗಾಡಿಸುತ್ತಾನೆ. ತಲೆಯನ್ನು ಪರಚಿಕೊಳ್ಳುತ್ತಾನೆ. ಮುಖವನ್ನು ಉಜ್ಜಿಕೊಳ್ಳುತ್ತಾನೆ. ಓ ರಾಜಾ, ಇಷ್ಟೇ ಅಲ್ಲದೆ ನಡತೆಗೆ

ಕ್ರಿಯಾಸು ತ್ವರಿತೋ ರಾಜ್ಞ ವಿಪರೀತಾಸ್ವಪಿ ಧ್ರುವಂ ।
ಏವಮಾದೀನಿ ಚಿಹ್ನಾನಿ ವಿಷದಸ್ಯ ಪರೀಕ್ಷಯೇತ್ ॥೧೪॥

ಸಮಿದ್ಧೇ ವಿಕ್ಷಿಪೇದ್ವಹ್ನೌ ತದನ್ನಂ ತ್ವರಯಾನ್ವಿತಃ ।
ಇಂದ್ರಾಯುಧಸವರ್ಣಂ ತು ರೂಕ್ಷಂ ಸ್ಫೋಟಸಮನ್ವಿತಂ ॥೧೫॥

ಏಕಾವರ್ತಂ ತು ದುರ್ಗಂಧಿ ಭೃಶಂ ಚಟಚಟಾಯತೇ ।
ತದ್ಧೂಮಸೇವನಾಜ್ಜಂತೋಃ ಶಿರೋರೋಗಶ್ಚ ಜಾಯತೇ ॥೧೬॥

ಸವಿಷೇಽನ್ನೇ ನಿಲೀಯಂತೇ ನ ಚ ಪಾರ್ಥಿವ ಮಕ್ಷಿಕಾಃ ।
ನಿಲೀನಾಶ್ಚ ವಿಪದ್ಯಂತೇ ಸಂಸ್ಪೃಷ್ಟೇ ಸವಿಷೇ ತಥಾ ॥೧೭॥

ವಿರಜ್ಯತಿ ಚಕೋರಸ್ಯ ದೃಷ್ಟಿಃ ಪಾರ್ಥಿವಸತ್ತಮ ।
ವಿಕೃತಿಂ ಚ ಸ್ವರೋ ಯಾತಿ ಕೋಕಿಲಸ್ಯ ತಥಾ ನೃಪ ॥೧೮॥

---

ವಿರೋಧವಾದ ಇನ್ನೂ ಎಷ್ಟೋ ವ್ಯಾಪಾರಗಳಲ್ಲಿ ತೊಡಗುತ್ತಾನೆ. ವಿಷಹಾಕುವವನಲ್ಲಿ ಕಾಣುವ ಇಂತಹ ಲಕ್ಷಣಗಳನ್ನು ಗಮನದಿಂದ ಪರೀಕ್ಷಿಸಬೇಕು.

೧೫-೧೬. ತಡಮಾಡದೆ ಆ ಅನ್ನವನ್ನು ಉರಿಯುವ ಬೆಂಕಿಯಲ್ಲಿ ಹಾಕಬೇಕು. ಆಗ ಕಾಮನ ಬಿಲ್ಲಿನ ಬಣ್ಣವುಂಟಾಗಿ ಭಯಂಕರವಾದ ಸಿಡಿತವುಂಟಾಗುವುದು. ಜ್ವಾಲೆಯು ಒಂದುಸಾರಿ ಸುತ್ತಿ ಕೆಟ್ಟವಾಸನೆ ಹುಟ್ಟುವುದು. ಚಟಚಟ ಎಂದು ಬಹಳ ಹೊತ್ತು ಸದ್ದಾಗುವುದು. ಆ ಹೊಗೆಯನ್ನು ಕುಡಿದರೆ ತಲೆನೋವು ಬರುವುದು.

೧೭. ರಾಜೇಂದ್ರಾ, ವಿಷಬೆರೆತ ಅನ್ನದ ಮೇಲೆ ನೊಣಗಳು ಕುಳಿತುಕೊಳ್ಳುವುದಿಲ್ಲ. ಒಂದು ವೇಳೆ ಕುಳಿತರೆ ಕೂಡಲೆ ಸಾಯುವುವು.

೧೮. ಎಲೈ ಮನುಚಕ್ರವರ್ತೀ, ವಿಷಯುಕ್ತವಾದ ಪದಾರ್ಥವು ಗೋಚರಿಸಿದಾಗ ಚಕೋರಪಕ್ಷಿಯ ದೃಷ್ಟಿ ಕಳೆಗುಂದುತ್ತದೆ. ಕೋಗಿಲೆಯ ಧ್ವನಿ ವಿಕಾರವಾಗುತ್ತದೆ.

ಗತಿಃ ಸ್ಖಲತಿ ಹಂಸಸ್ಯ ಭೃಂಗರಾಜಶ್ಚ ಕೂಜತಿ ।
ಕ್ರೌಂಚೋ ಮದಮಥಾಭ್ಯೇತಿ ಕೃಕವಾಕುರ್ವಿರೌತಿ ಚ ॥೧೯॥

ವಿಕ್ರೋಶತಿ ಶುಕೋ ರಾಜನ್ ಸಾರಿಕಾ ವಮತೇ ತತಃ ।
ಚಾಮೀಕರೋಽನ್ಯತೋ ಯಾತಿ ಮೃತ್ಯುಂ ಕಾರಂಡವಸ್ತಥಾ ॥೨೦॥

ಮೇಹತೇ ವಾನರೋ ರಾಜನ್ ಗ್ಲಾಯತೇ ಜೀವಜೀವಕಃ ।
ಹೃಷ್ಟರೋಮಾ ಭವೇದ್ಬಭ್ರುಃ ಪೃಷತಶ್ಚೈವ ರೋದಿತಿ ॥೨೧॥

ಹರ್ಷಮಾಯಾತಿ ಚ ಶಿಖೀ ವಿಷಸಂದರ್ಶನಾನ್ನೃಪ ।
ಅನ್ನಂ ಚ ಸವಿಷಂ ರಾಜಂಶ್ಚಿರೇಣ ಚ ವಿಪಚ್ಯತೇ ॥೨೨॥

ತದಾ ಭವತಿ ನಿಃಶ್ರಾವ್ಯಂ ಪಕ್ವಪರ್ಯುಷಿತೋಪಮಂ ।
ವ್ಯಾಸನ್ನರಸಗಂಧಂ ಚ ಚಂದ್ರಿಕಾಭಿಸ್ತಥಾ ಯುತಂ ॥೨೩॥

---

೧೯. ಹಂಸದ ನಡಿಗೆ ತಬ್ಬಿಬ್ಬಾಗುತ್ತದೆ. ದುಂಬಿ ಕೂಗಿಕೊಳ್ಳುತ್ತದೆ ಹುಂಜವು ಅರಚಿಕೊಳ್ಳುತ್ತದೆ. ಕ್ರೌಂಚಕ್ಕೆ ಮದವೇರುತ್ತದೆ.

೨೦. ರಾಜಾ, ಗಿಳಿಯು ಗೋಳಿಡುತ್ತದೆ. ಸಾರಿಕೆಯು ವಾಂತಿಮಾಡುತ್ತದೆ. ಚಾಮೀಕರವು ಅಸ್ಥಳವನ್ನೇ ಬಿಟ್ಟು ಬೇರೆ ಕಡೆಗೆ ಓಡುತ್ತದೆ. ನೀರುಕೋಳಿ ಕೂಡಲೆ ಸಾಯುತ್ತದೆ.

೨೧. ರಾಜಾ, ವಿಷಮಿಶ್ರವಾದ ಪದಾರ್ಥವನ್ನು ಕಂಡಾಗ ಕಪಿಗೆ ಮಲ ಮೂತ್ರಗಳಾಗುವುವು. ಹೆಬ್ಬಕ್ಕಿ ಕಂದಿಹೋಗುತ್ತದೆ. ಮುಂಗುಸಿಯ ಮೈಗೂದಲು ಏಳುತ್ತದೆ. ಜಿಂಕೆ ಅಳುತ್ತದೆ. ನವಿಲು ಹರ್ಷಗೊಳ್ಳುತ್ತದೆ.

೨೨-೨೩. ವಿಷಮಿಶ್ರವಾದ ಆಹಾರಪದಾರ್ಥವು ಪಕ್ವವಾಗಬೇಕಾದರೆ ಬಹಳ ಹೊತ್ತು ಹಿಡಿಯುತ್ತದೆ. ಅದನ್ನು ಬೆಳದಿಂಗಳಿನಲ್ಲಿ ಇಟ್ಟರೆ ಸ್ವಲ್ಪ ಹೊತ್ತಿನಲ್ಲಿಯೇ ರಸಗಂಧಹೀನವಾಗಿ ಹದಿನೈದುದಿನದ ತಂಗಳನ್ನದಂತೆ ನಾರುತ್ತದೆ. ರಾಜಾ, ಅದರ ಸುದ್ದಿಯನ್ನು ಕೇಳುವುದಕ್ಕೆ ಕೂಡ ಅಸಹ್ಯವಾಗುತ್ತದೆ.

ವ್ಯಂಜನಾನಾಂ ತು ಶುಷ್ಕತ್ವಂ ದ್ರವಾಣಾಂ ಬುದ್ಬುದೋದ್ಭವಃ ।
ಸಸೈಂಧವಾನಾಂ ದ್ರವ್ಯಾಣಾಂ ಜಾಯತೇ ಫೇನಮಾಲಿತಾ ॥೨೪॥

ಸಸ್ಯರಾಜಿಶ್ಚ ತಾಮ್ರಾ ಸ್ಯಾನ್ನೀಲಾ ಚ ಪಯಸಸ್ತಥಾ ।
ಕೋಕಿಲಾಭಾ ಚ ಮದ್ಯಸ್ಯ ತೋಯಸ್ಯ ಚ ನೃಪೋತ್ತಮ ॥೨೫॥

ಧಾನ್ಯಾಮ್ಲಸ್ಯ ತಥಾ ಕೃಷ್ಣಾ ಕಪಿಲಾ ಕೋದ್ರವಸ್ಯ ಚ ।
ಮಧುಶ್ಯಾಮಾ ಚ ತಕ್ರಸ್ಯ ನೀಲಾ ಪೀತಾ ತಥೈವ ಚ ॥೨೬॥

ಘೃತಸ್ಯೋದಕಸಂಕಾಶಾ ಕಪೋತಾಭಾ ಚ ಮಸ್ತುನಃ ।
ಹರಿತಾ ಮಾಕ್ಷಿಕಸ್ಯಾಪಿ ತೈಲಸ್ಯ ಚ ತಥಾರುಣಾ ॥೨೭॥

ಫಲಾನಾಮಪ್ಯಪಕ್ವಾನಾಂ ಪಾಕಃ ಕ್ಷಿಪ್ರಂ ಪ್ರಜಾಯತೇ ।
ಪ್ರಕೋಪಶ್ಚೈವ ಪಕ್ವಾನಾಂ ಮಾಲ್ಯಾನಾಂ ಮ್ಲಾನತಾ ತಥಾ ॥೨೮॥

---

೨೪. ವಿಷಸಂಬಂಧವಾದಾಗ ವ್ಯಂಜನಗಳು ಒಣಗುವುವು. ದ್ರವವಸ್ತುಗಳಲ್ಲಿ ಗುಳ್ಳೆಗಳು ಏಳುವುವು. ಉಪ್ಪುಹಾಕಿದ ಪದಾರ್ಥಗಳ ಮೇಲೆ ನೊರೆ ಕಟ್ಟಿಕೊಳ್ಳುವುದು.

೨೫. ವಿಷವು ತಗುಲಿದರೆ ಸಸ್ಯಗಳು ಕೆಂಪೇರುವುವು. ಹಾಲು ನೀಲವರ್ಣವಾಗುವುದು. ರಾಜೋತ್ತಮಾ, ಮದ್ಯವೂ ನೀರೂ ಕೋಗಿಲೆಯ ಮೈಬಣ್ಣದಂತೆ ಕಪ್ಪಾಗುವುವು.

೨೬. ಗಂಜಿಯ ಬಣ್ಣವು ಕಪ್ಪೇರುವುದು. ಹಾರಕದ ಅನ್ನವು ಗೋರೋಚನದ ವರ್ಣಕ್ಕೆ ತಿರುಗುವುದು. ಮಜ್ಜಿಗೆಯು ಜೇನುತುಪ್ಪದಂತೆ ಎಳಗಪ್ಪಾಗುವುದು. ನೀಲ ಅಥವಾ ಹೊಂಬಣ್ಣವೂ ಆಗುವುದುಂಟು.

೨೭. ತುಪ್ಪಕ್ಕೆ ನೀರಿನ ಬಣ್ಣವು ಬರುವುದು. ಮೊಸರಿನ ಕೆನೆ ಪಾರಿವಾಳದ ಬಣ್ಣವನ್ನು ತಾಳುವುದು. ಜೇನುತುಪ್ಪವು ಹಸುರಾಗುವುದು. ಎಣ್ಣೆ ಕೆಂಪಾಗುವುದು.

೨೮ ವಿಷಸಂಬಂಧವೊದಗಿದಾಗ ಹಸರುಕಾಯಿಗಳು ಬೇಗನೆ ಮಾಗುತ್ತವೆ. ಮಾಗಿದಂತಹವು ಕಳಿತುಹೋಗುತ್ತವೆ. ಹೂಮಾಲೆ ಬಾಡುತ್ತದೆ.

**ಮೃದುತಾ ಕಠಿನಾನಾಂ ಸ್ಯಾನ್ಮೃದೂನಾಂ ಚ ವಿಪರ್ಯಯಃ ।**
**ಸೂಕ್ಷ್ಮಾಣಾಂ ರೂಪದಲನಂ ತಥಾ ಚೈವಾಚಿರಂಗತಾ ॥೨೯॥**

**ಶ್ಯಾಮಮಂಡಲತಾ ಚೈವ ವಸ್ತ್ರಾಣಾಂ ವೈ ತಥೈವ ಚ ।**
**ಲೋಹಾನಾಂ ಚ ಮಣೀನಾಂ ಚ ಮಲಪಂಕೋಪದಿಗ್ಧತಾ ॥೩೦॥**

**ಅನುಲೇಪನಗಂಧಾನಾಂ ಮಾಲ್ಯಾನಾಂ ಚ ನೃಪೋತ್ತಮ ।**
**ವಿಗಂಧತಾ ಚ ವಿಜ್ಞೇಯಾ ವರ್ಣಾನಾಂ ಮ್ಲಾನತಾ ತಥಾ ।**
**ಪೀತಾವಭಾಸತಾ ಜ್ಞೇಯಾ ತಥಾ ರಾಜಞ್ಜಲಸ್ಯ ತು ॥೩೧॥**

**ದಂತಾ ಓಷ್ಠೌ ತ್ವಚಃ ಶ್ಯಾಮಾಸ್ತನುಸತ್ವಾಸ್ತಥೈವ ಚ ।**
**ಏವಮಾದೀನಿ ಚಿಹ್ನಾನಿ ವಿಜ್ಞೇಯಾನಿ ನೃಪೋತ್ತಮ ॥೩೨॥**

**ತಸ್ಮಾದ್ರಾಜಾ ಸದಾ ತಿಷ್ಠೇನ್ಮಣಿಮಂತ್ರೌಷಧಾಗದೈಃ ।**
**ಉಕ್ತೈಃ ಸಂರಕ್ಷಿತೋ ರಾಜಾ ಪ್ರಮಾದಪರಿವರ್ಜಕಃ ॥೩೩॥**

---

೨೯. ಕಠಿನವಾದ ವಸ್ತುಗಳು ಮೃದುವಾಗುವುವು. ಮೃದುವಾದಂತಹವು ಕಠಿನವಾಗುವುವು. ಸೂಕ್ಷ್ಮವಾದ ಪದಾರ್ಥಗಳು ರೂಪವನ್ನು ಕಳೆದುಕೊಂಡು ಅಲ್ಪಕಾಲ ಬಾಳುವುವು.

೩೦. ವಿಷವು ಬಟ್ಟೆಗಳ ಮೇಲೆ ಗುಂಡಗೆ ಕಪ್ಪಾದ ಮಚ್ಚೆಯಾಗುವುದು. ಲೋಹಗಳಿಗೂ ರತ್ನಗಳಿಗೂ ಕಿಲುಬು ಕಟ್ಟಿಕೊಳ್ಳುವುದು.

೩೧. ಮೈಗೆ ಲೇಪಿಸಿಕೊಳ್ಳುವ ಗಂಧಾದಿವಸ್ತುಗಳ ಮತ್ತು ಹೂಮಾಲೆಗಳ ಪರಿಮಳವೂ ಬಣ್ಣವೂ ಹೋಗುವುವು. ಹೂ ಬಾಡುವುದು. ಎಲೈ ಭೂಪಾಲಕಾ, ನೀರು ಹೊಂಬಣ್ಣವಾಗುವುದು.

೩೨. ಹೊಟ್ಟೆಯೊಳಕ್ಕೆ ವಿಷಸೇರಿದರೆ ಹಲ್ಲು, ತುಟಿ ಮತ್ತು ಚರ್ಮಗಳು ನೀಲವಾಗುವುವು. ಶಕ್ತಿ ಕುಗ್ಗುವುದು. ಓ ಮನುಚಕ್ರವರ್ತೀ, ಇವೇ ಮುಂತಾದ ಲಕ್ಷಣಗಳನ್ನು ತಿಳಿದಿರಬೇಕು.

೩೩. ಆದಕಾರಣ ರಾಜನು ಮೇಲೆ ಹೇಳಿದ ಮಣಿ, ಮಂತ್ರ, ಮೂಲಿಕೆ ಮತ್ತು ಔಷಧಗಳಿಂದ ಆತ್ಮರಕ್ಷಣೆಯನ್ನು ಸದಾ ಮಾಡಿಕೊಳ್ಳುತ್ತಿರಬೇಕು. ಮೈಮರೆತಿರಬಾರದು.

ಪ್ರಜಾತರೋರ್ಮೂಲಮಿಹಾವನೀಶಃ
 ತದ್ರಕ್ಷಣಾದ್ರಾಷ್ಟ್ರಮುಪೈತಿ ವೃದ್ಧಿಂ ।
ತಸ್ಮಾತ್ಪ್ರಯತ್ನೇನ ನೃಪಸ್ಯ ರಕ್ಷಾ
 ಸರ್ವೇಣ ಕಾರ್ಯಾ ರವಿವಂಶಚಂದ್ರ ||೩೪||

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ರಾಜರಕ್ಷಾ ನಾಮೈಕೋನವಿಂಶತ್ಯಧಿಕ ದ್ವಿಶತತಮೋಽಧ್ಯಾಯಃ

---

೩೪. ಪ್ರಜೆಗಳೆಂಬ ಮರಕ್ಕೆ ರಾಜನೇ ಬೇರು. ಅವನು ಸುರಕ್ಷಿತವಾಗಿದ್ದರೆ ರಾಷ್ಟ್ರವು ವೃದ್ಧಿಗೆ ಬರುವುದು. ಸೂರ್ಯವಂಶತಿಲಕನಾದ ಎಲೈ ಮನುಚಕ್ರವರ್ತೀ, ಪ್ರತಿಯೊಬ್ಬ ಪ್ರಜೆಯೂ ರಾಜನನ್ನು ರಕ್ಷಿಸಲು ಪ್ರಯತ್ನಿಸಬೇಕು.

## ಅಧ್ಯಾಯದ ಸಾರಾಂಶ

ವಿಷಪರೀಕ್ಷೆಯ ವಿಧಾನವನ್ನು ಈ ಅಧ್ಯಾಯದಲ್ಲಿ ಹೇಳಿದೆ.

ಶಸ್ತ್ರದಿಂದ, ಅಗ್ನಿಯಿಂದ, ಸರ್ಪದಿಂದ ಮತ್ತು ವಿಷದಿಂದ ಬಾಧೆ ತಟ್ಟದಂತೆ ಅವುಗಳಿಗೆ ತಕ್ಕ ಚಿಕಿತ್ಸಾಕ್ರಮಗಳನ್ನು ರಾಜನು ತಿಳಿದಿರಬೇಕು. ವಸ್ತ್ರ, ಪುಷ್ಪ, ಅಲಂಕಾರ, ಭೋಜನ, ಆಚ್ಛಾದನ ಮುಂತಾದುವನ್ನು ಮೊದಲು ಪರೀಕ್ಷಿಸದೆ ಸ್ವೀಕರಿಸಬಾರದು. ವಿಷಪ್ರಯೋಗ ಮಾಡುವವನನ್ನು ಅವನ ಅಂಗಚಿಹ್ನಗಳಿಂದಲೇ ಅರಿಯಬಹುದು. ವಿಷವು ಬೇರೆಬೇರೆ ವಸ್ತುಗಳಲ್ಲಿ ಬೇರೆಬೇರೆ ವಿಕಾರಗಳನ್ನು ಹುಟ್ಟಿಸುತ್ತದೆ. ಅವುಗಳನ್ನು ಸರಿಯಾಗಿ ತಿಳಿದು ಆತ್ಮರಕ್ಷಣೆಯಲ್ಲಿ ಯತ್ನಪರನಾಗಬೇಕು. ಪ್ರಜೆಗಳೆಂಬ ಮರಕ್ಕೆ ರಾಜನೇ ಬೇರು. ಅವನು ಕ್ಷೇಮದಿಂದಿದ್ದರೆ ರಾಷ್ಟ್ರವು ಕ್ಷೇಮದಿಂದಿರುವುದು. ಆದುದರಿಂದ ರಾಜನನ್ನು ರಕ್ಷಿಸಲು ಎಲ್ಲರೂ ಪ್ರಯತ್ನಿಸಬೇಕು.

ಶ್ರೀಮತ್ಸ್ಯಮಹಾಪುರಾಣದಲ್ಲಿ ರಾಜಧರ್ಮದಲ್ಲಿ ರಾಜರಕ್ಷೆಯೆಂಬ
ಇನ್ನೂರ ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು

## ಅಥ ವಿಂಶತ್ಯಧಿಕದ್ವಿಶತತಮೋಽಧ್ಯಾಯಃ

॥ ಮತ್ಸ್ಯ ಉವಾಚ ॥

ರಾಜ್ಞಃ ಪುತ್ರಸ್ಯ ರಕ್ಷಾ ಚ ಕರ್ತವ್ಯಾ ಪೃಥಿವೀಕ್ಷಿತಾ ।
ಆಚಾರ್ಯಶ್ಚಾಸ್ಯ ಕರ್ತವ್ಯೋ ನಿತ್ಯಯುಕ್ತಶ್ಚ ರಕ್ಷಿಭಿಃ ॥ ೧ ॥

ಧರ್ಮಕಾಮಾರ್ಥಶಾಸ್ತ್ರಾಣಿ ಧನುರ್ವೇದಂ ಚ ಶಿಕ್ಷಯೇತ್ ।
ರಥೇ ಚ ಕುಂಜರೇ ಚೈನಂ ವ್ಯಾಯಾಮಂ ಕಾರಯೇತ್ಸದಾ ॥ ೨ ॥

ಶಿಲ್ಪಾನಿ ಶಿಕ್ಷಯೇಚ್ಚೈನಂ ನಾಪ್ತೋ ಮಿಥ್ಯಾಪ್ರಿಯಂ ವದೇತ್
ಶರೀರರಕ್ಷಾವ್ಯಾಜೇನ ರಕ್ಷಿಣೋಽಸ್ಯ ನಿಯೋಜಯೇತ್ ॥ ೩ ॥

ನ ಚಾಸ್ಯ ಸಂಗೋ ದಾತವ್ಯಃ ಕ್ರುದ್ಧಲುಬ್ಧಾವಮಾನಿತೈಃ ।
ತಥಾ ಚ ವಿನಯೇದೇನಂ ಯಥಾ ಯೌವನಗೋಚರೇ ॥ ೪ ॥

---

೧. ಮತ್ಸ್ಯರೂಪನಾದ ಭಗವಂತನು ಹೇಳಿದನು.— ರಾಜಾ, ರಾಜಪುತ್ರನ ರಕ್ಷಣವು ಅರಸನು ಮುಖ್ಯವಾಗಿ ಮಾಡಬೇಕಾದ ಕೆಲಸ. ಅವನಿಗೆ ಆಚಾರ್ಯನನ್ನು ಗೊತ್ತುಮಾಡಬೇಕು. ಯಾವಾಗಲೂ ಅವನ ಬಳಿಯಲ್ಲಿ ಬೆಂಗಾವಲಿನವರಿರಬೇಕು.

೨. ಧರ್ಮಶಾಸ್ತ್ರ, ಕಾಮಶಾಸ್ತ್ರ, ಅರ್ಥಶಾಸ್ತ್ರ, ಧನುರ್ವೇದ ಇವುಗಳನ್ನು ಅವನಿಗೆ ಕಲಿಸಬೇಕು. ರಥದಲ್ಲೂ ಆನೆಯಮೇಲೂ ಕುಳಿತು ಯುದ್ಧಮಾಡುವ ಕ್ರಮವನ್ನು ಹೇಳಿಕೊಡಬೇಕು. ಪ್ರತಿದಿನವೂ ಅಂಗಸಾಧನೆಯನ್ನು ಮಾಡಿಸಬೇಕು.

೩. ಅವನಿಗೆ ಕುಶಲವಿದ್ಯೆಗಳನ್ನು ಅಭ್ಯಾಸಮಾಡಿಸಬೇಕು. ಪ್ರಿಯವಾಗಲೆಂದು ಅವನೊಡನೆ ಸುಳ್ಳು ಹೇಳಬಾರದು. ಅದು ಆಪ್ತನ ಲಕ್ಷಣವಲ್ಲ. ಅವನ ಅಂಗರಕ್ಷಣೆಗಾಗಿ ಕಾವಲಿನವರನ್ನು ನಿಯಮಿಸಬೇಕು.

೪. ಕೋಪಿಷ್ಠರು, ಜಿಪುಣರು, ಅವಮಾನಕ್ಕೆ ಗುರಿಯಾದವರು ಇಂತಹವರ ಸಹವಾಸವು ರಾಜಪುತ್ರನಿಗೆ ಆಗಬಾರದು. ಯೌವನವು ತಲೆದೋರುತ್ತಿರುವಾಗ ಅವನು ನಯವಿನಯಾದಿ ಸದ್ಗುಣಗಳನ್ನು ಬಿಡದಂತೆ ಎಚ್ಚರಿಕೆಯಿಂದ ನೋಡಿಕೊಳ್ಳಬೇಕು.

ಇಂದ್ರಿಯೈರ್ನಾಪಕೃಷ್ಯೇತ ಸತಾಂ ಮಾರ್ಗಾತ್ಸುದುರ್ಗಮಾತ್ ।
ಗುಣಾಧಾನಮಶಕ್ಯಂ ತು ಯಸ್ಯ ಕರ್ತುಂ ಸ್ವಭಾವತಃ ॥ ೫ ॥

ಬಂಧನಂ ತಸ್ಯ ಕರ್ತವ್ಯಂ ಗುಪ್ತದೇಶೇ ಸುಖಾನ್ವಿತಂ ।
ಅವಿನೀತಕುಮಾರಂ ಹಿ ಕುಲಮಾಶು ವಿಶೀರ್ಯತೇ ॥ ೬ ॥

ಅಧಿಕಾರೇಷು ಸರ್ವೇಷು ವಿನೀತಂ ವಿನಿಯೋಜಯೇತ್ ।
ಆದೌ ಸ್ವಲ್ಪೇ ತತಃ ಪಶ್ಚಾತ್ ಕ್ರಮೇಣಾಥ ಮಹತ್ಸ್ವಪಿ ॥ ೭ ॥

ಮೃಗಯಾಪಾನಮಕ್ಷಾಂಶ್ಚ ವರ್ಜಯೇತ್ಪೃಥಿವೀಪತಿಃ ।
ಏತಾಂಸ್ತು ಸೇವಮಾನಾಸ್ತು ವಿನಷ್ಟಾಃ ಪೃಥಿವೀಕ್ಷಿತಃ ॥ ೮ ॥

ಬಹವೋ ನೃಪಶಾರ್ದೂಲ ತೇಷಾಂ ಸಂಖ್ಯಾ ನ ವಿದ್ಯತೇ ।
ವೃಥಾಟನಂ ದಿವಾಸ್ವಾಪಂ ವಿಶೇಷೇಣ ತು ವರ್ಜಯೇತ್ ॥ ೯ ॥

---

೫-೬. ಅವನು ಇಂದ್ರಿಯಗಳ ಸೆಳೆತಕ್ಕೆ ಸಿಕ್ಕಬಾರದು. ಸನ್ಮಾರ್ಗದಿಂದ ಕದಲಬಾರದು. ಎಷ್ಟು ವಿವೇಕವನ್ನು ಹೇಳಿದರೂ ಕೇಳದೆ ದಾರಿತಪ್ಪಿಹೋಗುವ ಸಂದರ್ಭವು ಕಂಡುಬಂದರೆ, ಅವನನ್ನು ಸೌಖ್ಯಕ್ಕೆ ಭಂಗಬಾರದಂತೆ ರಹಸ್ಯವಾಗಿ ನಿರ್ಬಂಧದಲ್ಲಿ ಇಡಬೇಕು. ಏಕೆಂದರೆ ಅವಿಧೇಯನಾದ ಕುಮಾರನು ಹುಟ್ಟಿದರೆ ವಂಶವು ಬೇಗನೆ ನಾಶವಾಗುತ್ತದೆ.

೭. ವಿಧೇಯನಾದ ಪುತ್ರನನ್ನು ಅಧಿಕಾರಸ್ಥಾನಗಳಿಗೆಲ್ಲ ನಿಯಮಿಸಿ ಅವನಿಗೆ ಆಡಳಿತದ ಶಿಕ್ಷಣವನ್ನು ಕೊಡಬೇಕು. ಮೊದಲು ಅಧಿಕಾರವನ್ನು ಸ್ವಲ್ಪವಾಗಿ ಕೊಟ್ಟು ಕ್ರಮಕ್ರಮವಾಗಿ ಹೆಚ್ಚಿಸುತ್ತ ಹೋಗಬೇಕು.

೮. ಅರಸನು ಬೇಟೆ, ಮದ್ಯಪಾನ, ಜೂಜಾಟ ಮುಂತಾದ ವ್ಯಸನಗಳಿಗೆ ಮನಸ್ಸನ್ನು ಕೊಡಬಾರದು. ಇವುಗಳಲ್ಲಿ ಆಸಕ್ತರಾದ ರಾಜರು ಹಾಳಾಗಿದ್ದಾರೆ.

೯. ಓ ರಾಜೇಂದ್ರಾ, ವ್ಯಸನಗಳಿಗೆ ಈಡಾಗಿ ಕೆಟ್ಟುಹೋದವರು ಎಷ್ಟೋ ಜನರಿದ್ದಾರೆ. ಅವರನ್ನು ಎಣಿಸುವುದಕ್ಕೇ ಸಾಧ್ಯವಿಲ್ಲ. ವ್ಯರ್ಥವಾಗಿ ಅಲೆಯುವುದನ್ನೂ ಹಗಲುಹೊತ್ತು ನಿದ್ರೆಮಾಡುವುದನ್ನೂ ಮುಖ್ಯವಾಗಿ ಬಿಡಬೇಕು.

ವಾಕ್ಪಾರುಷ್ಯಂ ನ ಕರ್ತವ್ಯಂ ದಂಡಪಾರುಷ್ಯಮೇವ ಚ ।
ಪರೋಕ್ಷನಿಂದಾ ಚ ತಥಾ ವರ್ಜನೀಯಾ ಮಹೀಕ್ಷಿತಾ ॥೧೦॥

ಅರ್ಥಸ್ಯ ದೂಷಣಂ ರಾಜಾ ದ್ವಿಪ್ರಕಾರಂ ವಿವರ್ಜಯೇತ್ ।
ಅರ್ಥಾನಾಂ ದೂಷಣಂ ಚೈಕಂ ತಥಾರ್ಥೇಷು ಚ ದೂಷಣಂ ॥೧೧॥

ಪ್ರಾಕಾರಾಣಾಂ ಸಮುಚ್ಛೇದೋ ದುರ್ಗಾದೀನಾಮಸತ್ಕ್ರಿಯಾ ।
ಅರ್ಥಾನಾಂ ದೂಷಣಂ ಪ್ರೋಕ್ತಂ ವಿಪ್ರಕೀರ್ಣತ್ವಮೇವ ಚ ॥೧೨॥

ಅದೇಶಕಾಲೇ ಯದ್ದಾನಮಪಾತ್ರೇ ದಾನಮೇವ ಚ ।
ಅರ್ಥೇಷು ದೂಷಣಂ ಪ್ರೋಕ್ತಮಸತ್ಕರ್ಮಪ್ರವರ್ತನಂ ॥೧೩॥

ಕಾಮಃ ಕ್ರೋಧೋ ಮದೋ ಮಾನೋ ಲೋಭೋ ಹರ್ಷಸ್ತಥೈವ ಚ ।
ಏತೇ ವರ್ಜ್ಯಾಃ ಪ್ರಯತ್ನೇನ ಸಾದರಂ ಪೃಥಿವೀಕ್ಷಿತಾ ॥೧೪॥

---

೧೦. ಭೂಪಾಲಕನು ಮಾತಿನಲ್ಲೂ ದಂಡದಲ್ಲೂ ಕ್ರೌರ್ಯವನ್ನು ತೋರಿಸಬಾರದು. ಪರೋಕ್ಷದಲ್ಲಿ ಯಾರನ್ನೂ ದೂಷಿಸಬಾರದು.

೧೧. ಅರ್ಥಗಳ ದೂಷಣ ಮತ್ತು ಅರ್ಥಗಳಲ್ಲಿ ದೂಷಣ ಎಂಬ ಎರಡು ಬಗೆಯ ಅರ್ಥದೂಷಣವನ್ನು ರಾಜನು ಬಿಡಬೇಕು.

೧೨. ಕೋಟೆಗಳನ್ನು ಒಡೆಸಿಬಿಡುವುದು, ದುರ್ಗ ಮೊದಲಾದುವುಗಳನ್ನು ಸರಿಯಾಗಿ ಕಟ್ಟಿಸದಿರುವುದು, ಕ್ರಮವಿಲ್ಲದೆ ಅಲ್ಲಷ್ಟು ಇಲ್ಲಷ್ಟು ಕೆಲಸವನ್ನು ಮಾಡುವುದು ಇವೆಲ್ಲಕ್ಕೂ ಅರ್ಥಗಳ ದೂಷಣವೆಂದು ಹೆಸರು.

೧೩. ದೇಶಕಾಲಗಳನ್ನರಿಯದೆ ಮಾಡುವ ದಾನವೂ, ಅನರ್ಹರಿಗೆ ಕೊಡುವ ದಾನವೂ, ನಿಷಿದ್ಧಕಾರ್ಯ ಪ್ರವರ್ತನವೂ ಅರ್ಥಗಳಲ್ಲಿ ದೂಷಣವೆನಿಸಿಕೊಳ್ಳುವುವು.

೧೪. ಕಾಮ, ಕ್ರೋಧ, ಮದ, ಗರ್ವ, ಲೋಭ, ಹರ್ಷ ಇವುಗಳನ್ನು ರಾಜನು ಪ್ರಯತ್ನಪೂರ್ವಕವಾಗಿ ಬಿಡಬೇಕು.

ಏತೇಷಾಂ ವಿಜಯಂ ಕೃತ್ವಾ ಕಾರ್ಯೋ ಭೃತ್ಯಜಯಸ್ತತಃ ।
ಕೃತ್ವಾ ಭೃತ್ಯಜಯಂ ರಾಜಾ ಪೌರಾನ್ ಜಾನಪದಾನ್ ಜಯೇತ್ ॥೧೫॥

ಕೃತ್ವಾ ಚ ವಿಜಯಂ ತೇಷಾಂ ಶತ್ರೂನ್ ಬಾಹ್ಯಾಂಸ್ತತೋ ಜಯೇತ್ ।
ಬಾಹ್ಯಾಶ್ಚ ವಿವಿಧಾ ಜ್ಞೇಯಾಸ್ತುಲ್ಯಾಭ್ಯಂತರಕೃತ್ರಿಮಾಃ ॥೧೬॥

ಗುರವಸ್ತೇ ಯಥಾಪೂರ್ವಂ ತೇಷು ಯತ್ನಪರೋ ಭವೇತ್ ।
ಪಿತೃಪೈತಾಮಹಂ ಮಿತ್ರಮಮಿತ್ರಂ ಚ ತಥಾ ರಿಪೋಃ ॥೧೭॥

ಕೃತ್ರಿಮಂ ಚ ಮಹಾಭಾಗ ಮಿತ್ರಂ ತ್ರಿವಿಧಮುಚ್ಯತೇ ।
ತಥಾಪಿ ಚ ಗುರುಃ ಪೂರ್ವಂ ಭವೇತ್ತತ್ರಾಪಿ ಚಾದೃತಃ ॥೧೮॥

ಸ್ವಾಮ್ಯಮಾತ್ಯೋ ಜನಪದೋ ದುರ್ಗಂ ದಂಡಸ್ತಥೈವ ಚ ।
ಕೋಶೋ ಮಿತ್ರಂ ಚ ಧರ್ಮಜ್ಞ ಸಪ್ತಾಂಗಂ ರಾಜ್ಯಮುಚ್ಯತೇ ॥೧೯॥

---

೧೫. ಈ ಮನೋವಿಕಾರಗಳನ್ನು ಮೊದಲು ಗೆದ್ದು, ಬಳಿಕ ಅಧಿಕಾರಿಗಳನ್ನು ವಶಪಡಿಸಿಕೊಳ್ಳಬೇಕು. ಅವರನ್ನು ಸ್ವಾಧೀನವಲ್ಲಿ ಇರಿಸಿಕೊಂಡರೆ ಪುರಜನರೂ, ದೇಶದ ಎಲ್ಲ ಪ್ರಜೆಗಳೂ ವಶರಾಗುವರು.

೧೬. ಅವರು ಸ್ವಾಧೀನಕ್ಕೆ ಬಂದ ತರುವಾಯ ಹೊರಗಿನ ಶತ್ರುಗಳನ್ನು ಗೆಲ್ಲಬೇಕು. ಸಮಶತ್ರುಗಳು. ಅಂತಃಶತ್ರುಗಳು, ಕೃತ್ರಿಮಶತ್ರುಗಳು ಎಂದು ಹೊರಗಿನ ಶತ್ರುಗಳಲ್ಲಿ ಹಲವು ಭೇದಗಳಿವೆ.

೧೭-೧೮. ಗುರುಗಳೆಂದರೆ ಯಾವಾಗಲೂ ಪೂಜ್ಯರೇ ಸರಿ. ಅವರನ್ನು ಏಕ ರೀತಿಯಾಗಿ ಗೌರವಿಸಲು ಪ್ರಯತ್ನಿಸಬೇಕು. ತಂದೆತಾತಂದಿರ ಕಾಲದಿಂದ ತನ್ನ ಮನೆತನಕ್ಕೆ ಆಪ್ತರಾದವರು, ತನ್ನ ಹಗೆಗಳನ್ನು ಅವರ ಹಗೆಗಳೆಂದೇ ತಿಳಿದಿರುವವರು ತನ್ನಿಂದ ಉಪಕಾರವನ್ನು ಪಡೆದು ಆ ಕೃತಜ್ಞತೆಗಾಗಿ ತನ್ನ ಕಡೆ ಸೇರಿದವರು (ಇವರಿಗೆ ಕೃತ್ರಿಮಮಿತ್ರರೆಂದು ಹೆಸರು.) ಹೀಗೆ ಮಿತ್ರರಲ್ಲಿ ಮೂರು ಪಂಗಡಗಳುಂಟು. ಗುರುವು ಇವರೆಲ್ಲರಿಗಿಂತಲೂ ಅತ್ಯಂತ ಆಪ್ತನಾದವನು. ಅವನನ್ನು ವಿಶೇಷವಾಗಿ ಗೌರವಿಸಬೇಕು.

೧೯. ರಾಜಧರ್ಮಜ್ಞನಾದ ಎಲೈ ಮನುಚಕ್ರವರ್ತೀ, ರಾಜ್ಯಕ್ಕೆ ಸ್ವಾಮಿ, ಅಮಾತ್ಯ, ರಾಷ್ಟ್ರ, ದುರ್ಗ, ದಂಡ, ಕೋಶ, ಮಿತ್ರ ಎಂಬ ಏಳು ಅವಯವಗಳುಂಟು.

**ಸಪ್ತಾಂಗಸ್ಯಾಪಿ ರಾಜ್ಯಸ್ಯ ಮೂಲಂ ಸ್ವಾಮೀ ಪ್ರಕೀರ್ತಿತಃ ।**
**ತನ್ಮೂಲತ್ವಾತ್ತಥಾಂಗಾನಾಂ ಸ ತು ರಕ್ಷ್ಯಃ ಪ್ರಯತ್ನತಃ ॥೨೦॥**

**ಷಡಂಗರಕ್ಷಾ ಕರ್ತವ್ಯಾ ತಥಾ ತೇನ ಪ್ರಯತ್ನತಃ ।**
**ಅಂಗೇಭ್ಯೋ ಯಸ್ತಥೈಕಸ್ಯ ದ್ರೋಹಮಾಚರತೇಽಲ್ಪಧೀಃ ॥೨೧॥**

**ವಧಸ್ತಸ್ಯ ತು ಕರ್ತವ್ಯಃ ಶೀಘ್ರಮೇವ ಮಹೀಕ್ಷಿತಾ ।**
**ನ ರಾಜ್ಞಾ ಮೃದುನಾ ಭಾವ್ಯಂ ಮೃದುರ್ಹಿ ಪರಿಭೂಯತೇ ॥೨೨॥**

**ನ ಭಾವ್ಯಂ ದಾರುಣೇನಾತಿತೀಕ್ಷ್ಣಾದುದ್ವಿಜತೇ ಜನಃ ।**
**ಕಾಲೇ ಮೃದುರ್ಯೋ ಭವತಿ ಕಾಲೇ ಭವತಿ ದಾರುಣಃ ॥೨೩॥**

**ರಾಜಾ ಲೋಕದ್ವಯಾಪೇಕ್ಷೀ ತಸ್ಯ ಲೋಕದ್ವಯಂ ಭವೇತ್ ।**
**ಭೃತ್ಯೈಃ ಸಹ ಮಹೀಪಾಲಃ ಪರಿಹಾಸಂ ವಿವರ್ಜಯೇತ್ ॥೨೪॥**

---

೨೦. ಈ ಏಳು ರಾಜ್ಯಾಂಗಗಳಲ್ಲಿ ರಾಜನೇ ಎಲ್ಲಕ್ಕೂ ಮೂಲ. ಉಳಿದ ಅಂಗಗಳು ಅವನ ಆಸರೆಯಿಂದ ಉಳಿದಿರುವುವು. ಆದಕಾರಣ ಸರ್ವಪ್ರಯತ್ನ ದಿಂದಲೂ ರಾಜನನ್ನು ರಕ್ಷಿಸುವುದು ಆವಶ್ಯಕ.

೨೧-೨೨. ಅರಸನು ಉಳಿದ ಆರು ರಾಜ್ಯಾಂಗಗಳನ್ನು ಪ್ರಯತ್ನದಿಂದ ರಕ್ಷಿಸಬೇಕು. ಅವುಗಳಲ್ಲಿ ಯಾವುದೊಂದಕ್ಕೆ ಆಗಲಿ ಅಪಾಯವನ್ನು ತರುವಂತಹ ದ್ರೋಹಿಯನ್ನು ಶೀಘ್ರವಾಗಿ ವಧಿಸಬೇಕು. ಕನಿಕರವನ್ನು ತೋರಬಾರದು. ಏಕೆಂದರೆ ಮೃದು ಸ್ವಭಾವದವನನ್ನು ಎಲ್ಲರೂ ಕಡೆಗಣಿಸುತ್ತಾರೆ

೨೩. ಹೀಗೆಂದ ಮಾತ್ರಕ್ಕೆ ಅರಸನು ಕ್ರೂರಿಯಾಗಿರಬೇಕೆಂದು ಅರ್ಥವಲ್ಲ. ತೀಕ್ಷ್ಣಸ್ವಭಾವದವನನ್ನು ಕಂಡರೆ ಪ್ರಜೆಗಳಿಗೆ ಆಗದು. ಸಮಯಕ್ಕೆ ತಕ್ಕಂತೆ ಮೃದುವೂ ಕಠಿಣನೂ ಆಗಬೇಕು. ಅಂತಹ ರಾಜನೇ ಇಹಪರಸೌಖ್ಯಗಳನ್ನು ಅಪೇಕ್ಷಿಸಲು ಅರ್ಹನಾಗುವನು. ಅವು ಅವನಿಗೆ ಸಿಕ್ಕಿಯೂ ಸಿಕ್ಕುವುವು.

೨೪. ಭೂಪಾಲನು ತನ್ನ ಕೈಕೆಳಗಿನ ಅಧಿಕಾರಿಗಳೊಡನೆ ಪರಿಹಾಸದಲ್ಲಿ ತೊಡಗಬಾರದು. ಏಕೆಂದರೆ ಸಂತೋಷವಾಗಿರುವ ಸಮಯದಲ್ಲಿ ಅವರು ಅವನನ್ನು ಅಲಕ್ಷ್ಯವಾಗಿ ನೋಡುವರು.

**ಭೃತ್ಯಾಃ ಪರಿಭವಂತೀಹ ನೃಪಂ ಹರ್ಷವಶಂ ಗತಂ**
**ವ್ಯಸನಾನಿ ಚ ಸರ್ವಾಣಿ ಭೂಪತಿಃ ಪರಿವರ್ಜಯೇತ್ ॥೨೫॥**

**ಲೋಕಸಂಗ್ರಹಣಾರ್ಥಾಯ ಕೃತಕವ್ಯಸನೀ ಭವೇತ್ ।**
**ಶೌಂಡೀರಸ್ಯ ನರೇಂದ್ರಸ್ಯ ನಿತ್ಯಮುದ್ರಿಕ್ತಚೇತಸಃ ॥೨೬॥**

**ಜನಾ ವಿರಾಗಮಾಯಾಂತಿ ಸದಾ ದುಃಸೇವ್ಯಭಾವತಃ ।**
**ಸ್ಮಿತಪೂರ್ವಾಭಿಭಾಷೀ ಸ್ಯಾತ್ಸರ್ವಸ್ಯೈವ ಮಹೀಪತಿಃ ॥೨೭॥**

**ವಧ್ಯೇಷ್ವಪಿ ಮಹಾಭಾಗ ಭ್ರೂಕುಟಿಂ ನ ಸಮಾಚರೇತ್ ।**
**ಭಾವ್ಯಂ ಧರ್ಮಭೃತಾಂ ಶ್ರೇಷ್ಠ ಸ್ಥೂಲಲಕ್ಷ್ಯೇಣ ಭೂಭುಜಾ ॥೨೮॥**

**ಸ್ಥೂಲಲಕ್ಷ್ಯಸ್ಯ ವಶಗಾ ಸರ್ವಾ ಭವತಿ ಮೇದಿನೀ ।**
**ಅದೀರ್ಘಸೂತ್ರಶ್ಚ ಭವೇತ್ಸರ್ವಕರ್ಮಸು ಪಾರ್ಥಿವ ॥೨೯॥**

---

೨೫. ದ್ಯೂತಾದಿ ಸಕಲ ವ್ಯಸನಗಳನ್ನೂ ರಾಜನು ದೂರಮಾಡಬೇಕು. ಆದರೆ ಕೆಲವುವೇಳೆ ಲೋಕಸಂಗ್ರಹಕ್ಕಾಗಿ ಅವುಗಳಲ್ಲಿ ಆಸಕ್ತನಾದವನಂತೆ ನಟಿಸಬೇಕು.

೨೬. ರಾಜನು ಗರ್ವಿಷ್ಠನೂ ರೇಗುವ ಸ್ವಭಾವದವನೂ ಆಗಬಾರದು. ಅಂತಹವನನ್ನು ಮೆಚ್ಚಿಸುವುದೇ ಕಷ್ಟವೆಂದು ತಿಳಿದು ಜನರು ಅವನಲ್ಲಿ ಅಪ್ರೀತಿಯನ್ನು ತಾಳುವರು.

೨೭. ಮಹೀಪಾಲಕನು ಎಲ್ಲರೊಡನೆಯೂ ನಗೆಮೊಗದಿಂದ ಮಾತಾಡಬೇಕು. ಕೀರ್ತಿವಂತನಾದ ಎಲೈ ಮನುಚಕ್ರವರ್ತೀ, ವಧಾರ್ಹರಲ್ಲಿ ಸಹ ಹುಬ್ಬುಗಂಟಿಕ್ಕಬಾರದು.

೨೮. ಧರ್ಮಾತ್ಮರಲ್ಲಿ ಅಗ್ರಗಣ್ಯನಾದ ಓ ರಾಜೇಂದ್ರಾ, ಭೂಪತಿಯು ಉದಾರಿಯಾಗಿರಬೇಕು. ಉದಾರಿಗೆ ಭೂಮಂಡಲವೆಲ್ಲ ವಶವಾಗುವುದು.

೨೯. ರಾಜನು ಎಲ್ಲ ಕಾರ್ಯಗಳನ್ನೂ ತ್ವರೆಯಿಂದ ನಡೆಸಬೇಕು. ಅತಿವಿಲಂಬದಿಂದ ಕಾರ್ಯಮಾಡುವವನ ಕೆಲಸವು ಕೆಡುವುದು ಖಂಡಿತ.

ದೀರ್ಘಸೂತ್ರಸ್ಯ ನೃಪತೇಃ ಕರ್ಮಹಾನಿರ್ಧ್ರುವಂ ಭವೇತ್ ।
ರಾಗೇ ದರ್ಪೇ ಚ ಮಾನೇ ಚ ದ್ರೋಹೇ ಪಾಪೇ ಚ ಕರ್ಮಣಿ ॥೩೦॥

ಅಪ್ರಿಯೇ ಚೈವ ಕರ್ತವ್ಯೇ ದೀರ್ಘಸೂತ್ರಂ ಪ್ರಶಸ್ಯತೇ ।
ರಾಜ್ಞಾ ಸಂವೃತಮಂತ್ರೇಣ ಸದಾ ಭಾವ್ಯಂ ನೃಪೋತ್ತಮ ॥೩೧॥

ತಸ್ಯಾಸಂವೃತಮಂತ್ರಸ್ಯ ರಾಜ್ಞಃ ಸರ್ವಾಪದೋ ಧ್ರುವಂ ।
ಕೃತಾನ್ಯೇವ ತು ಕಾರ್ಯಾಣಿ ಜ್ಞಾಯಂತೇ ಯಸ್ಯ ಭೂಪತೇಃ ॥೩೨॥

ನಾಽಽರಬ್ಧಾನಿ ಮಹಾಭಾಗ ತಸ್ಯ ಸ್ಯಾದ್ವಸುಧಾ ವಶೇ ।
ಮಂತ್ರಮೂಲಂ ಸದಾ ರಾಜ್ಯಂ ತಸ್ಮಾನ್ಮಂತ್ರಃ ಸುರಕ್ಷಿತಃ ॥೩೩॥

ಕರ್ತವ್ಯಃ ಪೃಥಿವೀಪಾಲೈರ್ಮಂತ್ರಭೇದಭಯಾತ್ಸದಾ ।
ಮಂತ್ರವಿತ್ಸಾಧಿತೋ ಮಂತ್ರಃ ಸಂಪತ್ತೀನಾಂ ಸುಖಾವಹಃ ॥೩೪॥

---

೩೦. ಕಾಮ, ದರ್ಪ, ಗರ್ವ, ದ್ರೋಹ ಪಾಪಕರ್ಮ, ಅಪ್ರಿಯವಾದ ಕಾರ್ಯ ಇಂತಹ ಸಂದರ್ಭಗಳಲ್ಲಿ ತಡೆದು ಕೆಲಸಮಾಡುವುದು ಉತ್ತಮ.

೩೧. ರಾಜೇಂದ್ರಾ, ಭೂಪತಿಯು ಯಾವಾಗಲೂ ಮಂತ್ರಾಲೋಚನೆಯನ್ನು ರಹಸ್ಯವಾಗಿ ಇಟ್ಟಿರಬೇಕು. ಅದನ್ನು ಬಹಿರಂಗಪಡಿಸುವ ಅರಸನಿಗೆ ಎಲ್ಲ ಬಗೆಯ ವಿಪತ್ತುಗಳೂ ಬರುವುವು; ಸಂದೇಹವಿಲ್ಲ.

೩೨. ಎಲೈ ಯಶಸ್ವಿಯೇ, ಯಾವ ರಾಜನ ಕಾರ್ಯಗಳು ಉಪಕ್ರಮದಲ್ಲಿ ಅಲ್ಲದೆ ಸಂಪೂರ್ಣವಾಗಿ ಮುಗಿದ ಮೇಲೆ ಮಾತ್ರವೇ ಇತರರಿಗೆ ಗೊತ್ತಾಗುವುವೋ ಅವನು ಪ್ರಪಂಚವೆಲ್ಲವನ್ನೂ ವಶಪಡಿಸಿಕೊಳ್ಳಬಲ್ಲನು.

೩೩-೩೪. ರಾಜ್ಯಕ್ಕೆ ಯಾವಾಗಲೂ ಮಂತ್ರಾಲೋಚನೆಯೇ ತಳಹದಿ. ಆದುದರಿಂದ ಅರಸರು ಅದನ್ನು ಬಹಿರಂಗವಾಗದಂತೆ ಎಚ್ಚರಿಕೆಯಿಂದ ಕಾಪಾಡಬೇಕು. ಕುಶಲನಾದ ಅರಸನು ತನ್ನ ಆಲೋಚನೆಯನ್ನು ಸಕಾಲದಲ್ಲಿ ಕಾರ್ಯರೂಪಕ್ಕೆ ತಂದರೆ ಅದು ಸಕಲವಿಧವಾದ ಸಂಪತ್ತುಗಳನ್ನೂ ಸೌಖ್ಯವನ್ನೂ ಕೊಡುವುದು.

ಮಂತ್ರಭೇದೇನ ಬಹವೋ ವಿನಷ್ಟಾಃ ಪೃಥಿವೀಕ್ಷಿತಃ ।
ಆಕಾರೈರಿಂಗಿತೈರ್ಗತ್ಯಾ ಚೇಷ್ಟಯಾ ಭಾಷಿತೇನ ಚ ॥೩೫॥

ನೇತ್ರವಕ್ತ್ರವಿಕಾರೈಶ್ಚ ಗೃಹ್ಯತೇಽಂತರ್ಗತಂ ಮನಃ ।
ನಯಸ್ಯ ಕುಶಲಸ್ತಸ್ಯ ವಶೇ ಸರ್ವಾ ವಸುಂಧರಾ ॥೩೬॥

ಭವತೀಹ ಮಹೀಪಾಲ ಸದಾ ಪಾರ್ಥಿವನಂದನ ।
ನೈಕಸ್ತು ಮಂತ್ರಯೇನ್ಮಂತ್ರಂ ರಾಜಾ ನ ಬಹುಭಿಃ ಸಹ ॥೩೭॥

ನಾರೋಹೇದ್ವಿಷಮಾಂ ನಾವಮಪರೀಕ್ಷಿತನಾವಿಕಾಂ ।
ಯೇ ಚಾಸ್ಯ ಭೂಮಿಜಯಿನೋ ಭವೇಯುಃ ಪರಿಪಂಥಿನಃ ॥೩೮॥

ತಾನಾನಯೇದ್ವಶೇ ಸರ್ವಾನ್ ಸಾಮಾದಿಭಿರುಪಕ್ರಮೈಃ ।
ಯಥಾ ನ ಸ್ಯಾತ್ಕೃಶೀಭಾವಃ ಪ್ರಜಾನಾಮನವೇಕ್ಷಯಾ ॥೩೯॥

---

೩೫. ಮಂತ್ರಭೇದದಿಂದ ಎಷ್ಟೋಜನ ರಾಜರು ಹಾಳಾಗಿದ್ದಾರೆ. ಆಕಾರದಿಂದ, ಅಂಗಚೇಷ್ಟೆಗಳಿಂದ, ನಡಗೆಯಿಂದ, ಮಾತಿನಿಂದ ಮತ್ತು ಕಣ್ಣುಮುಖಗಳ ವಿಕಾರಗಳಿಂದ ಮನಸ್ಸಿನಲ್ಲಿರುವ ಅಭಿಪ್ರಾಯವನ್ನು ತಿಳಿದುಕೊಳ್ಳಬಹುದು.

೩೬-೩೭. ರಾಜನೀತಿಯಲ್ಲಿ ಕುಶಲನಾದ ರಾಜನಿಗೆ ಭೂಮಿಯೆಲ್ಲವೂ ವಶವಾಗುವುದು. ಓ ರಾಜೇಂದ್ರಾ, ಅಷ್ಟೇ ಅಲ್ಲ. ಅದು ಅವನಲ್ಲಿ ಸ್ಥಿರವಾಗಿ ನಿಲ್ಲುವುದು. ಭೂಪಾಲನು ಒಬ್ಬನೇ ಮಂತ್ರಾಲೋಚನೆಯನ್ನು ಮಾಡಬಾರದು. ಬಹುಜನರೊಡನೆಯೂ ಆಲೋಚಿಸಬಾರದು.

೩೮. ನಾವಿಕನನ್ನು ಪರೀಕ್ಷಿಸದೆ ಸಮತೂಕದಲ್ಲಿ ಇಲ್ಲದ ನಾವೆಯನ್ನು ಏರಬಾರದು. ತನ್ನ ದೇಶದ ಭೂಭಾಗಗಳನ್ನು ಗೆದ್ದ ಶತ್ರುರಾಜರೆಲ್ಲರನ್ನೂ ಸಾಮಾದ್ಯುಪಾಯಗಳಿಂದ ವಶಪಡಿಸಿಕೊಳ್ಳಬೇಕು.

೩೯. ಪ್ರಜೆಗಳು ಕಷ್ಟಕ್ಕೆ ಸಿಕ್ಕಿ ಕಂಗೆಡದಹಾಗೆ ಎಚ್ಚರಿಕೆಯನ್ನು ತೆಗೆದುಕೊಂಡು ರಾಜನು ತನ್ನ ರಾಷ್ಟ್ರವನ್ನು ಆಳಬೇಕು.

ತಥಾ ರಾಜ್ಞಾ ಪ್ರಕರ್ತವ್ಯಂ ಸ್ವರಾಷ್ಟ್ರಂ ಪರಿರಕ್ಷತಾ ।
ಮೋಹಾದ್ರಾಜಾ ಸ್ವರಾಷ್ಟ್ರಂ ಯಃ ಕರ್ಶಯತ್ಯನವೇಕ್ಷಯಾ ॥೪೦॥

ಸೋಽಚಿರಾದ್ಭ್ರಶ್ಯತೇ ರಾಜ್ಯಾಜ್ಜೀವಿತಾಚ್ಚ ಸಬಾಂಧವಃ ।
ಭೃತೋ ವತ್ಸೋ ಜಾತಬಲಃ ಕರ್ಮಯೋಗ್ಯೋ ಯಥಾ ಭವೇತ್ ॥೪೧॥

ತಥಾ ರಾಷ್ಟ್ರಂ ಮಹಾಭಾಗ ಭೃತಂ ಕರ್ಮಸಹಂ ಭವೇತ್ ।
ಯೋ ರಾಷ್ಟ್ರಮನುಗೃಹ್ಣಾತಿ ರಾಜ್ಯಂ ಸ ಪರಿರಕ್ಷತಿ ॥೪೨॥

ಸಂಜಾತಮುಪಜೀವೇತ್ತು ವಿಂದತೇ ಸ ಮಹತ್ಫಲಂ ।
ರಾಷ್ಟ್ರಾದ್ಧಿರಣ್ಯಂ ಧಾನ್ಯಂ ಚ ಮಹೀಂ ರಾಜಾ ಸುರಕ್ಷಿತಾಂ ॥೪೩॥

ಮಹತಾ ತು ಪ್ರಯತ್ನೇನ ಸ್ವರಾಷ್ಟ್ರಸ್ಯ ಚ ರಕ್ಷಿತಾ ।
ನಿತ್ಯಂ ಸ್ವೇಭ್ಯಃ ಪರೇಭ್ಯಶ್ಚ ಯಥಾ ಮಾತಾ ಯಥಾ ಪಿತಾ ॥೪೪॥

---

೪೦. ಮೋಹವಶನಾಗಿ ಔದಾಸೀನ್ಯದಿಂದ ದೇಶವನ್ನು ಕಷ್ಟಕ್ಕೆ ಗುರಿಮಾಡುವ ಅರಸನು ಬೇಗನೆ ರಾಜ್ಯವನ್ನು ಕಳೆದುಕೊಳ್ಳುವನು. ಮತ್ತು ಬಂಧುಮಿತ್ರಪರಿವಾರದೊಡನೆ ಹತನಾಗುವನು.

೪೧-೪೨. ಎಲೈ ಮಹಾಮಹಿಮನೇ, ಸಾಕಿಸಲಹಿದ ಕರುವು ಎತ್ತಾಗಿ ಬೆಳೆದು ಬಲಶಾಲಿಯಾಗಿ ಮುಂದೆ ಹೊರೆಹೊತ್ತು ಕೆಲಸಮಾಡುವಂತೆ ದುರ್ಭಿಕ್ಷಾದಿ ಬಾಧೆಗಳು ಕಾಡದಂತೆ ರಕ್ಷಿತವಾದ ರಾಷ್ಟ್ರವು ರಾಜನಿಗಾಗಿ ಎಂತಹ ಸಾಹಸ ಕಾರ್ಯವನ್ನಾದರೂ ಮಾಡಬಲ್ಲುದು. ಯಾವ ಅರಸನಿಗೆ ತನ್ನ ದೇಶದ ಮೇಲೆ ವಾತ್ಸಲ್ಯವಿರುವುದೋ ಅವನು ಅದನ್ನು ಚೆನ್ನಾಗಿ ಆಳಬಲ್ಲನು.

೪೩. ತನ್ನ ದೇಶದ ಉತ್ಪತ್ತಿಗನುಸಾರವಾಗಿ ರಾಜನು ಬಾಳಬೇಕು. ಅದರಿಂದ ಅವನಿಗೆ ಹೆಚ್ಚಾದ ಫಲವುಂಟು. ರಾಷ್ಟ್ರದಿಂದ ಬಂಗಾರವನ್ನೂ ಧಾನ್ಯವನ್ನೂ ಅವನು ಪಡೆಯುವನು. ಆದಕಾರಣ ದೇಶವನ್ನು ಸುರಕ್ಷಿತವಾಗಿ ಇಡಬೇಕು.

೪೪. ತನ್ನವರಿಂದಲೂ ಬೇರೆಯವರಿಂದಲೂ ತೊಂದರೆ ಬಾರದಂತೆ, ತಂದೆ ತಾಯಿಗಳ ಹಾಗೆ ಬಹು ಪ್ರಯತ್ನದಿಂದ ತನ್ನ ದೇಶವನ್ನು ಪಾಲಿಸಬೇಕು.

ಗೋಪಿತಾನಿ ಸದಾ ಕುರ್ಯಾತ್ಸಂಯತಾನೀಂದ್ರಿಯಾಣಿ ಚ ।
ಅಜಸ್ರಮುಪಯೋಕ್ತವ್ಯಂ ಫಲಂ ತೇಭ್ಯಸ್ತಥೈವ ಚ ॥೪೫॥

ಸರ್ವಂ ಕರ್ಮೇದಮಾಯತ್ತಂ ವಿಧಾನೇ ದೈವಮಾನುಷೇ ।
ತಯೋರ್ದೈವಮಚಿಂತ್ಯಂ ಚ ಪೌರುಷೇ ವಿದ್ಯತೇ ಕ್ರಿಯಾ ॥೪೬॥

ಏವಂ ಮಹೀಂ ಪಾಲಯತೋಽಸ್ಯ ಭರ್ತು
ರ್ಲೋಕಾನುರಾಗಃ ಪರಮೋ ಭವೇತ್ತು ।
ಲೋಕಾನುರಾಗಪ್ರಭವಾ ಚ ಲಕ್ಷ್ಮೀ
ರ್ಲಕ್ಷ್ಮೀವತಶ್ಚಾಪಿ ಪರಾ ಚ ಕೀರ್ತಿಃ ॥೪೭॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ರಾಜಧರ್ಮಾನುಕೀರ್ತನೇ
ವಿಂಶತ್ಯಧಿಕದ್ವಿಶತತಮೋಽಧ್ಯಾಯಃ

---

೪೫. ದುರ್ವಿಷಯಗಳಿಗೆ ಹೋಗದಂತೆ ಯಾವಾಗಲೂ ಇಂದ್ರಿಯಗಳನ್ನು ಸ್ವಾಧೀನದಲ್ಲಿ ಇಟ್ಟುಕೊಳ್ಳಬೇಕು. ಅವುಗಳಿಂದ ದೊರಕುವ ಜ್ಞಾನರೂಪವಾದ ಫಲವನ್ನು ಯಾವಾಗಲೂ ಹಿತಕರವಾದ ಮಾರ್ಗದಲ್ಲಿ ಉಪಯೋಗಿಸಬೇಕು.

೪೬. ಈ ಎಲ್ಲ ಕಾರ್ಯವೂ ಅದೃಷ್ಟದ ಮತ್ತು ಪುರುಷಪ್ರಯತ್ನದ ಅಧೀನವಾಗಿದೆ. ಅವುಗಳಲ್ಲಿ ಅದೃಷ್ಟವು ಊಹೆಗೆ ದೂರವಾದುದು. ಆದಕಾರಣ ಭೂಪಾಲಕನು ತನ್ನ ಪ್ರಯತ್ನದಿಂದ ಕಾರ್ಯವನ್ನು ಸಾಧಿಸಬೇಕು.

೪೭. ಹೀಗೆ ಭೂಮಿಯನ್ನು ಪರಿಪಾಲಿಸುವ ರಾಜನಲ್ಲಿ ಪ್ರಜೆಗಳಿಗೆ ಬಹಳ ಪ್ರೀತಿ ಹುಟ್ಟುವುದು. ಪ್ರಜಾನುರಾಗದಿಂದ ಲಕ್ಷ್ಮಿಯೊಲಿಯುವಳು. ಲಕ್ಷ್ಮಿಯೊಲಿದರೆ ಔದಾರ್ಯಾದಿ ಗುಣಸಂಪತ್ತುಗಳೂ ಆ ಮೂಲಕ ಅಪಾರವಾದ ಕೀರ್ತಿಯೂ ಉಂಟಾಗುವುವು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯವು ರಾಜನ ಕರ್ತವ್ಯಗಳಲ್ಲಿ ಕೆಲವನ್ನು ತಿಳಿಸುತ್ತದೆ.

ರಾಜನು ತನ್ನ ಮಗನಿಗೆ ಸಕಲಕಲೆಗಳನ್ನೂ ಕಲಿಸಿ ಅವನಲ್ಲಿ ಸುಗುಣಗಳು ಬೇರೂರುವಂತೆ ಮಾಡಬೇಕು. ಬೇಟೆ, ಜೂಜು ಮೊದಲಾದ ವ್ಯಸನಗಳಿಗೆ ಮನಸ್ಸನ್ನು ಕೊಡಬಾರದು. ಕೆಲವು ವೇಳೆ ಲೋಕದ ಮೆಚ್ಚಿಗೆಗಾಗಿ ಇವುಗಳಲ್ಲಿ ಆಸಕ್ತನಾದಂತೆ ನಟಿಸಬೇಕಾಗುವುದು. ರಾಜ್ಯದ ಸಪ್ತಾಂಗಗಳ ರಕ್ಷಣೆಯನ್ನು ಎಚ್ಚರಿಕೆಯಿಂದ ಮಾಡುತ್ತ, ಮಂತ್ರಾಲೋಚನೆಯನ್ನು ಅತಿರಹಸ್ಯವಾಗಿ ನಡೆಸುತ್ತ ಪ್ರಜೆಗಳ ಅನುರಾಗವನ್ನು ಸಂಪಾದಿಸಲು ಎಡೆಬಿಡದೆ ಯತ್ನಿಸಬೇಕು. ದುರ್ವಿಷಯಗಳಿಗೆ ಹೋಗದಂತೆ ಇಂದ್ರಿಯಗಳನ್ನು ಸ್ವಾಧೀನದಲ್ಲಿ ಇಟ್ಟುಕೊಳ್ಳಬೇಕು. ಹೀಗೆ ರಾಜ್ಯಭಾರವನ್ನು ಮಾಡುವ ರಾಜನನ್ನು ಪ್ರಜೆಗಳು ಮನಃಪೂರ್ವಕವಾಗಿ ಪ್ರೀತಿಸುವರು. ಅವನ ಸಂಪತ್ತೂ ವೈಭವವೂ ಹೆಚ್ಚುವುವು. ಕೀರ್ತಿ ಹರಡುವುದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ರಾಜಧರ್ಮಾನುಕೀರ್ತನದಲ್ಲಿ
ಇನ್ನೂರಿಪ್ಪತ್ತನೆಯ ಅಧ್ಯಾಯವು ಮುಗಿದುದು

## ಅಥೈಕವಿಂಶತ್ಯಧಿಕದ್ವಿಶತತಮೋಽಧ್ಯಾಯಃ

॥ ಮನುರುವಾಚ ॥

ದೈವೇ ಪುರುಷಕಾರೇ ಚ ಕಿಂ ಜ್ಯಾಯಸ್ತದ್ಬ್ರವೀಹಿ ಮೇ ।
ಅತ್ರ ಮೇ ಸಂಶಯೋ ದೇವ ಛೇತ್ತುಮರ್ಹಸ್ಯಶೇಷತಃ ॥ ೧ ॥

॥ ಮತ್ಸ್ಯ ಉವಾಚ ॥

ಸ್ವಮೇವ ಕರ್ಮ ದೈವಾಖ್ಯಂ ವಿದ್ಧಿ ದೇಹಾಂತರಾರ್ಜಿತಂ ।
ತಸ್ಮಾತ್ಪೌರುಷಮೇವೇಹ ಶ್ರೇಷ್ಠಮಾಹುರ್ಮನೀಷಿಣಃ ॥ ೨ ॥

ಪ್ರತಿಕೂಲಂ ತಥಾ ದೈವಂ ಪೌರುಷೇಣ ವಿಹನ್ಯತೇ ।
ಮಂಗಲಾಚಾರಯುಕ್ತಾನಾಂ ನಿತ್ಯಮುತ್ಥಾನಶಾಲಿನಾಂ ॥ ೩ ॥

ಯೇಷಾಂ ಪೂರ್ವಕೃತಂ ಕರ್ಮ ಸಾತ್ವಿಕಂ ಮನುಜೋತ್ತಮ ।
ಪೌರುಷೇಣ ವಿನಾ ತೇಷಾಂ ಕೇಷಾಂಚಿದ್ದೃಶ್ಯತೇ ಫಲಂ ॥ ೪ ॥

---

೧. ಮನುಚಕ್ರವರ್ತಿ ಹೇಳಿದನು.—ದೇವಾ, ಅದೃಷ್ಟ ಮತ್ತು ಪುರುಷ ಪ್ರಯತ್ನಗಳಲ್ಲಿ ಪ್ರಬಲವಾದುದು ಯಾವುದು? ಅದನ್ನು ನನಗೆ ಹೇಳು. ಈ ವಿಚಾರದಲ್ಲಿ ನನಗಿರುವ ಸಂಶಯವನ್ನು ಸಂಪೂರ್ಣವಾಗಿ ಪರಿಹರಿಸು.

೨. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಜನ್ಮಾಂತರದಲ್ಲಿ ತಾನು ಮಾಡಿದ ಕರ್ಮವೇ ಅದೃಷ್ಟ. ಬೇರೆ ಯಾವುದೂ ಅಲ್ಲ. ಅದಕ್ಕಿಂತಲೂ ಪುರುಷಪ್ರಯತ್ನವೇ ಶ್ರೇಷ್ಠವೆಂದು ಪ್ರಾಜ್ಞರು ಹೇಳುತ್ತಾರೆ.

೩. ಶಾಸ್ತ್ರೀಯವಾದ ಶುಭಕರ್ಮವನ್ನು ಯಥಾವಿಧಿಯಾಗಿ ಮಾಡುತ್ತ ನಿತ್ಯವೂ ಜಾಗರೂಕರಾಗಿರುವವರಿಗೆ ಪ್ರತಿಕೂಲವಾದ ದೈವವು ಪರಿಹಾರವಾಗುತ್ತದೆ. ಆದುದರಿಂದ ದೈವಕ್ಕಿಂತಲೂ ಪುರುಷಕಾರವೇ ಪ್ರಬಲವಾದುದು.

೪. ಓ ರಾಜಾ, ಜನ್ಮಾಂತರದ ಸಾತ್ವಿಕಕರ್ಮಗಳಲ್ಲಿ ಕೆಲವು ಪುರುಷ ಪ್ರಯತ್ನವಿಲ್ಲದೆಯೇ ಈ ಜನ್ಮದಲ್ಲಿ ಫಲವನ್ನು ಕೊಡುತ್ತವೆ. ಇದು ಎಷ್ಟೋವೇಳೆ ಅನುಭವಕ್ಕೆ ಬಂದಿದೆ.

**ಕರ್ಮಣಾ ಪ್ರಾಪ್ಯತೇ ಲೋಕೇ ರಾಜಸಸ್ಯ ತಥಾ ಫಲಂ ।**
**ಕೃಚ್ಛ್ರೇಣ ಕರ್ಮಣಾ ವಿದ್ಧಿ ತಾಮಸಸ್ಯ ತಥಾ ಫಲಂ ॥ ೫ ॥**

**ಪೌರುಷೇಣಾಪ್ಯತೇ ರಾಜನ್ ಪ್ರಾರ್ಥಿತವ್ಯಂ ಫಲಂ ನರೈಃ ।**
**ದೈವಮೇವ ವಿಜಾನಂತಿ ನರಾಃ ಪೌರುಷವರ್ಜಿತಾಃ ॥ ೬ ॥**

**ತಸ್ಮಾತ್ತ್ರಿಕಾಲಂ ಸಂಯುಕ್ತಂ ದೈವಂ ತು ಸಫಲಂ ಭವೇತ್ ।**
**ಪೌರುಷಂ ದೈವಸಂಪತ್ತ್ಯಾ ಕಾಲೇ ಫಲತಿ ಪಾರ್ಥಿವ ॥ ೭ ॥**

**ದೈವಂ ಪುರುಷಕಾರಶ್ಚ ಕಾಲಶ್ಚ ಪುರುಷೋತ್ತಮ ।**
**ತ್ರಯಮೇತನ್ಮನುಷ್ಯಸ್ಯ ಪಿಂಡಿತಂ ಸ್ಯಾತ್ಫಲಾವಹಂ ॥ ೮ ॥**

**ಕೃಷಿವೃಷ್ಟಿಸಮಾಯೋಗಾದ್ದೃಶ್ಯಂತೇ ಫಲಸಿದ್ಧಯಃ ।**
**ತಾಸ್ತು ಕಾಲೇ ಪ್ರದೃಶ್ಯಂತೇ ನೈವಾಕಾಲೇ ಕಥಂಚನ ॥ ೯ ॥**

---

೫. ಹಾಗಲ್ಲದೆ ಹಿಂದಿನ ಜನ್ಮದ ಕರ್ಮವು ರಜೋಗುಣಮಯವಾಗಿದ್ದರೆ ಸುಕರವಾದ ಪುರುಷಪ್ರಯತ್ನದಿಂದ ಅದು ಫಲಿಸುವುದು. ತಮೋಗುಣಮಯ ವಾಗಿದ್ದರೆ ಕಷ್ಟಸಾಧ್ಯವಾದ ಪ್ರಯತ್ನದಿಂದ ಅದು ಫಲವನ್ನು ಕೊಡುವುದು.

೬. ರಾಜೇಂದ್ರಾ, ಅಪೇಕ್ಷಿಸಿದ ಫಲವು ಕೈಗೂಡಬೇಕಾದರೆ ಪುರುಷ ಪ್ರಯತ್ನವು ಬೇಕು. ಸಾಹಸಮಾಡಲಾರದವರು ಅದೃಷ್ಟವೇ ದೊಡ್ಡದೆಂದು ತಿಳಿಯುವರು.

೭. ಆದುದರಿಂದ ಅದೃಷ್ಟವು ಭೂತಭವಿಷ್ಯದ್ವರ್ತಮಾನಗಳೆಂಬ ಮೂರು ಕಾಲಗಳಲ್ಲಿಯೂ ಪುರುಷಪ್ರಯತ್ನದೊಡನೆ ಸೇರಿಯೇ ಫಲವನ್ನು ಕೊಡುತ್ತದೆ. ರಾಜಾ, ಹಾಗೆಯೇ ಮನುಷ್ಯಪ್ರಯತ್ನವೂ ಕೂಡ ಅದೃಷ್ಟದೊಡನೆ ಕೂಡಿ ಸಕಾಲ ದಲ್ಲಿ ಫಲಿಸುತ್ತದೆ.

೮. ನರೇಂದ್ರಾ, ಅದೃಷ್ಟ, ಪ್ರಯತ್ನ, ಕಾಲ ಈ ಮೂರೂ ಒಟ್ಟುಗೂಡಿ ಮನುಷ್ಯನಿಗೆ ಫಲವನ್ನು ಕೊಡುತ್ತವೆ.

೯. ವ್ಯವಸಾಯಗಾರನಿಗೆ ಫಲವು ಸಿದ್ಧಿಸಬೇಕಾದರೆ ಅವನ ಬೇಸಾಯವೂ ಅದಕ್ಕೆ ಅನುಕೂಲವಾಗಿ ಮಳೆಯೂ ಒಟ್ಟುಗೂಡಬೇಕು. ಇಷ್ಟೇ ಸಾಲದು. ಅದಕ್ಕೆ ತಕ್ಕ ಕಾಲವೂ ಬರಬೇಕು. ಅಕಾಲದಲ್ಲಿ ಫಲಸಿದ್ಧಿಯು ಎಂದಿಗೂ ಆಗದು.

ತಸ್ಮಾತ್ಸದೈವ ಕರ್ತವ್ಯಂ ಸಧರ್ಮಂ ಪೌರುಷಂ ನರೈಃ ।
ವಿಪತ್ತಾವಪಿ ಯಸ್ಯೇಹ ಪರಲೋಕೇ ಧ್ರುವಂ ಫಲಂ ॥೧೦॥

ನಾಲಸಾಃ ಪ್ರಾಪ್ನುವಂತ್ಯರ್ಥಾನ್ನ ಚ ದೈವಪರಾಯಣಾಃ ।
ತಸ್ಮಾತ್ಸರ್ವಪ್ರಯತ್ನೇನ ಪೌರುಷೇ ಯತ್ನಮಾಚರೇತ್ ॥೧೧॥

ತ್ಯಕ್ತ್ವಾಲಸಾನ್ ದೈವಪರಾನ್ ಮನುಷ್ಯಾ
ನುತ್ಥಾನಯುಕ್ತಾನ್ ಪುರುಷಾನ್ ಹಿ ಲಕ್ಷ್ಮೀಃ ।
ಅನ್ವಿಷ್ಯ ಯತ್ನಾದ್ವೃಣುಯಾನ್ನೃಪೇಂದ್ರ
ತಸ್ಮಾತ್ಸದೋತ್ಥಾನವತಾ ಹಿ ಭಾವ್ಯಂ ॥೧೨॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ದೈವಪುರುಷಕಾರವರ್ಣನಂ
ನಾಮೈಕವಿಂಶತ್ಯಧಿಕದ್ವಿಶತತಮೋಽಧ್ಯಾಯಃ

---

೧೦. ಆದಕಾರಣ ಮನುಷ್ಯನು ಎಂತಹ ಕಷ್ಟ ಬಂದರೂ ಹೆದರದೆ ಧರ್ಮಕ್ಕೆ ವಿರೋಧವಿಲ್ಲದಂತೆ ಎಡೆಬಿಡದೆ ಪ್ರಯತ್ನವನ್ನು ಮಾಡುತ್ತಲೇ ಇರಬೇಕು. ಈ ಲೋಕವಲ್ಲಿ ಮಾತ್ರವೇ ಅಲ್ಲ; ಪರಲೋಕದಲ್ಲಿ ಕೂಡ ಅದರಿಂದ ಫಲವುಂಟು. ಸಂದೇಹವಿಲ್ಲ.

೧೧. ಸೋಮಾರಿಗಳಿಗೆ ಎಂದಿಗೂ ಫಲಸಿದ್ಧಿಯು ಆಗುವುದಿಲ್ಲ. ಅದೃಷ್ಟ ವನ್ನೇ ನಂಬಿಕೊಂಡಿರತಕ್ಕವರಿಗೂ ಇದೇ ಗತಿ. ಆದುದರಿಂದ ಸಕಲವಿಧದಿಂದಲೂ ಮನುಷ್ಯನು ತನ್ನ ಪ್ರಯತ್ನವನ್ನು ಮಾಡಬೇಕು. ಆದರಿಂದ ಮನೋರಥವು ಈಡೇರುವುದು.

೧೨. ಅದೃಷ್ಟವನ್ನೇ ನಂಬಿಕೊಂಡು ಪ್ರಯತ್ನಮಾಡದೆ ಕುಳಿತಿರುವ ಸೋಮಾರಿಗಳನ್ನು ಬಿಟ್ಟು, ಲಕ್ಷ್ಮಿಯು ಉದ್ಯೋಗಶೀಲರಾದವರನ್ನು ಹುಡುಕಿ ಕೊಂಡು ಹೋಗಿ ಆಶ್ರಯಿಸುವಳು. ರಾಜೇಂದ್ರಾ, ಆದಕಾರಣ ಮನುಷ್ಯನು ಯಾವಾಗಲೂ ಪ್ರಯತ್ನಶೀಲನಾಗಿರಬೇಕು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಅದೃಷ್ಟ ಮತ್ತು ಪುರುಷಪ್ರಯತ್ನಗಳ ತಾರತಮ್ಯವನ್ನು ವಿಚಾರಮಾಡಿದೆ.

ಜನ್ಮಾಂತರದಲ್ಲಿ ಮಾಡಿದ ಕರ್ಮವನ್ನೇ ಅದೃಷ್ಟವೆನ್ನುವರು. ಅದು ಈ ಜನ್ಮದಲ್ಲಿ ಪುರುಷಪ್ರಯತ್ನದ ಮೂಲಕ ಫಲವನ್ನು ಕೊಡುವುದು. ಆದುದರಿಂದ ಇವೆರಡೂ ಒಂದರೊಡನೊಂದು ಬೆರೆಯಬೇಕು. ಇವುಗಳ ಜೊತೆಗೆ ಅನುಕೂಲ ವಾದ ಕಾಲವೂ ಸೇರಬೇಕು. ವ್ಯವಸಾಯಗಾರನ ಪ್ರಯತ್ನವಷ್ಟೇ ಸಾಲದು. ಕಾಲಕಾಲಕ್ಕೆ ಮಳೆ ಬರಬೇಕು. ಆದರೂ ಅವನು ಬೆಳೆಯನ್ನು ತೆಗೆದುಕೊಳ್ಳ ಬೇಕಾದರೆ ಗೊತ್ತಾದ ಕಾಲದವರೆಗೂ ಕಾಯಬೇಕು. ಹೀಗೆ ಅದೃಷ್ಟ, ಪ್ರಯತ್ನ, ಕಾಲ ಈ ಮೂರೂ ಒಟ್ಟುಗೂಡಿ ಫಲವನ್ನು ಕೊಡುವುವು. ಅದೃಷ್ಟವನ್ನೇ ನಂಬಿಕೊಂಡಿರಬಾರದು. ಪ್ರಯತ್ನವನ್ನು ಮಾಡಬೇಕು. ಪ್ರಯತ್ನಹೀನರಿಗೆ ಲಕ್ಷ್ಮಿ ಎಂದಿಗೂ ಒಲಿಯಳು.

ಶ್ರೀಮತ್ಸ್ಯಮಹಾಪುರಾಣದಲ್ಲಿ ದೈವಪುರುಷಕಾರವರ್ಣನವೆಂಬ
ಇನ್ನೂರಿಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

## ಅಥ ದ್ವಾವಿಂಶತ್ಯಧಿಕದ್ವಿಶತತಮೋಽಧ್ಯಾಯಃ

॥ ಮನುರುವಾಚ ॥

ಉಪಾಯಾಂಸ್ತ್ವಂ ಸಮಾಚಕ್ಷ್ವ ಸಾಮಪೂರ್ವಾನ್ ಮಹಾದ್ಯುತೇ ।
ಲಕ್ಷಣಂ ಚ ತಥಾ ತೇಷಾಂ ಪ್ರಯೋಗಂ ಚ ಸುರೋತ್ತಮ ॥ ೧ ॥

॥ ಮತ್ಸ್ಯ ಉವಾಚ ॥

ಸಾಮ ಭೇದಸ್ತಥಾ ದಾನಂ ದಂಡಶ್ಚ ಮನುಜೇಶ್ವರ ।
ಉಪೇಕ್ಷಾ ಚ ತಥಾ ಮಾಯಾ ಇಂದ್ರಜಾಲಂ ಚ ಪಾರ್ಥಿವ ॥ ೨ ॥

ಪ್ರಯೋಗಾಃ ಕಥಿತಾಃ ಸಪ್ತ ತನ್ಮೇ ನಿಗದತಃ ಶೃಣು ।
ದ್ವಿವಿಧಂ ಕಥಿತಂ ಸಾಮ ತಥ್ಯಂ ಚಾತಥ್ಯಮೇವ ಚ ॥ ೩ ॥

ತತ್ರಾಪ್ಯತಥ್ಯಂ ಸಾಧೂನಾಮಾಕ್ರೋಶಾಯೈವ ಜಾಯತೇ ।
ತತ್ರ ಸಾಧುಃ ಪ್ರಯತ್ನೇನ ಸಾಮಸಾಧ್ಯೋ ನರೋತ್ತಮ ॥ ೪ ॥

---

೧. ಮನುಚಕ್ರವರ್ತಿ ಹೇಳಿದನು.—ಅಪರಿಮಿತ ತೇಜಸ್ವಿಯಾದ ಓ ದೇವ ದೇವಾ, ಸಾಮ ಮೊದಲಾದ ಉಪಾಯುಗಳನ್ನೂ, ಅವುಗಳ ಲಕ್ಷಣವನ್ನೂ, ಪ್ರಯೋಗವಿಧಾನವನ್ನೂ ತಿಳಿಸು.

೨. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಓ ರಾಜಾ, ಸಾಮ, ಭೇದ, ದಾನ, ದಂಡ, ಉಪೇಕ್ಷೆ, ಮಾಯೆ, ಇಂದ್ರಜಾಲ ಎಂಬ ಏಳೂ ಕಾರ್ಯ ಸಾಧನೆಯ ಉಪಾಯಗಳು. ಇವುಗಳ ಲಕ್ಷಣವನ್ನು ಹೇಳುವೆನು ಕೇಳು.

೩. ಸಾಮ ಎಂದರೆ ಸಮಾಧಾನ ವಚನವೆಂದರ್ಥ. ಅದರಲ್ಲಿ ಎರಡುವಿಧ. ಸತ್ಯ ಮತ್ತು ಅಸತ್ಯ. ಅಸತ್ಯವಚನವನ್ನು ಸಾಧುಗಳಿಗೆ ಹೇಳಿದರೆ ಕಾರ್ಯಸಾಧನ ವಾಗುವುದರ ಬದಲು ಅವರ ಕೋಪಕ್ಕೇ ಗುರಿಯಾಗಬೇಕಾಗುತ್ತದೆ. ಆದುದರಿಂದ ಅವರಲ್ಲಿ ಸತ್ಯಸಾಮವನ್ನೇ ಪ್ರಯೋಗಿಸಬೇಕು.

೪-೫. ನರೇಂದ್ರಾ, ಪ್ರಯತ್ನಪಟ್ಟರೆ ಸತ್ಪುರುಷರನ್ನು ಸಾಮೋಪಾಯದಿಂದ ವಶಪಡಿಸಿಕೊಳ್ಳಬಹುದು. ಸದ್ವಂಶದಲ್ಲಿ ಹುಟ್ಟಿದವರೂ, ಸರಳಸ್ವಭಾವದವರೂ,

ಮಹಾಕುಲೀನಾ ಋಜವೋ ಧರ್ಮನಿತ್ಯಾ ಜಿತೇಂದ್ರಿಯಾಃ |
ಸಾಮಸಾಧ್ಯಾ ನ ಚಾತ್ಯರ್ಥಂ ತೇಷು ಸಾಮ ಪ್ರಯೋಜಯೇತ್ || ೫ ||

ತಥ್ಯಂ ಸಾಮ ಚ ಕರ್ತವ್ಯಂ ಕುಲಶೀಲಾದಿವರ್ಣನಂ |
ತಥಾ ತದುಪಚಾರಾಣಾಂ ಕೃತಾನಾಂ ಚೈವ ವರ್ಣನಂ || ೬ ||

ಅನಯೈವ ತಥಾ ಯುಕ್ತ್ಯಾ ಕೃತಜ್ಞಾಖ್ಯಾಪನಂ ಸ್ವಕಂ |
ಏವಂ ಸಾಮ್ನಾ ಚ ಕರ್ತವ್ಯಾ ವಶಗಾ ಧರ್ಮತತ್ಪರಾಃ || ೭ ||

ಸಾಮ್ನಾ ಯದ್ಯಪಿ ರಕ್ಷಾಂಸಿ ಗೃಹ್ಣಂತೀತಿ ಪರಾ ಶ್ರುತಿಃ |
ತಥಾಪ್ಯೇತದಸಾಧೂನಾಂ ಪ್ರಯುಕ್ತಂ ನೋಪಕಾರಕಂ || ೮ ||

ಅತಿಶಂಕಿತಮಿತ್ಯೇವಂ ಪುರುಷಂ ಸಾಮವಾದಿನಂ |
ಅಸಾಧವೋ ವಿಜಾನಂತಿ ತಸ್ಮಾತ್ತತ್ತೇಷು ವರ್ಜಯೇತ್ || ೯ ||

---

ಧರ್ಮಪರರೂ, ಜಿತೇಂದ್ರಿಯರೂ ಆದವರು ಸಾಮೋಪಾಯಕ್ಕೆ ವಶರಾಗುವರು. ಅವರಲ್ಲಿ ಅಸತ್ಯಸಾಮವನ್ನು ಬಳಸಬಾರದು.

೬. ತಥ್ಯಸಾಮವನ್ನು ಪ್ರಯೋಗಿಸುವಾಗ ಅವನ ಕುಲಶೀಲಾದಿಗಳ ವರ್ಣನವನ್ನೂ, ಆತನು ಮಾಡಿರುವ ಉಪಚಾರಗಳ ವರ್ಣನವನ್ನೂ ಮಾಡಬಹುದು.

೭. ಈ ಯುಕ್ತಿಯಿಂದಲೇ ತನ್ನ ಕೃತಜ್ಞತೆಯನ್ನು ಸ್ಪಷ್ಟಪಡಿಸಬೇಕು. ಹೀಗೆ ಧರ್ಮನಿಷ್ಠರನ್ನು ಸಾಮೋಪಾಯದಿಂದ ತನ್ನ ಕಡೆಗೆ ಆಕರ್ಷಿಸಿಕೊಳ್ಳಬಹುದು.

೮. ಸಾಮೋಪಾಯದಿಂದ ರಾಕ್ಷಸರನ್ನೂ ಕೂಡ ವಶಪಡಿಸಿಕೊಳ್ಳಬಹುದೆಂದು ಕೆಲವರು ಹೇಳುವುದುಂಟು. ಆದರೂ ದುರ್ಜನರಲ್ಲಿ ಈ ಉಪಾಯವು ಅಷ್ಟೊಂದು ಪ್ರಯೋಜನಕಾರಿಯಾಗಲಾರದು.

೯. ಸಮಾಧಾನದ ಮಾತುಗಳನ್ನು ಮೃದುವಾಗಿ ಆಡತಕ್ಕವನನ್ನು ನೋಡಿ ದುರ್ಜನರು ಅಂಜುಬುರಕನೆಂದೂ ಹೇಡಿಯೆಂದೂ ತಿಳಿದುಕೊಳ್ಳುವರು. ಆದುದರಿಂದ ಅಂತಹವರಲ್ಲಿ ಸಾಮೋಪಾಯವನ್ನು ಪ್ರಯೋಗಿಸಬಾರದು.

**ಯೇ ಶುದ್ಧವಂಶಾ ಋಜವಃ ಪ್ರಣೀತಾ**
**ಧರ್ಮೇ ಸ್ಥಿತಾ ಸತ್ಯಪರಾ ವಿನೀತಾಃ ।**
**ತೇ ಸಾಮಸಾಧ್ಯಾಃ ಪುರುಷಾಃ ಪ್ರದಿಷ್ಟಾ**
**ಮಾನೋನ್ನತಾ ಯೇ ಸತತಂ ಚ ರಾಜನ್ ॥೧೦॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ರಾಜಧರ್ಮೇ ಸಾಮಬೋಧೋ ನಾಮ ದ್ವಾವಿಂಶತ್ಯಧಿಕದ್ವಿಶತತಮೋಽಧ್ಯಾಯಃ**

---

೧೦. ಓ ರಾಜಾ, ಸದ್ವಂಶಪ್ರಸೂತರೂ, ಸರಳಸ್ವಭಾವದವರೂ, ಧರ್ಮ ನಿರತರೂ, ಸತ್ಯಪರರೂ, ವಿನಯಶೀಲರೂ, ಅಭಿಮಾನಶಾಲಿಗಳೂ ಆದ ಸತ್ಪುರುಷರನ್ನು ಯಾವಾಗಲೂ ಸಾಮೋಪಾಯದಿಂದಲೇ ವಶಪಡಿಸಿಕೊಳ್ಳ ಬಹುದು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಉಪಾಯಗಳ ಪ್ರಭೇದವನ್ನು ತಿಳಿಸಿದೆ.

ಕಾರ್ಯಸಾಧನೆಗೆ ಸಾಮ, ದಾನ, ಭೇದ, ದಂಡ, ಉಪೇಕ್ಷೆ, ಮಾಯೆ, ಇಂದ್ರಜಾಲ ಎಂಬ ಏಳು ಬಗೆಯ ಉಪಾಯಗಳುಂಟು. ಸಾಮವೆಂದರೆ ಸಮಾಧಾನದ ವಚನ. ಸಜ್ಜನರನ್ನು ಇದರಿಂದ ವಶಪಡಿಸಿಕೊಳ್ಳಬಹುದು. ದುರ್ಜನರಲ್ಲಿ ಈ ಉಪಾಯವು ಕಾರ್ಯಕಾರಿಯಾಗಲಾರದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಸಾಮಬೋಧವೆಂಬ
ಇನ್ನೂರಿಪ್ಪತ್ತೆರಡನೆಯ ಅಧ್ಯಾಯವು ಮುಗಿದುದು

## ಅಥ ತ್ರಯೋವಿಂಶತ್ಯಧಿಕದ್ವಿಶತತಮೋಽಧ್ಯಾಯಃ

॥ ಮತ್ಸ್ಯ ಉವಾಚ ॥

ಪರಸ್ಪರಂ ತು ಯೇ ದುಷ್ಟಾಃ ಕ್ರುದ್ಧಾ ಭೀತಾವಮಾನಿತಾಃ ।
ತೇಷಾಂ ಭೇದಂ ಪ್ರಯುಂಜೀತ ಭೇದಸಾಧ್ಯಾ ಹಿ ತೇ ಮತಾಃ ॥ ೧ ॥

ಯೇ ತು ಯೇನೈವ ದೋಷೇಣ ಪರಸ್ಮಾನ್ನಾಪಿ ಬಿಭ್ಯತಿ ।
ತೇ ತು ತದ್ದೋಷಪಾತೇನ ಭೇದನೀಯಾ ಭೃಶಂ ತತಃ ॥ ೨ ॥

ಆತ್ಮೀಯಾಂ ದರ್ಶಯೇದಾಶಾಂ ಪರಸ್ಮಾದ್ದರ್ಶಯೇದ್ಭಯಂ ।
ಏವಂ ಹಿ ಭೇದಯೇದ್ಭಿನ್ನಾನ್ಯಥಾವದ್ವಶಮಾನಯೇತ್ ॥ ೩ ॥

ಸಂಹತಾ ಹಿ ವಿನಾ ಭೇದಂ ಶಕ್ರೇಣಾಪಿ ಸುದುಃಸಹಾಃ ।
ಭೇದಮೇವ ಪ್ರಶಂಸಂತಿ ತಸ್ಮಾನ್ನಯವಿಶಾರದಾಃ ॥ ೪ ॥

---

೧. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಶತ್ರುಗಳು ದುಷ್ಟರೂ, ಕೋಪಿಷ್ಠರೂ, ಭೀತರೂ, ಅವಮಾನಿತರೂ ಆಗಿದ್ದರೆ ಅವರಲ್ಲೇ ಒಬ್ಬೊಬ್ಬರಿಗೆ ಭೇದವನ್ನು ಹುಟ್ಟಿಸಬೇಕು. ಅವರು ಭೇದೋಪಾಯದಿಂದಲೇ ವಶವಾಗತಕ್ಕವರು.

೨. ಯಾರು ತಮ್ಮಲ್ಲಿರುವ ಯಾವ ದೋಷದ ಬಲದಿಂದ ಗರ್ವಗೊಂಡು ಇತರರಿಗೆ ಹೆದರುವುದಿಲ್ಲವೋ ಅಂತಹವರ ಮೇಲೆ ಅದೇ ದೋಷವಿರತಕ್ಕವರನ್ನು ಎತ್ತಿಗಟ್ಟಿ ಅವರ ಪಕ್ಷದಲ್ಲಿ ಭೇಧವನ್ನು ಹುಟ್ಟಿಸಬೇಕು.

೩. ತನ್ನ ಕಡೆಗೆ ಸೇರಿದರೆ ಸುಖವುಂಟೆಂಬ ಆಸೆಯನ್ನೂ ಶತ್ರುಪಕ್ಷದಲ್ಲಿದ್ದರೆ ಕೇಡಾಗುವುದೆಂಬ ಭಯವನ್ನೂ ಹುಟ್ಟಿಸಬೇಕು. ಹೀಗೆ ಭೇಧವನ್ನು ಉಂಟು ಮಾಡಿದ ಬಳಿಕ ಅವರನ್ನು ಉಚಿತವಾದ ರೀತಿಯಲ್ಲಿ ವಶಪಡಿಸಿಕೊಳ್ಳಬೇಕು.

೪. ಶತ್ರುಗಳು ಒಡಕಿಲ್ಲದೆ ಒಟ್ಟುಗೂಡಿದ್ದರೆ ಅವರನ್ನೆದುರಿಸುವುದು ಇಂದ್ರನಿಗೂ ಸಾಧ್ಯವಿಲ್ಲ. ಆದಕಾರಣ ರಾಜನೀತಿಯನ್ನು ಚೆನ್ನಾಗಿ ಬಲ್ಲವರು ಭೇದೋಪಾಯವನ್ನೇ ಶ್ಲಾಘಿಸುತ್ತಾರೆ.

ಸ್ವಮುಖೇನಾऽऽಶ್ರಯೋದ್ಭೇದಂ ಭೇದಂ ಪರಮುಖೇನ ಚ ।
ಪರೀಕ್ಷ್ಯ ಸಾಧು ಮನ್ಯೇತ ಭೇದಂ ಪರಮುಖಾಚ್ಛ್ರುತಂ ॥ ೫ ॥

ಸದ್ಯಃ ಸ್ವಕಾರ್ಯಮುದ್ದಿಶ್ಯ ಕುಶಲೈರ್ಯೇ ಹಿ ಭೇದಿತಾಃ ।
ಭೇದಿತಾಸ್ತೇ ವಿನಿರ್ದಿಷ್ಟಾ ನೈವ ರಾಜ್ಞಾऽರ್ಥವಾದಿಭಿಃ ॥ ೬ ॥

ಅಂತಃಕೋಪೋ ಬಹಿಃಕೋಪೋ ಯತ್ರ ಸ್ಯಾತಾಂ ಮಹೀಕ್ಷಿತಾಂ ।
ಅಂತಃಕೋಪೋ ಮಹಾಂಸ್ತತ್ರ ನಾಶಕಃ ಪೃಥಿವೀಕ್ಷಿತಾ ॥ ೭ ॥

ಸಾಮಂತಕೋಪೋ ಬಾಹ್ಯಸ್ತು ಕೋಪಃ ಪ್ರೋಕ್ತೋ ಮಹೀಭೃತಃ ।
ಮಹಿಷೀಯುವರಾಜಾಭ್ಯಾಂ ತಥಾ ಸೇನಾಪತೇರ್ನೃಪ ॥ ೮ ॥

ಅಮಾತ್ಯಮಂತ್ರಿಣಾಂ ಚೈವ ರಾಜಪುತ್ರೇ ತಥೈವ ಚ ।
ಅಂತಃಕೋಪೋ ವಿನಿರ್ದಿಷ್ಟೋ ದಾರುಣಃ ಪೃಥಿವೀಕ್ಷಿತಾಂ ॥ ೯ ॥

---

೫. ಭೇದೋಪಾಯವನ್ನು ತಾನೂ ಪ್ರಯೋಗಿಸಬೇಕು ; ಇತರರಿಂದಲೂ ಪ್ರಯೋಗಮಾಡಿಸಬೇಕು. ಆದರೆ ಇತರರ ಭೇದೋಪಾಯಗಳ ರೀತಿಯನ್ನೂ ತಾನು ಚೆನ್ನಾಗಿ ವಿಮರ್ಶೆಮಾಡಿ ತಿಳಿದುಕೊಳ್ಳಬೇಕು.

೬. ನೀತಿಕುಶಲರಾದ ಪರರಾಜರು ತಮ್ಮ ಕಾರ್ಯಸಾಧನೆಗೆಂದು ಪ್ರಯೋಗಿಸಿದ ಭೇದತಂತ್ರಕ್ಕೆ ಒಳಗಾದವರು ತಮ್ಮವರೇ ಆದರೂ ರಾಜನು ಅಂತಹವರನ್ನು ನಂಬಬಾರದೆಂದು ಅರ್ಥಶಾಸ್ತ್ರವನ್ನು ಬಲ್ಲವರು ಹೇಳುತ್ತಾರೆ.

೭. ರಾಜನ ಮೇಲೆ ಇತರರಿಗಿರುವ ಕೋಪವನ್ನು ಅಂತಃಕೋಪ ಮತ್ತು ಬಹಿಃಕೋಪ ಎಂದರೆ ಒಳಸಿಟ್ಟು, ಹೊರಸಿಟ್ಟು ಎಂದು ಎರಡು ಭಾಗಮಾಡಬಹುದು. ಇವುಗಳಲ್ಲಿ ಬಹಿಃಕೋಪಕ್ಕಿಂತ ಅಂತಃಕೋಪವು ಬಹು ಅಪಾಯಕರವಾದುದು.

೮-೯. ರಾಜನ ಮೇಲೆ ಅವನ ಸಾಮಂತರಿಗಿರುವ ಕೋಪವನ್ನು ಬಾಹ್ಯಕೋಪವೆನ್ನುತ್ತಾರೆ. ರಾಣಿ, ಯುವರಾಜ, ಸೇನಾಪತಿ, ಅಮಾತ್ಯ, ಮಂತ್ರಿ, ರಾಜಪುತ್ರ ಇವರ ಕೋಪಕ್ಕೆ ಅಂತಃಕೋಪವೆಂದು ಹೆಸರು. ಓ ರಾಜಾ, ಇದೇ ಅರಸರಿಗೆ ಬಹಳ ಅಪಾಯಕರವಾದುದು.

ಬಾಹ್ಯಕೋಪೇ ಸಮುತ್ಪನ್ನೇ ಸುಮಹತ್ಯಪಿ ಪಾರ್ಥಿವಃ ।
ಶುದ್ಧಾಂತಸ್ತು ಮಹಾಭಾಗ ಶೀಘ್ರಮೇವ ಜಯೀ ಭವೇತ್ ॥೧೦॥

ಅಪಿ ಶಕ್ರಸಮೋ ರಾಜಾ ಅಂತಃಕೋಪೇನ ನಶ್ಯತಿ ।
ಸೋಽಂತಕೋಪಃ ಪ್ರಯತ್ನೇನ ತಸ್ಮಾದ್ರಕ್ಷ್ಯೋ ಮಹೀಭೃತಾ ॥೧೧॥

ಪರತಃ ಕೋಪಮುತ್ಪಾದ್ಯ ಭೇದೇನ ವಿಜಿಗೀಷುಣಾ ।
ಜ್ಞಾತೀನಾಂ ಭೇದನಂ ಕಾರ್ಯಂ ಪರೇಷಾಂ ವಿಜಿಗೀಷುಣಾ ॥೧೨॥

ರಕ್ಷ್ಯಶ್ಚೈವ ಪ್ರಯತ್ನೇನ ಜ್ಞಾತಿಭೇದಸ್ತಥಾತ್ಮನಃ ।
ಜ್ಞಾತಯಃ ಪರಿತಪ್ಯಂತೇ ಸತತಂ ಪರಿತಾಪಿತಾಃ ॥೧೩॥

---

೧೦. ಮಹಾಕೀರ್ತಿವಂತನಾದ ಎಲೈ ಮನುಚಕ್ರವರ್ತೀ, ಬಾಹ್ಯಕೋಪವು ಎಷ್ಟು ಪ್ರಬಲವಾಗಿದ್ದರೂ, ಯಾವ ವಿಧವಾದ ಅಂತಃಕೋಪವೂ ಇಲ್ಲದಿದ್ದರೆ ರಾಜನು ಶೀಘ್ರವಾಗಿಯೇ ಜಯಶಾಲಿಯಾಗುವನು.

೧೧. ಇಂದ್ರನಂತಹ ಪ್ರಬಲನಾದ ರಾಜನಾದರೂ ಅಂತಃಕೋಪದಿಂದ ಹಾಳಾಗುವನು. ಆದುದರಿಂದ ಅರಸನು ರಾಜಪುತ್ರ, ರಾಣಿ ಮುಂತಾದವರಿಗೆ ತನ್ನ ಮೇಲೆ ಕೋಪಬಾರದಂತೆ ಎಚ್ಚರದಿಂದಿರಬೇಕು.

೧೨. ಜಯಶಾಲಿಯಾಗಬೇಕೆನ್ನುವ ರಾಜನು ಮೂರನೆಯ ಮನುಷ್ಯನ ಮೂಲಕ ಭೇದೋಪಾಯದಿಂದ ಶತ್ರುಗಳ ದಾಯಾದಿಗಳಲ್ಲಿ ಒಡಕು ಹುಟ್ಟಿಸಬೇಕು.

೧೩. ತನ್ನ ಜ್ಞಾತಿಗಳಲ್ಲಿ ಮಾತ್ರ ಒಗ್ಗಟ್ಟು ಕೆಡದಂತೆ ಎಚ್ಚರಿಕೆಯಿಂದಿರಬೇಕು. ಅವರನ್ನು ಸಂತಾಪಗೊಳಿಸಿದರೆ ಅವರು ಎಡೆಬಿಡದೆ ಕ್ಲೇಶವನ್ನುಂಟು ಮಾಡುವರು.

ತಥಾಪಿ ತೇಷಾಂ ಕರ್ತವ್ಯಂ ಸುಗಂಭೀರೇಣ ಚೇತಸಾ ।
ಗ್ರಹಣಂ ದಾನಮಾನಾಭ್ಯಾಂ ಭೇದಸ್ತೇಭ್ಯೋ ಭಯಂಕರಃ ॥೧೪॥

ನ ಜ್ಞಾತಿಮನುಗ್ರಹ್ಣಂತಿ ನ ಜ್ಞಾತಿಂ ವಿಶ್ವಸಂತಿ ಚ ।
ಜ್ಞಾತಿಭಿರ್ಭೇದನೀಯಾಸ್ತು ರಿಪವಸ್ತೇನ ಪಾರ್ಥಿವೈಃ ॥೧೫॥

ಭಿನ್ನಾ ಹಿ ಶಕ್ಯಾ ರಿಪವಃ ಪ್ರಭೂತಾಃ
ಸ್ವಲ್ಪೇನ ಸೈನ್ಯೇನ ನಿಹಂತುಮಾಜೌ ।
ಸುಸಂಹತಾನಾಂ ಹಿ ತದಸ್ತು ಭೇದಃ
ಕಾರ್ಯೋ ರಿಪೂಣಾಂ ನಯಶಾಸ್ತ್ರವಿದ್ಭಿಃ ॥೧೬॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಭೇದಪ್ರಶಂಸಾ ನಾಮ
ತ್ರಯೋವಿಂಶತ್ಯಧಿಕದ್ವಿಶತತಮೋಽಧ್ಯಾಯಃ

---

೧೪. ಆದರೂ ಉದಾರಹೃದಯದಿಂದ ಅವರಿಗೆ ಬೇಕಾದ ಸುಖಸಾಧನ ವಸ್ತುಗಳನ್ನು ಒದಗಿಸಿಕೊಟ್ಟು ಅವರನ್ನು ಗೌರವದಿಂದ ಕಾಣುತ್ತ ವಶಪಡಿಸಿ ಕೊಂಡಿರಬೇಕು. ಅವರಲ್ಲಿ ಭೇದಹುಟ್ಟಿದರೆ ಪರಿಣಾಮವು ಭಯಂಕರವಾಗಿರುವುದು.

೧೫. ಜನರು ಜ್ಞಾತಿಯಲ್ಲಿ ಅನುಗ್ರಹವನ್ನು ತೋರುವುದೂ ಇಲ್ಲ; ಅವನನ್ನು ನಂಬುವುದೂ ಇಲ್ಲ. ಆದಕಾರಣ ರಾಜರು ತಮ್ಮ ಶತ್ರುಗಳಿಗೂ ಅವರ ಜ್ಞಾತಿಗಳಿಗೂ ಭೇದವನ್ನು ಹುಟ್ಟಿಸಬೇಕು.

೧೬. ಶತ್ರುಗಳು ಬಹಳ ಮಂದಿಯಿದ್ದರೂ ಐಕಮತ್ಯವಿಲ್ಲದೆ ಬೇರೆಬೇರೆ ಯಾಗಿದ್ದರೆ ಸ್ವಲ್ಪ ಸೈನ್ಯದಿಂದಲೇ ಅವರನ್ನು ಯುದ್ಧದಲ್ಲಿ ಸಂಹರಿಸಬಹುದು. ಆದುದರಿಂದ ಒಟ್ಟುಗೂಡಿರುವ ಶತ್ರುಗಳನ್ನು ಭೇದೋಪಾಯದಿಂದ ಬೇರ್ಪಡಿಸ ಬೇಕಾದುದು ರಾಜನೀತಿಯನ್ನು ಅರಿತವರ ಕರ್ತವ್ಯ.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಭೇದೋಪಾಯದ ಪ್ರಶಂಸೆಯನ್ನು ಮಾಡಿದೆ.

ಶತ್ರುಗಳು ಒಟ್ಟಾಗಿದ್ದರೆ ಅವರನ್ನು ಜಯಿಸುವುದು ಬಹುಕಷ್ಟ. ಆದುದರಿಂದ ಭೇದೋಪಾಯದ ಮೂಲಕ ಅವರನ್ನು ಬೇರ್ಪಡಿಸಬೇಕು. ರಾಜನ ಮೇಲೆ ಅವನ ಸಾಮಂತರಾಜರಿಗಿರುವ ಕೋಪವನ್ನು ಬಹಿಃಕೋಪವೆಂದೂ, ಪತ್ನೀ ಪುತ್ರಾದಿಗಳಿಗಿರುವ ಕೋಪವನ್ನು ಅಂತಃಕೋಪವೆಂದೂ ಹೇಳುತ್ತಾರೆ. ಬಾಹ್ಯ ಕೋಪಕ್ಕಿಂತ ಅಂತಃಕೋಪವು ಬಹು ಅಪಾಯಕರವಾದುದು. ಆದಕಾರಣ ರಾಜನು ತನ್ನ ಪರಿವಾರವರ್ಗಕ್ಕೆ ಅಸಮಾಧಾನವಾಗದಂತೆ ನೋಡಿಕೊಳ್ಳುತ್ತ ಶತ್ರುಗಳನ್ನು ಭೇದೋಪಾಯದಿಂದ ಸುಲಭವಾಗಿ ಜಯಿಸಲು ಯತ್ನಿಸಬೇಕು.

ಶ್ರೀಮತ್ಸ್ಯಮಹಾಪುರಾಣದಲ್ಲಿ ರಾಜಧರ್ಮದೊಳಗೆ ಭೇದಪ್ರಶಂಸೆಯೆಂಬ
ಇನ್ನೂರ ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು

---

## ಅಥ ಚತುರ್ವಿಂಶತ್ಯಧಿಕದ್ವಿಶತತಮೋಽಧ್ಯಾಯಃ

|| ಮತ್ಸ್ಯ ಉವಾಚ ||

ಸರ್ವೇಷಾಮುಪ್ಯುಪಾಯಾನಾಂ ದಾನಂ ಶ್ರೇಷ್ಠತಮಂ ಮತಂ ।
ಸುದತ್ತೇನೇಹ ಭವತಿ ದಾನೇನೋಭಯಲೋಕಜಿತ್ || ೧ ||

ನ ಸೋಽಸ್ತಿ ರಾಜನ್ ದಾನೇನ ವಶಗೋ ಯೋ ನ ಜಾಯತೇ ।
ದಾನೇನ ವಶಗಾ ದೇವಾ ಭವಂತೀಹ ಸದಾ ನೃಣಾಂ || ೨ ||

ದಾನಮೇವೋಪಜೀವಂತಿ ಪ್ರಜಾಃ ಸರ್ವಾ ನೃಪೋತ್ತಮ ।
ಪ್ರಿಯೋ ಹಿ ದಾನವಾಂಲ್ಲೋಕೇ ಸರ್ವಸ್ಯೈವೋಪಜಾಯತೇ || ೩ ||

ದಾನವಾನಚಿರೇಣೈವ ತಥಾ ರಾಜಾ ಪರಾಞ್ಜಯೇತ್ ।
ದಾನವಾನೇವ ಶಕ್ನೋತಿ ಸಂಹತಾನ್ ಭೇದಿತುಂ ಪರಾನ್ || ೪ ||

---

೧. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಉಪಾಯಗಳಲ್ಲೆಲ್ಲ ದಾನವೇ ಅತ್ಯಂತ ಶ್ರೇಷ್ಠವಾದುದು. ಉಚಿತವಾದ ರೀತಿಯಲ್ಲಿ ಮಾಡಿದ ದಾನದಿಂದ ಇಹಪರಗಳೆರಡರಲ್ಲೂ ಸುಖವುಂಟು.

೨. ಓ ರಾಜಾ, ದಾನಕ್ಕೆ ವಶನಾಗದಿರುವ ಮನುಷ್ಯನು ಯಾವನೂ ಇಲ್ಲ. ದೇವತೆಗಳು ಕೂಡ ಮನುಜರಿಗೆ ವಶವಾಗುವುದು ದಾನದಿಂದಲೇ.

೩. ಎಲೈ ಚಕ್ರವರ್ತೀ, ಪ್ರಜೆಗಳೆಲ್ಲರೂ ದಾನದಿಂದಲೇ ಜೀವಿಸುವರು. ಲೋಕದಲ್ಲಿ ದಾನಮಾಡತಕ್ಕವನು ಎಲ್ಲರಿಗೂ ಪ್ರೀತಿಪಾತ್ರನೆನಿಸುವನು.

೪. ದಾನಶೀಲನಾದ ರಾಜನು ಬೇಗನೆ ಶತ್ರುಗಳನ್ನು ಜಯಿಸುವನು. ಒಟ್ಟುಗೂಡಿರುವ ಹಗೆಗಳನ್ನು ಒಡೆಯಬೇಕಾದರೆ ಬೇಕಾದುದನ್ನು ದಾನಮಾಡ ಬಲ್ಲ ರಾಜನಿಂದಲೇ ಸಾಧ್ಯ.

ಯದ್ಯಪ್ಯಲುಬ್ಧಗಂಭೀರಾಃ ಪುರುಷಾಃ ಸಾಗರೋಪಮಾಃ ।
ನ ಗೃಹ್ಣಂತಿ ತಥಾಪ್ಯೇತೇ ಜಾಯಂತೇ ಪಕ್ಷಪಾತಿನಃ ॥ ೫ ॥

ಅನ್ಯತ್ರಾಪಿ ಕೃತಂ ದಾನಂ ಕರೋತ್ಯನ್ಯಾರ್ನ್ ಯಥಾ ವಶೇ ।
ಉಪಾಯೇಭ್ಯಃ ಪ್ರಶಂಸಂತಿ ದಾನಂ ಶ್ರೇಷ್ಠತಮಂ ಜನಾಃ ॥ ೬ ॥

ದಾನಂ ಶ್ರೇಯಸ್ಕರಂ ಪುಂಸಾಂ ದಾನಂ ಶ್ರೇಷ್ಠತಮಂ ಪರಂ ।
ದಾನವಾನೇವ ಲೋಕೇಷು ಪುತ್ರತ್ವೇ ಧ್ರಿಯತೇ ಸದಾ ॥ ೭ ॥

ನ ಕೇವಲಂ ದಾನಪರಾ ಜಯಂತಿ
ಭೂರ್ಲೋಕಮೇಕಂ ಪುರುಷಪ್ರವೀರಾಃ ।
ಜಯಂತಿ ತೇ ರಾಜ ಸುರೇಂದ್ರಲೋಕಂ
ಸುದುರ್ಜಯಂ ಯೋ ವಿಬುಧಾಧಿವಾಸಃ ॥ ೮ ॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ರಾಜಧರ್ಮೇ ದಾನಪ್ರಶಂಸಾ ನಾಮ ಚತುರ್ವಿಂಶತ್ಯಧಿಕದ್ವಿಶತತಮೋಽಧ್ಯಾಯಃ

---

೫. ಉದಾರಿಗಳೂ, ಗಂಭೀರಸ್ವಭಾವದವರೂ, ಸಾಗರಸದೃಶರೂ ಆದ ಮಹಾಪುರುಷರು ಏನನ್ನೂ ತೆಗೆದುಕೊಳ್ಳದಿರಬಹುದು. ಆದರೂ ಉದಾರಿಯಾದ ಭೂಪತಿಯ ವಿಷಯದಲ್ಲಿ ಅವರು ಪಕ್ಷಪಾತವನ್ನೇ ತೋರುವರು.

೬. ಒಬ್ಬನಿಗೆ ಮಾಡಿದ ದಾನವು ಉಳಿದವರನ್ನು ಕೂಡ ಸ್ವಾಧೀನಪಡಿಸಿ ಕೊಳ್ಳುತ್ತದೆ. ಆದುದರಿಂದ ಮಿಕ್ಕ ಉಪಾಯಗಳಿಗಿಂತ ದಾನವನ್ನೇ ಅತ್ಯಂತ ಶ್ರೇಷ್ಠ ವಾದುದೆಂದು ಜನರು ಹೇಳುತ್ತಾರೆ.

೭. ಮನುಷ್ಯನಿಗೆ ದಾನವು ಶ್ರೇಯಸ್ಸನ್ನು ಕೊಡುವುದು. ಉಪಾಯ ಗಳಲ್ಲೆಲ್ಲ ಅದೇ ಶ್ರೇಷ್ಠವಾದುದೆಂದು ಪರಿಗಣಿತವಾಗಿದೆ. ದಾನವಂತನಲ್ಲಿ ಜನರಿಗೆ ತಮ್ಮ ಮಕ್ಕಳ ಮೇಲೆ ಇರುವಷ್ಟು ಪ್ರೀತಿಯಿರುವುದು.

೮. ದಾನತತ್ಪರರಾದ ಪುರುಷಶ್ರೇಷ್ಠರು ಈ ಭೂಲೋಕವೊಂದನ್ನು ಮಾತ್ರವೇ ಜಯಸುವುದಿಲ್ಲ. ಓ ರಾಜಾ, ದೇವತೆಗಳ ವಾಸಸ್ಥಾನವೂ ಅತಿ ದುರ್ಲಭವೂ ಆದ ದೇವೇಂದ್ರನ ಸ್ವರ್ಗಲೋಕವೂ ಕೂಡ ಅವರಿಗೆ ವಶವಾಗುತ್ತದೆ.

## ಅಧ್ಯಾಯ ೨೨೪

### ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ದಾನದ ಮಹಿಮೆ ವರ್ಣಿತವಾಗಿದೆ.

ಉಪಾಯಗಳಲ್ಲೆಲ್ಲ ದಾನವೇ ಮೇಲಾದುದು. ಇದಕ್ಕೆ ವಶನಾಗದವನೇ ಇಲ್ಲ. ದಾನಶೀಲನು ಇಹಪರಗಳೆರಡರಲ್ಲೂ ಸುಖವನ್ನು ಪಡೆಯುವನು. ಸಮಯೋಚಿತ ವಾಗಿ ಈ ಉಪಾಯವನ್ನು ಪ್ರಯೋಗಿಸಿದರೆ ರಾಜನು ತನ್ನ ಶತ್ರುಗಳನ್ನು ಸುಲಭ ವಾಗಿ ಗೆಲ್ಲಬಲ್ಲನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ರಾಜಧರ್ಮದೊಳಗೆ ದಾನಪ್ರಶಂಸೆಯೆಂಬ
ಇನ್ನೂರ ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು

---

## ಅಥ ಪಂಚವಿಂಶತ್ಯಧಿಕದ್ವಿಶತತಮೋಽಧ್ಯಾಯಃ

॥ ಮತ್ಸ್ಯ ಉವಾಚ ॥

ನ ಶಕ್ಯಾ ಯೇ ವಶೇ ಕರ್ತುಮುಪಾಯತ್ರಿತಯೇನ ಚ ।
ದಂಡೇನ ತಾನ್ ವಶೀಕುರ್ಯಾದ್ದಂಡೋ ಹಿ ವಶಕೃನ್ನೃಣಾಂ ॥ ೧ ॥

ಸಮ್ಯಕ್ಪ್ರಣಯನಂ ತಸ್ಯ ತಥಾ ಕಾರ್ಯಂ ಮಹೀಕ್ಷಿತಾ ।
ಧರ್ಮಶಾಸ್ತ್ರಾನುಸಾರೇಣ ಸುಸಹಾಯೇನ ಧೀಮತಾ ॥ ೨ ॥

ತಸ್ಯ ಸಮ್ಯಕ್ಪ್ರಣಯನಂ ಯಥಾ ಕಾರ್ಯಂ ಮಹೀಕ್ಷಿತಾ ।
ವಾನಪ್ರಸ್ಥಾಂಶ್ಚ ಧರ್ಮಜ್ಞಾನ್ ನಿರ್ಮಮಾನ್ನಿಷ್ಪರಿಗ್ರಹಾನ್ ॥ ೩ ॥

ಸ್ವದೇಶೇ ಪರದೇಶೇ ವಾ ಧರ್ಮಶಾಸ್ತ್ರವಿಶಾರದಾನ್ ।
ಸಮೀಕ್ಷ್ಯ ಪ್ರಣಯೇದ್ದಡಂ ಸರ್ವಂ ದಂಡೇ ಪ್ರತಿಷ್ಠಿತಂ ॥ ೪ ॥

---

೧. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಮೇಲೆ ಹೇಳಿದ ಮೂರು ಉಪಾಯಗಳಿಗೂ ವಶರಾಗದವರನ್ನು ದಂಡೋಪಾಯದಿಂದ ಸ್ವಾಧೀನ ಪಡಿಸಿಕೊಳ್ಳಬೇಕು. ಏಕೆಂದರೆ ಮನುಷ್ಯರನ್ನು ವಶಪಡಿಸಿಕೊಳ್ಳುವುದಕ್ಕೆ ಈ ಉಪಾಯಕ್ಕೆ ಬಹಳ ಸಾಮರ್ಥ್ಯವುಂಟು.

೨. ಪೂರ್ಣವಾದ ಸಹಾಯಸಂಪತ್ತಿನಿಂದ ಕೂಡಿದ ಪ್ರಾಜ್ಞನಾದ ರಾಜನು ಧರ್ಮಶಾಸ್ತ್ರಾನುಸಾರವಾಗಿ ಔಚಿತ್ಯವನ್ನರಿತು ದಂಡವನ್ನು ಪ್ರಯೋಗಿಸಬೇಕು.

೩-೪. ಭೂಪಾಲಕನು ಸರಿಯಾಗಿ ವಿಮರ್ಶಿಸಿ ದಂಡವನ್ನು ಪ್ರಯೋಗಿಸ ಬೇಕು. ಧರ್ಮಜ್ಞರೂ, ಮಮಕಾರವಿಲ್ಲದವರೂ, ದಾನಕ್ಕೆ ಕೈಯೊಡ್ಡದವರೂ, ವಾನಪ್ರಸ್ಥರೂ, ಧರ್ಮಶಾಸ್ತ್ರ ವಿಶಾರದರೂ ಆದ ಮಹನೀಯರು ಸ್ವದೇಶದಲ್ಲಿರಲಿ ಪರದೇಶದಲ್ಲಿರಲಿ ಅವರನ್ನು ಕರೆಯಿಸಿ, ಅವರ ಅಭಿಪ್ರಾಯಾನುಸಾರವಾಗಿ ಅಪಧಿರಾಗಳಿಗೆ ಶಿಕ್ಷೆಯನ್ನು ವಿಧಿಸಬೇಕು. ಲೋಕದಲ್ಲಿ ಎಲ್ಲವೂ ದಂಡೋಪಾಯ ವನ್ನು ಅವಲಂಬಿಸಿದೆ.

ಆಶ್ರಮೀ ಯದಿ ವಾ ವರ್ಣೀ ಪೂಜ್ಯೋವಾಥ ಗುರುರ್ಮಹಾನ್ ।
ನಾದಂಡ್ಯೋ ನಾಮ ರಾಜ್ಞೋಽಸ್ತಿ ಯಃ ಸ್ವಧರ್ಮೇಣ ತಿಷ್ಠತಿ ॥ ೫ ॥

ಅದಂಡ್ಯಾನ್ ದಂಡಯನ್ರಾಜಾ ದಂಡ್ಯಾಂಶ್ಚೈವಾಪ್ಯದಂಡಯನ್ ।
ಇಹ ರಾಜ್ಯಾತ್ಪರಿಭ್ರಷ್ಟೋ ನರಕಂ ಚ ಪ್ರಪದ್ಯತೇ ॥ ೬ ॥

ತಸ್ಮಾದ್ರಾಜ್ಞಾ ವಿನೀತೇನ ಧರ್ಮಶಾಸ್ತ್ರಾನುಸಾರತಃ ।
ದಂಡಪ್ರಣಯನಂ ಕಾರ್ಯಂ ಲೋಕಾನುಗ್ರಹಕಾಮ್ಯಯಾ ॥ ೭ ॥

ಯತ್ರ ಶ್ಯಾಮೋ ಲೋಹಿತಾಕ್ಷೋ ದಂಡಶ್ಚರತಿ ಪಾಪಹಾ ।
ಪ್ರಜಾಸ್ತತ್ರ ನ ಮುಹ್ಯಂತಿ ನೇತಾ ಚೇತ್ಸಾಧು ಪಶ್ಯತಿ ॥ ೮ ॥

---

೫. ಬ್ರಹ್ಮಚರ್ಯಾದ್ಯಾಶ್ರಮದಲ್ಲಿ ಇರತಕ್ಕವನಾಗಲಿ, ಸಂನ್ಯಾಸಿಯಾಗಲಿ, ಶ್ರೇಷ್ಠನಾದ ಗುರುವಾಗಲಿ ಸ್ವಧರ್ಮನಿಷ್ಠನಾದ ರಾಜನ ದಂಡಕ್ಕೆ ಎಲ್ಲರೂ ಒಳಗಾಗಲೇಬೇಕು.

೬. ನಿರಪರಾಧಿಗಳನ್ನು ದಂಡಿಸುತ್ತಲೂ ಅಪರಾಧಿಗಳನ್ನು ದಂಡಿಸದೆಯೂ ಇರುವ ರಾಜನು ರಾಜ್ಯವನ್ನು ಕಳೆದುಕೊಳ್ಳುವನು. ಅಷ್ಟೇ ಅಲ್ಲ; ಮುಂದೆ ನರಕದಲ್ಲಿಯೂ ಬೀಳುವನು.

೭. ಆದುದರಿಂದ ಭೂಪತಿಯು ವಿನೀತನಾಗಿ ಧರ್ಮಶಾಸ್ತ್ರಾನುಸಾರವಾಗಿ ಲೋಕದ ಕ್ಷೇಮವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ದಂಡಪ್ರಯೋಗವನ್ನು ಮಾಡಬೇಕು.

೮. ಕರಿಯ ಮೈಯೂ ಕೆಂಪುಕಣ್ಣೂ ಆಗಿ ಪಾಪಪರಿಹಾರಕನೆಂದು ಪ್ರಸಿದ್ಧನಾಗಿರುವ ದಂಡಾಭಿಮಾನದೇವತೆಯು ನಿರುಪದ್ರವವಾಗಿ ಸಂಚರಿಸುವ ದೇಶದಲ್ಲಿ ಪ್ರಜೆಗಳು ದಾರಿತಪ್ಪಿ ನಡೆಯುವುದಿಲ್ಲ. ಆದರೆ ನಾಯಕನಾದ ರಾಜನು ಮಾತ್ರ ಎಚ್ಚರಿಕೆಯಿಂದ ನೋಡಿಕೊಳ್ಳಬೇಕು.

ಬಾಲವೃದ್ಧಾತುರಯತಿದ್ವಿಜಸ್ತ್ರೀವಿಧವಾ ಯತಃ ।
ಮಾತ್ಸ್ಯನ್ಯಾಯೇನ ಭಕ್ಷ್ಯೇರರ್ ಯದಿ ದಂಡಂ ನ ಪಾತಯೇತ್ ॥ ೯ ॥

ದೇವದೈತ್ಯೋರಗಗಣಾಃ ಸರ್ವೇ ಭೂತಪತತ್ರಿಣಃ ।
ಉತ್ಕ್ರಾಮಯೇಯುರ್ಮರ್ಯಾದಾಂ ಯದಿ ದಂಡಂ ನ ಪಾತಯೇತ್ ॥೧೦॥

ಏಷ ಬ್ರಹ್ಮಾಭಿಶಾಪೇಷು ಸರ್ವಪ್ರಹರಣೇಷು ಚ ।
ಸರ್ವವಿಕ್ರಮಕೋಪೇಷು ವ್ಯವಸಾಯೇ ಚ ತಿಷ್ಠತಿ ॥೧೧॥

ಪೂಜ್ಯಂತೇ ದಂಡಿನೋ ದೇವೈರ್ನ ಪೂಜ್ಯಂತೇ ತ್ವದಂಡಿನಃ ।
ನ ಬ್ರಹ್ಮಾಣಂ ವಿಧಾತಾರಂ ನ ಪೂಷಾರ್ಯಮಣಾವಪಿ ॥೧೨॥

---

೯. ಜಲಾಶಯಗಳಲ್ಲಿ ಸಣ್ಣ ಮೀನನ್ನು ದೊಡ್ಡ ಮೀನು ನುಂಗುತ್ತದೆ. ಅದಕ್ಕಿಂತ ಪ್ರಬಲವಾದುದು ಅದನ್ನು ಕೊಂದು ತಿನ್ನುತ್ತದೆ. ಇದನ್ನು ಮಾತ್ಸ್ಯ ನ್ಯಾಯವೆನ್ನುತ್ತಾರೆ. ರಾಜನು ದೇಶದಲ್ಲಿ ದಂಡವನ್ನು ಪ್ರಯೋಗಿಸದಿದ್ದರೆ ಹುಡುಗರು, ಮುದುಕರು, ರೋಗಿಗಳು, ಯತಿಗಳು, ಬ್ರಾಹ್ಮಣರು, ಹೆಂಗಸರು, ವಿಧವೆಯರು ಅಷ್ಟೇ ಏಕೆ ದುರ್ಬಲರಾದವರೆಲ್ಲರೂ ಮೇಲೆ ಹೇಳಿದ ಮಾತ್ಸ್ಯ ನ್ಯಾಯದಿಂದ ದುರ್ಜನರ ಕೋಟಲೆಗೆ ತುತ್ತಾಗುತ್ತಿದ್ದರು.

೧೦. ದಂಡಪ್ರಯೋಗವಿಲ್ಲದಿದ್ದರೆ ದೇವತೆಗಳು, ದೈತ್ಯರು, ಸರ್ಪಗಳು, ಭೂತಗಳು, ಪಕ್ಷಿಗಳು ಇವೆಲ್ಲವೂ ತಮ್ಮ ತಮ್ಮ ಎಲ್ಲೆಯನ್ನು ಮೀರುತ್ತಿದ್ದುವು.

೧೧. ಈ ದಂಡದೇವತೆಯು ಬ್ರಾಹ್ಮಣರ ಶಾಪಗಳಲ್ಲಿಯೂ ಬಗೆಬಗೆಯ ಆಯುಧಗಳಲ್ಲಿಯೂ, ಎಲ್ಲರ ಕೋಪಪೌರುಷಗಳಲ್ಲಿಯೂ, ದೃಢಪ್ರಯತ್ನದಲ್ಲಿಯೂ ನೆಲಸಿರುವಳು. ನ್ಯಾಯಕ್ಕೆ ತಕ್ಕಂತೆ ದಂಡವನ್ನು ಯಾರು ವಿಧಿಸುವರೋ ಅವರನ್ನು ದೇವತೆಗಳು ಕೂಡ ಗೌರವಿಸುತ್ತಾರೆ. ಅಲ್ಲದವರನ್ನು ಅವರು ಎಂದಿಗೂ ಪುರಸ್ಕರಿಸರು.

೧೨-೧೩. ಶಾಂತಾತ್ಮರಾದ ಎಷ್ಟೋ ಜನ ಸಾತ್ವಿಕರು ಸೃಷ್ಟಿಕರ್ತನಾದ ಬ್ರಹ್ಮ, ಪ್ರಕಾಶವನ್ನು ಕರುಣಿಸುವ ಪೂಷ, ಅರ್ಯಮ ಮುಂತಾದವರನ್ನು ಉಪಾಸನ

ಯಜಂತೇ ಮಾನವಾಃ ಕೇಚಿತ್ಪ್ರಶಾಂತಾಃ ಸರ್ವಕರ್ಮಸು ।
ರುದ್ರಮಗ್ನಿಂ ಚ ಶಕ್ರಂ ಚ ಸೂರ್ಯಾಚಂದ್ರಮಸೌ ತಥಾ ॥೧೩॥

ವಿಷ್ಣುಂ ದೇವಗಣಾಂಶ್ಚಾನ್ಯಾನ್ ದಂಡಿನಃ ಪೂಜಯಂತಿ ಚ ।
ದಂಡಃ ಶಾಸ್ತಿ ಪ್ರಜಾಃ ಸರ್ವಾ ದಂಡ ಏವಾಭಿರಕ್ಷತಿ ॥೧೪॥

ದಂಡಃ ಸುಪ್ತೇಷು ಜಾಗರ್ತಿ ದಂಡಂ ಧರ್ಮಂ ವಿದುರ್ಬುಧಾಃ ।
ರಾಜದಂಡಭಯಾದೇವ ಪಾಪಾಃ ಪಾಪಂ ನ ಕುರ್ವತೇ । ॥೧೫॥

ಯಮದಂಡಭಯಾದೇಕೇ ಪರಸ್ಪರಭಯಾದಪಿ ।
ಏವಂ ಸಾಂಸಿದ್ಧಿಕೇ ಲೋಕೇ ಸರ್ವಂ ದಂಡೇ ಪ್ರತಿಷ್ಠಿತಂ ॥೧೬॥

---

ಮಾಡುವುದಿಲ್ಲ ಆದರೆ ದಂಡಧಾರಿಗಳಾದ ರುದ್ರ, ಅಗ್ನಿ, ಇಂದ್ರ, ಸೂರ್ಯ, ಚಂದ್ರ, ವಿಷ್ಣು ಮತ್ತು ಇನ್ನೂ ಉಳಿದ ದೇವತೆಗಳನ್ನು ಸಕಲ ಕರ್ಮಗಳಲ್ಲಿಯೂ ಪೂಜಿಸುತ್ತಾರೆ.

೧೪. ಪ್ರಜೆಗಳೆಲ್ಲರನ್ನೂ ದಂಡವೇ ಆಳುತ್ತದೆ; ದಂಡವೇ ರಕ್ಷಿಸುತ್ತದೆ. ಎಲ್ಲರೂ ಮಲಗಿರುವಾಗ ದಂಡವೇ ಎಚ್ಚರವಾಗಿರುತ್ತದೆ. ವಿದ್ವಾಂಸರು ದಂಡವನ್ನೇ ಧರ್ಮವೆಂದು ತಿಳಿಯುತ್ತಾರೆ.

೧೫-೧೬. ಪಾಪಸ್ವಭಾವದವರಾದರೂ ಕೆಲವರು ರಾಜದಂಡದ ಭಯದಿಂದಲೂ, ಮತ್ತೆ ಕೆಲವರು ಯಮದಂಡದ ಭೀತಿಯಿಂದಲೂ, ಇನ್ನೂ ಹಲವರು ತಮ್ಮ ತಮ್ಮಲ್ಲಿಯೇ ಉಂಟಾದ ಹೆದರಿಕೆಯಿಂದಲೂ ಅಕಾರ್ಯವನ್ನು ಮಾಡಲು ಹಿಂಜರಿಯುತ್ತಾರೆ. ಹೀಗೆ ಲೋಕದ ವ್ಯವಹಾರವೆಲ್ಲ ದಂಡದ ಪ್ರಭಾವದಿಂದ ನಡೆಯುತ್ತಲಿದೆ.

ಅಂಧೇ ತಮಸಿ ಮಜ್ಜೇಯುರ್ಯದಿ ದಂಡಂ ನ ಪಾತಯೇತ್ ।
ಯಸ್ಮಾದ್ದಂಡೋ ದಮಯತಿ ದುರ್ಮದಾನ್ ದಂಡಯತ್ಯಪಿ ।
ದಮನಾದ್ದಂಡನಾಚ್ಚೈವ ತಸ್ಮಾದ್ದಂಡಂ ವಿದುರ್ಬುಧಾಃ ॥೧೭॥

ದಂಡಸ್ಯ ಭೀತೈಸ್ತ್ರಿದಶೈಃ ಸಮೇತೈ
ರ್ಭಾಗೋ ಧೃತಃ ಶೂಲಧರಸ್ಯ ಯಜ್ಞೇ ।
ಚಕ್ರುಃ ಕುಮಾರೇ ಧ್ವಜಿನೀಪತಿಂ ಚ
ವರಂ ಶಿಶೂನಾಂ ಚ ಭಯಾದ್ಬಲಸ್ಥಂ ॥೧೮॥

ಇತಿ ಶ್ರೀ ಮಾತ್ಸ್ಯೇ ಮಹಾಪುರಾಣೇ ರಾಜಧರ್ಮೇ ದಂಡಪ್ರಶಂಸಾ ನಾಮ ಪಂಚವಿಂಶತ್ಯಧಿಕದ್ವಿಶತತಮೋಽಧ್ಯಾಯಃ

---

೧೭. ಅಪರಾಧಿಗಳಿಗೆ ಶಿಕ್ಷೆಯನ್ನು ವಿಧಿಸದಿದ್ದರೆ ರಾಜರು ಅಂಧ ತಮಸ್ಸೆಂಬ ಘೋರವಾದ ನರಕದಲ್ಲಿ ಬೀಳುತ್ತಾರೆ. ದಂಡವು ಸೊಕ್ಕಿದವರನ್ನು ಅಡಗಿಸುತ್ತದೆ. ಮತ್ತು ಅವರ ತಪ್ಪಿಗೆ ತಕ್ಕ ಶಾಸ್ತಿಯನ್ನು ಮಾಡುತ್ತದೆ. ಹೀಗೆ ಅಡಗಿಸುವುದರಿಂದಲೂ ಶಿಕ್ಷಿಸುವುದರಿಂದಲೂ ದಂಡವೆಂಬ ಹೆಸರು ಅನ್ವರ್ಥವಾಗಿದೆಯೆಂದು ಪ್ರಾಜ್ಞರು ತಿಳಿಯುತ್ತಾರೆ.

೧೮. ಶೂಲಧಾರಿಯಾದ ಮಹಾದೇವನು ದಂಡಿಸಿಯಾನೆಂದು ಹೆದರಿಕೊಂಡು ದೇವತೆಗಳು ಒಟ್ಟುಗೂಡಿ ಆತನಿಗೆ ಯಜ್ಞದಲ್ಲಿ ಭಾಗವನ್ನು ಕೊಟ್ಟರು. ತಾರಕಾಸುರನಿಂದ ಭೀತರಾಗಿ ಮುದ್ದಿನ ಮಗುವಾದ ಕುಮಾರಸ್ವಾಮಿಗೆ ದೇವಸೇನೆಯ ಪಟ್ಟಾಭಿಷೇಕವನ್ನು ಮಾಡಿದರು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ದಂಡೋಪಾಯವನ್ನು ಹೊಗಳಿದೆ.

ಸಾಮದಾನಭೇದಗಳೆಂಬ ಮೂರು ಉಪಾಯಗಳಿಗೂ ಬಗ್ಗದವರನ್ನು ದಂಡೋಪಾಯದಿಂದ ವಶಪಡಿಸಿಕೊಳ್ಳಬೇಕು. ರಾಜನು ಧರ್ಮಶಾಸ್ತ್ರಜ್ಞರಾದ ವಿದ್ವಾಂಸರೊಡನೆ ಆಲೋಚಿಸಿ ಔಚಿತ್ಯವನ್ನರಿತು ಅಪರಾಧಿಗಳಿಗೆ ಶಿಕ್ಷೆಯನ್ನು ವಿಧಿಸಬೇಕು. ಶಿಕ್ಷೆಯ ಭೀತಿಯಿಲ್ಲದಿದ್ದರೆ ಲೋಕದಲ್ಲಿ ಎಷ್ಟೋ ಅನರ್ಥಗಳು ನಡೆದುಹೋಗುತ್ತಿದ್ದುವು. ಜನರು ತಮ್ಮತಮ್ಮ ಎಲ್ಲೆಯನ್ನು ದಾಟಿಹೋಗದಿರುವುದು ದಂಡದ ಭಯದಿಂದ. ದೇವತೆಗಳು ಶಂಕರನಿಗೆ ಯಜ್ಞದಲ್ಲಿ ಭಾಗವನ್ನು ಕೊಟ್ಟುದು ಅವನ ದಂಡದ ಭಯದಿಂದ. ಎಳೆಯ ಮಗುವಾದ ಕುಮಾರಸ್ವಾಮಿಗೆ ದೇವಸೇನಾಧಿಪತ್ಯವನ್ನು ಕೊಟ್ಟುದೂ ಸಹ ಶತ್ರುವಾದ ತಾರಕಾಸುರನ ದಂಡದ ಭಯದಿಂದಲೇ. ಆದುದರಿಂದ ಲೋಕದಲ್ಲಿ ದಂಡವು ಅತಿಶಯವಾದ ಪ್ರಸಿದ್ಧಿಯನ್ನು ಪಡೆದಿದೆ.

ಶ್ರೀಮತ್ಸ್ಯಮಹಾಪುರಾಣದಲ್ಲಿ ರಾಜಧರ್ಮದೊಳಗೆ ದಂಡಪ್ರಶಂಸೆಯೆಂಬ
ಇನ್ನೂರ ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು

## ಅಥ ಷಡಶೀತ್ಯಧಿಕದ್ವಿಶತತಮೋಽಧ್ಯಾಯಃ

|| ಮತ್ಸ್ಯ ಉವಾಚ ||

ದಂಡಪ್ರಣಯನಾರ್ಥಾಯ ರಾಜಾ ಸೃಷ್ಟಃ ಸ್ವಯಂಭುವಾ ।
ದೇವಭಾಗಾನುಪಾದಾಯ ಸರ್ವಭೂತಾಧಿಗುಪ್ತಯೇ || ೧ ||

ತೇಜಸಾ ಯದಯಂ ಕಶ್ಚಿನ್ನೈವ ಶಕ್ನೋತಿ ವೀಕ್ಷಿತುಂ ।
ತತೋ ಭವತಿ ಲೋಕೇಷು ರಾಜಾ ಭಾಸ್ಕರವತ್ಪ್ರಭುಃ || ೨ ||

ಯದಾಸ್ಯ ದರ್ಶನೇ ಲೋಕಃ ಪ್ರಸಾದಮುಪಗಚ್ಛತಿ ।
ನಯನಾನಂದಕಾರಿತ್ವಾತ್ತದಾ ಭವತಿ ಚಂದ್ರಮಾಃ || ೩ ||

ಯಥಾ ಯಮಃ ಪ್ರಿಯದ್ವೇಷ್ಯೇ ಪ್ರಾಪ್ತೇ ಕಾಲೇ ಪ್ರಯಚ್ಛತಿ ।
ತಥಾ ರಾಜ್ಞಾ ವಿಧಾತವ್ಯಾಃ ಪ್ರಜಾಸ್ತದ್ಧಿ ಯಮವ್ರತಂ || ೪ ||

---

೧. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಸಕಲಜಂತುಗಳ ರಕ್ಷಣಾರ್ಥವಾಗಿ ದಂಡಪ್ರಯೋಗವನ್ನು ಉಚಿತರೀತಿಯಲ್ಲಿ ಮಾಡಲೆಂದು ಬ್ರಹ್ಮದೇವನು ದೇವತೆಗಳ ಅಂಶದಿಂದ ರಾಜನನ್ನು ಸೃಷ್ಟಿಸಿದನು.

೨. ರಾಜನು ಬಹು ತೇಜಸ್ವಿಯಾಗಿರುವ ಕಾರಣ ಯಾರಿಗೂ ಆತನನ್ನು ಕಣ್ಣೆತ್ತಿ ನೋಡಲೂ ಕೂಡ ಸಾಧ್ಯವಿಲ್ಲ. ಈ ಶಕ್ತಿವಿಶೇಷದಿಂದ ಆತನು ಲೋಕದಲ್ಲಿ ಸೂರ್ಯನಿಗೆ ಸಮಾನನೆನಿಸಿದ್ದಾನೆ.

೩. ಅವನನ್ನು ಕಂಡು ಲೋಕವು ಸಂತೋಷಪಡುತ್ತದೆಯಷ್ಟೆ! ಕಣ್ಣುಗಳಿಗೆ ಆನಂದವನ್ನು ಬೀರುವ ಶಕ್ತಿಯು ಅವನಲ್ಲಿದೆ. ಅದುದರಿಂದ ಅವನನ್ನು ಚಂದ್ರನೆಂದು ತಿಳಿಯಬೇಕು.

೪. ಜೀವರ ಕರ್ಮಾನುಸಾರವಾಗಿ ಆಯಾಯಾ ಕಾಲಗಳಲ್ಲಿ ಯಮನು ಸ್ವರ್ಗಾದಿ ಸುಖಭೋಗಗಳನ್ನೂ ನರಕಾದಿದುಃಖಗಳನ್ನೂ ನಿಷ್ಪಕ್ಷಪಾತವಾಗಿ ಕೊಡುತ್ತಾನಷ್ಟೆ! ರಾಜನೂ ಕೂಡ ಅದರಂತೆಯೇ ಪ್ರಜೆಗಳಿಗೆ ಅವರವರ ಒಳ್ಳೆಯ ಮತ್ತು ಕೆಟ್ಟನಡತೆಗಳಿಗೆ ತಕ್ಕಂತೆ ಗೌರವವನ್ನೂ ಶಿಕ್ಷೆಯನ್ನೂ ಕೊಡಬೇಕು. ಇದೇ ಅವನಲ್ಲಿರುವ ಯಮವ್ರತವೆಂಬುದು.

ವರುಣೇನ ಯಥಾ ಪಾಶೈರ್ಬದ್ಧ ಏವ ಪ್ರವೃಶ್ಯತೇ ।
ತಥಾ ಪಾಪಾನ್ನಿಗೃಹ್ಣೀಯಾದ್ವ್ರತಮೇತದ್ಧಿ ವಾರುಣಂ ॥ ೫ ॥

ಪರಿಪೂರ್ಣಂ ಯಥಾ ಚಂದ್ರಂ ದೃಷ್ಟ್ವಾ ಹೃಷ್ಯತಿ ಮಾನವಃ ।
ತಥಾ ಪ್ರಕೃತಯೋ ಯಸ್ಮಿನ್ ಸ ಚಂದ್ರವ್ರತಿನೋ ನೃಪಃ ॥ ೬ ॥

ಪ್ರತಾಪಯುಕ್ತಸ್ತೇಜಸ್ವೀ ನಿತ್ಯಂ ಸ್ಯಾತ್ಪಾಪಕರ್ಮಸು ।
ದುಷ್ಟಸಾಮಂತಹಿಂಸ್ರೇಷು ರಾಜಾಗ್ನೇಯವ್ರತೇ ಸ್ಥಿತಃ ॥ ೭ ॥

ಯಥಾ ಸರ್ವಾಣಿ ಭೂತಾನಿ ಧರಾ ಧಾರಯತೇ ಸ್ವಯಂ ।
ತಥಾ ಸರ್ವಾಣಿ ಭೂತಾನಿ ಬಿಭ್ರತಃ ಪಾರ್ಥಿವಂ ವ್ರತಂ ॥ ೮ ॥

ಇಂದ್ರಸ್ಯಾರ್ಕಸ್ಯ ವಾತಸ್ಯ ಯಮಸ್ಯ ವರುಣಸ್ಯ ಚ ॥
ಚಂದ್ರಸ್ಯಾಗ್ನೇಃ ಪೃಥಿವ್ಯಾಶ್ಚ ತೇಜೋವ್ರತಂ ನೃಪಶ್ಚರೇತ್ ॥ ೯ ॥

---

೫. ವರುಣನು ಜೀವಜಂತುಗಳನ್ನು ಪಾಶಗಳಿಂದ ಬಿಗಿದು ಕಟ್ಟುವಂತೆ ಪ್ರಜೆಗಳು ಪಾಪಕಾರ್ಯಗಳಿಗೆ ಮನಸ್ಸುಕೊಡದಂತೆ ರಾಜನು ದಂಡಪ್ರಯೋಗದಿಂದ ಅವರನ್ನು ನಿವಾರಿಸುವನು. ಇದನ್ನು ವಾರುಣವ್ರತವೆನ್ನುವರು.

೬. ಪೂರ್ಣಚಂದ್ರನನ್ನು ನೋಡಿ ಜನರು ಸಂತೋಷಪಡುವಂತೆ ಯಾವ ರಾಜನನ್ನು ಕಂಡು ಪ್ರಜೆಗಳು ಆನಂದಿಸುವರೋ ಅವನು ಚಂದ್ರನಿಗೆ ಸಮಾನನು.

೭. ಪಾಪಿಷ್ಠರಲ್ಲಿಯೂ, ದುಷ್ಟರಾದ ಸಾಮಂತರಾಜರಲ್ಲಿಯೂ, ಘಾತುಕ ಮೃಗಗಳಲ್ಲಿಯೂ ರಾಜನು ತನ್ನ ಪ್ರತಾಪವನ್ನೂ ತೇಜಸ್ಸನ್ನೂ ತೋರಿಸುತ್ತಾನೆ. ಆದರಿಂದ ಅವನು ಅಗ್ನಿವ್ರತವನ್ನು ಆಚರಿಸಿದಂತಾಯಿತು.

೮. ಭೂಮಿಯು ಎಲ್ಲ ಪ್ರಾಣಿಗಳನ್ನೂ ಧಾರಣಮಾಡುತ್ತಿದೆ. ಹಾಗೆಯೇ ರಾಜನು ಸಕಲಜಂತುಗಳನ್ನೂ ರಕ್ಷಿಸುವನು. ಇದೇ ಅವನ ಪೃಥಿವೀವ್ರತ.

೯. ಇಂದ್ರ, ಸೂರ್ಯ, ವಾಯು, ಯಮ, ವರುಣ, ಚಂದ್ರ, ಅಗ್ನಿ, ಭೂಮಿ ಇವುಗಳ ತೇಜಸ್ಸನ್ನು ಪಡೆಯುವ ಸಲುವಾಗಿ ರಾಜನು ವ್ರತಶೀಲನಾಗಬೇಕು.

ವಾರ್ಷಿಕಾಂಶ್ಚತುರೋ ಮಾಸಾನ್ಯಥೇಂದ್ರೋಽಪ್ಯಭಿವರ್ಷತಿ ।
ತಥಾಭಿವರ್ಷೇತ್ಸ್ವಂ ರಾಷ್ಟ್ರಂ ಕಾಮಮಿಂದ್ರವ್ರತಂ ಸ್ಮೃತಂ ॥೧೦॥

ಅಷ್ಟೌ ಮಾಸಾನ್ಯಥಾದಿತ್ಯಸ್ತೋಯಂ ಹರತಿ ರಶ್ಮಿಭಿಃ ।
ತಥಾ ಹರೇತ್ಕರಂ ರಾಷ್ಟ್ರಾನ್ನಿತ್ಯಮರ್ಕವ್ರತಂ ಹಿ ತತ್ ॥೧೧॥

ಪ್ರವಿಶ್ಯ ಸರ್ವಭೂತಾನಿ ಯಥಾ ಚರತಿ ಮಾರುತಃ ।
ತಥಾ ಚಾರೈಃ ಪ್ರವೇಷ್ಟವ್ಯಂ ವ್ರತಮೇತದ್ಧಿ ಮಾರುತಂ ॥೧೨॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ರಾಜಧರ್ಮೇ ರಾಜ್ಞೋ ಲೋಕಪಾಲ ಸಾಮ್ಯನಿರ್ದೇಶೋ ನಾಮ ಷಡ್ವಿಂಶತ್ಯಧಿಕದ್ವಿಶತತಮೋಽಧ್ಯಾಯಃ

---

೧೦. ಇಂದ್ರನು ಮಳೆಗಾಲದ ನಾಲ್ಕು ತಿಂಗಳಲ್ಲಿ ಮಳೆಗರೆಯುವ ಹಾಗೆ ರಾಜನು ತನ್ನ ರಾಷ್ಟ್ರದಲ್ಲಿ ಸುಖಸಂತೋಷಗಳ ಮಳೆಯನ್ನು ಕರೆಯಬೇಕು. ಇದನ್ನೇ ಇಂದ್ರವ್ರತವೆನ್ನುವರು.

೧೧. ಸೂರ್ಯನು ಎಂಟು ತಿಂಗಳ ಕಾಲ ತನ್ನ ಕಿರಣಗಳಿಂದ ಭೂಮಿಯ ಜಲಾಂಶವನ್ನು ಆಕರ್ಷಿಸುವಂತೆ ರಾಜನು ರಾಷ್ಟ್ರದಿಂದ ಕಂದಾಯವನ್ನು ಎತ್ತಬೇಕು. ಇದನ್ನೇ ಸೂರ್ಯವ್ರತವೆನ್ನುತ್ತಾರೆ.

೧೨. ವಾಯು ಸಕಲಜಂತುಗಳಲ್ಲಿಯೂ ಪ್ರವೇಶಿಸುತ್ತ ಸಂಚರಿಸುವ ಹಾಗೆ ರಾಜನು ಗೂಢಚಾರರ ಮೂಲಕ ಎಲ್ಲರ ಹೃದಯವನ್ನೂ ಹೊಗಬೇಕು. ಇದೇ ಮಾರುತವ್ರತವೆಂಬುದು.

ಅಧ್ಯಾಯ ೨೨೬

## ಅಧ್ಯಾಯದ ಸಾರಾಂಶ

ರಾಜನು ದಿವ್ಯಾಂಶಸಂಭೂತನೆಂಬ ಅಭಿಪ್ರಾಯವನ್ನು ಈ ಅಧ್ಯಾಯವು ತಿಳಿಸುತ್ತದೆ.

ಲೋಕಪಾಲಕರೆಲ್ಲರ ಅಸಾಧಾರಣ ಗುಣಗಳೂ ರಾಜನಲ್ಲಿ ಕಾಣಬರುತ್ತವೆ. ಅವನು ಸೂರ್ಯನಂತೆ ತೇಜಸ್ವಿ, ಚಂದ್ರನಂತೆ ಆಹ್ಲಾದಕಾರಿ, ಯಮನಂತೆ ನಿಷ್ಪಕ್ಷಪಾತಿ, ಅಗ್ನಿಯಂತೆ ಪ್ರತಾಪಶಾಲಿ, ವಾಯುವಿನಂತೆ ಸರ್ವವ್ಯಾಪಿ, ಭೂಮಿಯಂತೆ ಸರ್ವಧಾರಿ. ಆದಕಾರಣ ಆತನನ್ನು ಲೋಕಪಾಲಕರ ಅಂಶದಿಂದ ಜನಿಸಿದವನೆಂದು ಹೇಳುತ್ತಾರೆ.

ಶ್ರೀಮತ್ಸ್ಯಮಹಾಪುರಾಣದಲ್ಲಿ ರಾಜಧರ್ಮದೊಳಗೆ ಸಕಲ ಲೋಕಪಾಲ ಸಾಮ್ಯನಿರ್ದೇಶವೆಂಬ ಇನ್ನೂರ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು

---

## ಅಥ ಸಪ್ತವಿಂಶತ್ಯಧಿಕದ್ವಿಶತತಮೋಽಧ್ಯಾಯಃ

॥ ಮತ್ಸ್ಯ ಉವಾಚ ॥

ನಿಕ್ಷೇಪಸ್ಯ ಸಮಂ ಮೂಲ್ಯಂ ದಂಡ್ಯೋ ನಿಕ್ಷೇಪಭುಕ್ತಥಾ ।
ವಸ್ತ್ರಾದಿಕಸಮಸ್ತಸ್ಯ ತದಾ ಧರ್ಮೋ ನ ಹೀಯತೇ ॥ ೧ ॥

ಯೋ ನಿಕ್ಷೇಪಂ ನಾರ್ಪಯತಿ ಯಶ್ಚಾನಿಕ್ಷಿಪ್ಯ ಯಾಚತೇ ।
ತಾವುಭೌ ಚೋರವಚ್ಛಾಸ್ಯೌ ದಾಪ್ಯೌ ವಾ ದ್ವಿಗುಣಂ ಧನಂ ॥ ೨ ॥

ಉಪಧಾಭಿಶ್ಚ ಯಃ ಕಶ್ಚಿತ್ಪರದ್ರವ್ಯಂ ಹರೇನ್ನರಃ ।
ಸಸಹಾಯಃ ಸ ಹಂತವ್ಯಃ ಪ್ರಕಾಮಂ ವಿವಿಧೈರ್ವಧೈಃ ॥ ೩ ॥

---

೧. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಜೋಪಾನವಾಗಿ ಇಟ್ಟಿರಬೇಕೆಂದು ಕೊಟ್ಟ ಪದಾರ್ಥವನ್ನು ತಾನೇ ಬಳಸಿಕೊಂಡವನಿಗೆ ಆ ಪದಾರ್ಥದ ಬೆಲೆಯಷ್ಟು ಹಣವನ್ನು ರಾಜನು ದಂಡಹಾಕಬೇಕು. ವಸ್ತ್ರ ಮುಂತಾದ ಪದಾರ್ಥಗಳ ದುರುಪಯೋಗದ ವಿಷಯದಲ್ಲಿಯೂ ಹೀಗೆಯೇ. ಇದರಿಂದ ಧರ್ಮಕ್ಕೆ ಲೋಪ ಬಾರದು.

೨. ರಕ್ಷಣೆಗೋಸ್ಕರ ಇಟ್ಟಿದ್ದ ವಸ್ತುವನ್ನು ಯಾವನು ಹಿಂದಕ್ಕೆ ಕೊಡುವುದಿಲ್ಲವೋ ಅಥವಾ ಪದಾರ್ಥವನ್ನೇ ಇಡದೆ ಯಾವನು ಕೊಡಬೇಕೆಂದು ಕೇಳುತ್ತಾನೋ ಅವರಿಬ್ಬರನ್ನೂ ಕಳ್ಳರೆಂದು ಪರಿಗಣಿಸಿ ಶಿಕ್ಷಿಸಬೇಕು. ಮತ್ತು ಪದಾರ್ಥದ ಬೆಲೆಯ ಇಮ್ಮಡಿಯಷ್ಟು ಹಣವನ್ನು ದಂಡವಾಗಿ ವಿಧಿಸಬೇಕು.

೩. ಕಪಟೋಪಾಯಗಳಿಂದ ಕಂಡವರ ಸೊತ್ತನ್ನೂ ದ್ರವ್ಯವನ್ನೂ ಯಾವನು ಅಪಹರಿಸುವನೋ ಅವನನ್ನೂ ಅವನಿಗೆ ಸಹಾಯಮಾಡುವವನನ್ನೂ ಚಿತ್ರಹಿಂಸೆಯಿಂದ ದಂಡಿಸಬೇಕು.

**ಯೋ ಯಾಚಿತಂ ಸಮಾದಾಯ ನ ತದ್ದದ್ಯಾದ್ಯಥಾಕ್ರಮಂ ।**
**ಸ ನಿಗೃಹ್ಯ ಬಲಾದ್ದಾಪ್ಯೋ ದಂಡ್ಯೋ ದ್ವಿಗುಣಸಾಹಸಂ ॥ ೪ ॥**

**ಅಜ್ಞಾನಾದ್ಯದಿ ವಾ ಕುರ್ಯಾತ್ಪರದ್ರವ್ಯಸ್ಯ ವಿಕ್ರಯಂ ।**
**ನಿರ್ದೋಷೋ ಜ್ಞಾನಪೂರ್ವಂ ತು ಚೋರವದ್ವಧಮರ್ಹತಿ ॥ ೫ ॥**

**ಮೂಲ್ಯಮಾದಾಯ ಯೋ ವಿದ್ಯಾಂ ಶಿಲ್ಪಂ ವಾ ನ ಪ್ರಯಚ್ಛತಿ ।**
**ದಂಡ್ಯಃ ಸ ಮೂಲ್ಯಂ ಸಕಲಂ ಧರ್ಮಜ್ಞೇನ ಮಹೀಕ್ಷಿತಾ ॥ ೬ ॥**

**ದ್ವಿಜಭೋಜ್ಯೇ ತು ಸಂಪ್ರಾಪ್ತೇ ಪ್ರತಿವೇಶ್ಮಮಭೋಜಯನ್ ।**
**ಹಿರಣ್ಯಮಾಷಕಂ ದಂಡ್ಯಃ ಪಾಪೇ ನಾಸ್ತಿ ವ್ಯತಿಕ್ರಮಃ ॥ ೭ ॥**

---

೪. ಪದಾರ್ಥವನ್ನು ಕೇಳಿ ತೆಗೆದುಕೊಂಡ ಬಳಿಕ ಅದನ್ನು ಕಾಲನಿಯಮಾನುಸಾರವಾಗಿ ಹಿಂದಕ್ಕೆ ಕೊಡದವನನ್ನು ಶಿಕ್ಷಿಸಿ ಅವನಿಂದ ಆ ಪದಾರ್ಥವನ್ನು ಅದರ ಒಡೆಯನಿಗೆ ಕೊಡಿಸಬೇಕು. ಮತ್ತು ಅದರ ಬೆಲೆಯ ಎರಡರಷ್ಟು ಹಣವನ್ನು ದಂಡವಾಗಿ ತೆಗೆದುಕೊಳ್ಳಬೇಕು.

೫. ತನ್ನಲ್ಲಿದ್ದ ಮತ್ತೊಬ್ಬನ ಪದಾರ್ಥವನ್ನು ತಿಳಿಯದೆ ಮಾರಿದರೆ ದೋಷಕ್ಕೆ ಗುರಿಯಾಗುವುದಿಲ್ಲ. ತಿಳಿದೂ ಮಾರಿದರೆ ಅವನನ್ನು ಕಳ್ಳನಂತೆ ಭಾವಿಸಿ ಮರಣದಂಡನೆಯನ್ನು ವಿಧಿಸಬೇಕು.

೬. ಯಾವನು ನಿಯಮಾನುಸಾರವಾಗಿ ಧನವನ್ನು ತೆಗೆದುಕೊಂಡು ವಿದ್ಯೆಯನ್ನಾಗಲಿ ಶಿಲ್ಪಚಮತ್ಕಾರವನ್ನಾಗಲಿ ಹೇಳಿ ಕೊಡುವುದಿಲ್ಲವೋ, ಅವನಿಂದ ಧರ್ಮಜ್ಞನಾದ ರಾಜನು ತೆಗೆದುಕೊಂಡಿದ್ದ ಹಣವನ್ನು ಹಿಂದಕ್ಕೆ ಕೊಡಿಸುವುದಲ್ಲದೆ ಸರಕಾರಕ್ಕೂ ದಂಡವನ್ನು ತೆಗದುಕೊಳ್ಳಬೇಕು.

೭. ಬ್ರಾಹ್ಮಣರೆಲ್ಲರಿಗೂ ಸಂತರ್ಪಣೆಯನ್ನು ಮಾಡಿಸುವಾಗ ನೆರೆಮನೆಯವನನ್ನು ಊಟಕ್ಕೆ ಕರೆಯದವನಿಗೆ ಮಾಷಪ್ರಮಾಣದ ಹಿರಣ್ಯವನ್ನು (ಐದು ಗುಲಗಂಜಿ ತೂಕದ ಚಿನ್ನದ ನಾಣ್ಯ) ದಂಡವಾಗಿ ಹಾಕಬೇಕು. ಇದರಿಂದ ಅವನಿಗೆ ಆ ಪಾಪವು ಸಂಬಂಧಿಸುವುದಿಲ್ಲ.

ಆಮಂತ್ರಿತೋ ದ್ವಿಜೋ ಯಸ್ತು ವರ್ತಮಾನಶ್ಚ ಸ್ವೇ ಗೃಹೇ ।
ನಿಷ್ಕಾರಣಂ ನ ಗಚ್ಛೇದ್ಯಃ ಸ ದಾಪ್ಯೋಽಷ್ಟಶತಂ ದಮಂ ।
ಪ್ರತಿಶ್ರುತ್ಯಾಪ್ರದಾತಾರಂ ಸುವರ್ಣಂ ದಂಡಯೇನ್ನೃಪಃ ॥ ೮ ॥

ಭೃತ್ಯಶ್ಚಾಜ್ಞಾಂ ನ ಕುರ್ಯಾದ್ಯೋ ದರ್ಪಾತ್ಕರ್ಮ ಯಥೋದಿತಂ ।
ಸ ದಂಡ್ಯಃ ಕೃಷ್ಣಲಾನ್ಯಷ್ಟೌ ನ ದೇಯಂ ಚಾಸ್ಯ ವೇತನಂ ॥ ೯ ॥

ಸಂಗೃಹೀತಂ ನ ದದ್ಯಾದ್ಯಃ ಕಾಲೇ ವೇತನಮೇವ ಚ ।
ಅಕಾಲೇ ತು ತ್ಯಜೇದ್ಭೃತ್ಯಂ ದಂಡ್ಯಃ ಸ್ಯಾಚ್ಛತಮೇವ ಚ ॥೧೦॥

ಯೋ ಗ್ರಾಮದೇಶಸಂಘಾನಾಂ ಕೃತ್ವಾ ಸತ್ಯೇನ ಸಂವಿದಂ ।
ವಿಸಂವದೇನ್ನರೋ ಲೋಭಾತ್ತಂ ರಾಷ್ಟ್ರಾದ್ವಿಪ್ರವಾಸಯೇತ್ ॥೧೧॥

---

೮. ಭೋಜನಕ್ಕೆ ಬರುವುದಾಗಿ ಒಪ್ಪಿಕೊಂಡು, ಮನೆಯಲ್ಲಿ ಇದ್ದೂ ತಕ್ಕ ಕಾರಣವಿಲ್ಲದೆ ಕರೆದವನ ಮನೆಗೆ ಯಾವನು ಹೋಗದಿರುವನೋ ಅವನಿಗೆ ಎಂಟು ನೂರು ದುಡ್ಡುಗಳನ್ನು ದಂಡ ಹಾಕಬೇಕು. ಕೊಡುವುದಾಗಿ ಮಾತುಕೊಟ್ಟು ಪದಾರ್ಥವನ್ನು ಕೊಡದಿರತಕ್ಕವನಿಂದ ಒಂದು ಸುವರ್ಣವನ್ನು (ಎಂಬತ್ತು ಗುಲಗಂಜಿ ತೂಕದ ಚಿನ್ನದ ನಾಣ್ಯ) ದಂಡ ತೆರಿಸಬೇಕು.

೯. ಸ್ವಾಮಿಯ ಅಪ್ಪಣೆಯನ್ನು ನಡೆಸದೆ ಗರ್ವದಿಂದ ಮನಸ್ಸುಬಂದಂತೆ ಕೆಲಸಮಾಡುವ ಸೇವಕನಿಗೆ ಎಂಟು ಕೃಷ್ಣಲಗಳನ್ನು (ಗುಲಗಂಜಿಯ ತೂಕದ ಚಿನ್ನದ ನಾಣ್ಯ) ದಂಡ ಹಾಕಬೇಕು. ಅಲ್ಲದೆ ಅವನಿಗೆ ಸಂಬಳವನ್ನೂ ಕೊಡಬಾರದು.

೧೦. ಹಿಂದಿನಿಂದ ಕೆಲಸಮಾಡಿದುದಕ್ಕಾಗಿ ಸೇವಕನಿಗೆ ಸಲ್ಲಬೇಕಾದ ಒಟ್ಟು ಸಂಬಳವನ್ನು ಸಕಾಲದಲ್ಲಿ ಕೊಡದಿದ್ದರೂ, ಅವನನ್ನು ಅಕಾಲದಲ್ಲಿ ಕೆಲಸದಿಂದ ಬಿಡಿಸಿದರೂ ಯಜಮಾನನಿಗೆ ನೂರು ಕಾರ್ಷಾಪಣಗಳ ದಂಡವನ್ನು ಹಾಕಬೇಕು. (ಹದಿನಾರು ಹಣಗಳಿಗೆ ಒಂದು ಕಾರ್ಷಾಪಣವೆಂದು ಹೆಸರು).

೧೧. ಗ್ರಾಮ, ದೇಶ, ಸಮಾಜ ಇವುಗಳ ಸೇವೆಯನ್ನು ಮಾಡುವೆನೆಂದು ಸತ್ಯಪೂರ್ವಕವಾಗಿ ಪ್ರತಿಜ್ಞೆಮಾಡಿ ಲೋಭದಿಂದ ಅದರಂತೆ ನಡೆಯದಿರುವ ಮನುಷ್ಯನನ್ನು ಅರಸನು ದೇಶದಿಂದ ಹೊರಡಿಸಬೇಕು.

ಕ್ರೀತ್ವಾ ವಿಕ್ರೀಯ ವಾ ಕಿಂಚಿದ್ಯಸ್ಯೇಹಾನುಶಯೋ ಭವೇತ್ ।
ಸೋಽಂತರ್ದಶಾಹಾತ್ತತ್ಸ್ವಾಮ್ಯಂ ದದ್ಯಾಚ್ಚೈವಾದದೀತ ವಾ ॥೧೨॥

ಪರೇಣ ತು ದಶಾಹಸ್ಯ ನ ದದ್ಯಾನ್ನೈವ ದಾಪಯೇತ್
ಆದದನ್ನ ದದಚ್ಚೈವ ರಾಜ್ಞಾ ದಂಡ್ಯಃ ಶತಾನಿ ಷಟ್ ॥೧೩॥

ಯಸ್ತು ದೋಷವತೀಂ ಕನ್ಯಾಮನಾಖ್ಯಾಯ ಪ್ರಯಚ್ಛತಿ ।
ತಸ್ಯ ಕುರ್ಯಾನ್ನೃಪೋ ದಂಡಂ ಸ್ವಯಂ ಷಣ್ಣವತಿಂ ಪಣಾನ್ ॥೧೪॥

ಅಕನ್ಯೈವೇತಿ ಯಃ ಕನ್ಯಾಂ ಬ್ರೂಯಾದ್ದ್ವೇಷೇಣ ಮಾನವಃ ।
ಸ ಶತಂ ಪ್ರಾಪ್ನುಯಾದ್ದಂಡಂ ತಸ್ಯಾ ದೋಷಮದರ್ಶಯನ್ ॥೧೫॥

---

೧೨. ಯಾವುದಾದರೊಂದು ಪದಾರ್ಥವನ್ನು ಒಬ್ಬನಿಂದ ಕೊಂಡು ಕೊಂಡೋ ಅಥವಾ ಒಬ್ಬನಿಗೆ ಮಾರಿಯೋ ಆದ ಬಳಿಕ ಮನಸ್ಸಿಗೆ ಆ ವ್ಯಾಪಾರವು ಸರಿಹೋಗದೆ ಪಶ್ಚಾತ್ತಾಪಹುಟ್ಟಿದರೆ ಹತ್ತು ದಿನಗಳೊಳಗೆ ಆ ವಸ್ತುವನ್ನು ಹಿಂದಕ್ಕೆ ಕೊಡಬಹುದು ಅಥವಾ ತೆಗೆದುಕೊಳ್ಳಬಹುದು.

೧೩. ಹತ್ತು ದಿನಗಳಾದ ಮೇಲೆ ಕೊಡಲೂ ಬಾರದು ; ತೆಗೆದುಕೊಳ್ಳಲೂ ಬಾರದು. ಆ ಅವಧಿಯೊಳಗೆ ಪದಾರ್ಥವನ್ನು ಹಿಂದಕ್ಕೆ ತೆಗೆದುಕೊಳ್ಳುವುದಕ್ಕಾಗಲಿ ಕೊಡುವುದಕ್ಕಾಗಲಿ ಒಪ್ಪದಿದ್ದರೆ ರಾಜನು ಆರುನೂರು ಹಣ ದಂಡವನ್ನು ವಿಧಿಸಬೇಕು.

೧೪. ಕನ್ಯೆಯಲ್ಲಿರುವ ದೋಷವನ್ನು ತಿಳಿಸದೆ ಮುಚ್ಚಿಟ್ಟು ಮದುವೆ ಮಾಡಿಕೊಡುವಾತನಿಗೆ ರಾಜನು ತೊಂಬತ್ತಾರು ಹಣಗಳ ದಂಡವನ್ನು ಹಾಕಬೇಕು.

೧೫. ತನ್ನ ಮಗಳಲ್ಲಿ ದೋಷವಿರುವ ಕಾರಣ ಅವಳನ್ನು ತನ್ನ ಮಗಳೇ ಅಲ್ಲವೆಂದು ಹೇಳಿ ಅವಳ ದೋಷವನ್ನು ಹೊರಪಡಿಸದಿರುವ ಮನುಷ್ಯನಿಗೆ ನೂರು ಹಣಗಳ ದಂಡವನ್ನು ವಿಧಿಸಬೇಕು.

**ಯಸ್ತ್ವನ್ಯಾಂ ದರ್ಶಯಿತ್ವಾನ್ಯಾಂ ವೋಢುಃ ಕನ್ಯಾಂ ಪ್ರಯಚ್ಛತಿ ।**
**ಉತ್ತಮಂ* ತಸ್ಯ ಕುರ್ವೀತ ರಾಜಾ ದಂಡಂ ತು ಸಾಹಸಂ ॥೧೬॥**

---

೧೬. ವರನಿಗೆ ಮೊದಲು ಒಬ್ಬಳನ್ನು ತೋರಿಸಿ ಆಮೇಲೆ ಬೇರೊಬ್ಬಳನ್ನು ಕೊಟ್ಟು ಮದುವೆಮಾಡುವುದಕ್ಕೆ ಪ್ರಯತ್ನಿಸುವವನ ಅಪರಾಧವನ್ನು ಅತ್ಯಂತ ದೊಡ್ಡದೆಂದು ಭಾವಿಸಿ, ಅದಕ್ಕೆ ತಕ್ಕಂತೆ ಐನೂರಕ್ಕೆ ಕಡಿಮೆಯಿಲ್ಲದಂತೆ ಸಾವಿರ ಕಾರ್ಷಾಪಣಗಳ ವರೆಗೆ ದಂಡವನ್ನು ಹಾಕಬೇಕು.

---

* ಶಾಸ್ತ್ರವನ್ನೂ ಲೋಕಮರ್ಯಾದೆಯನ್ನೂ ಗಮನಿಸದೆ ಬಲದ ಮದದಿಂದ ಮಾಡುವ ಕೃತ್ಯಕ್ಕೆ ಸಾಹಸವೆಂದು ಹೆಸರು. ಇದೇ ಅಪರಾಧ. ಇದನ್ನು ಪ್ರಥಮಸಾಹಸ, ಮಧ್ಯಮ ಸಾಹಸ, ಉತ್ತಮಸಾಹಸ ಎಂದು ಮೂರು ವಿಧವಾಗಿ ವಿಂಗಡಿಸಿರುವರು.

(೧) ಇತರರಿಗೆ ಸೇರಿದ ಗೆಡ್ಡೆ, ಗೆಣಸು, ಹಣ್ಣು, ವ್ಯವಸಾಯದ ಉಪಕರಣಗಳು ಇವನ್ನು ತೆಗೆದುಕೊಳ್ಳುವುದು ಅಥವಾ ನಷ್ಟಪಡಿಸುವುದು ಮೊದಲನೆಯ ಬಗೆಯ ಅಪರಾಧ ವಾಗುತ್ತದೆ. ಇದಕ್ಕೆ ನೂರು ಕಾರ್ಷಾಪಣಗಳವರೆಗೆ ದಂಡವನ್ನು ವಿಧಿಸಬಹುದು.

(೨) ಕಂಡವರ ಮನೆಮಠಗಳನ್ನೂ, ಮನೆಯ ಸಾಮಾನುಗಳನ್ನೂ ದನಕರುಗಳನ್ನೂ ಅಪಹರಿಸಿದರೆ ಅಥವಾ ನಷ್ಟಪಡಿಸಿದರೆ ಎರಡನೆಯ ಬಗೆಯ ಅಪರಾಧ (ಮಧ್ಯಮ ಸಾಹಸ) ವಾಗುತ್ತದೆ. ಇದಕ್ಕೆ ಐದುನೂರು ಕಾರ್ಷಾಪಣಗಳವರೆಗೆ ದಂಡವನ್ನು ಹಾಕಬಹುದು.

(೩) ವಿಷದಿಂದಲೋ ಹಾವು ಮುಂತಾದುವುಗಳಿಂದಲೋ ಕೊಲ್ಲುವುದು. ಪರಸ್ತ್ರೀಯ ರನ್ನು ಅಪಹರಿಸುವುದು, ಪ್ರಾಣಾಪಹಾರ ಮಾಡಲು ಇತರ ವಿಧಗಳಲ್ಲಿ ಪ್ರಯತ್ನಿಸುವುದು ಈ ಅಪರಾಧಿಗಳೆಲ್ಲ ಉತ್ತಮ ಸಾಹಸಕ್ಕೆ ಸೇರಿದುವು. ಒಂದು ಸಾವಿರ ಕಾರ್ಷಾಪಣಗಳವರೆಗೆ ಇದಕ್ಕೆ ದಂಡವನ್ನು ವಿಧಿಸಬಹುದು. ಅಲ್ಲದೆ ಆಸ್ತಿಯನ್ನು ಮುಟ್ಟುಗೋಲು ಹಾಕುವುದು, ದೇಶದಿಂದ ಹೊರಡಿಸುವುದು, ಅಂಗವನ್ನು ಛೇದಿಸುವುದು ಇವೇ ಮೊದಲಾದ ಶಿಕ್ಷೆಗಳನ್ನೂ ವಿಧಿಸಬಹುದು.

ಕೃಷ್ಣಲ ಅಥವಾ ಕೃಷ್ಣಲಕ, ಮಾಷ (ಕ), ಪಣ, ಕಾರ್ಷಾಪಣ, ಸುವರ್ಣ ಮುಂತಾದುವು ಹಿಂದೆ ರೂಢಿಯಲ್ಲಿದ್ದ ನಾಣ್ಯವಿಶೇಷಗಳು. ಇವುಗಳಲ್ಲಿ ನಿಷ್ಕವೂ ಸುವರ್ಣವೂ ಚಿನ್ನದಿಂದಾದುವು. ಉಳಿದವು ತಾಮ್ರದಿಂದಲೂ ಬೆಳ್ಳಿಯಿಂದಲೂ ನಿರ್ಮಿತವಾದುವು. ನಾಣ್ಯದ ಹೆಸರನ್ನು ಹೇಳದೆ ದಂಡವನ್ನು ವಿಧಿಸುವಾಗ ಅದು ಕಾರ್ಷಾಪಣವೆಂದು ತಿಳಿಯಬೇಕು.

ವರೋ ದೋಷಾನನಾಖ್ಯಾಯ ಯಃ ಕನ್ಯಾಂ ವರಯೇದಿಹ ।
ದತ್ತಾಪ್ಯದತ್ತಾ ಸಾ ತಸ್ಯ ರಾಜ್ಞಾ ದಂಡ್ಯಃ ಶತದ್ವಯಂ ॥೧೭॥

ಪ್ರದಾಯ ಕನ್ಯಾಂ ಯೋಽನ್ಯಸ್ಮೈ ಪುನಸ್ತಾಂ ಸಂಪ್ರಯಚ್ಛತಿ ।
ದಂಡಃ ಕಾರ್ಯೋ ನರೇಂದ್ರೇಣ ತಸ್ಯಾಪ್ಯುತ್ತಮಸಾಹಸಃ ॥೧೮॥

ದ್ವಿಗುಣಂ ದಂಡಯೇದೇನಮಿತಿ ಧರ್ಮೋ ವ್ಯವಸ್ಥಿತಃ ।
ಸತ್ಯಂಕಾರೇಣ ವಾ ವಾಚಾ ಯುಕ್ತಂ ಪಣ್ಯಮಸಂಶಯಂ ।
ಲುಬ್ಧೋ ಹ್ಯನ್ಯತ್ರ ವಿಕ್ರೇತಾ ಷಟ್ಶತಂ ದಂಡಮರ್ಹತಿ ॥೧೯॥

---

೧೭. ವರನು ತನ್ನ ದೋಷಗಳನ್ನು ತಿಳಿಸದೆ ಕನ್ಯೆಯನ್ನು ಬೇಡಿದಾಗ ಅವಳನ್ನು ಕೊಡುವುದಾಗಿ ಮಾತುಕೊಟ್ಟಿದ್ದರೂ ವಾಸ್ತವಾಂಶವು ತಿಳಿದುಬಿಟ್ಟರೆ ಮಾತುಕೊಡದಂತೆಯೇ ಭಾವಿಸಬೇಕು. ಅವನಿಗೆ ರಾಜನು ಇನ್ನೂರು ಕಾರ್ಷಾಪಣಗಳ ದಂಡವನ್ನು ಹೊರಿಸಬೇಕು.

೧೮. ತನ್ನ ಮಗಳನ್ನು ಒಬ್ಬನಿಗೆ ಕೊಡುವುದಾಗಿ ಮಾತುಕೊಟ್ಟು ನಿಷ್ಕರ್ಷೆಮಾಡಿದಮೇಲೆ ಬೇರೊಬ್ಬನಿಗೆ ಅವಳನ್ನು ಮದುವೆಮಾಡಿಕೊಟ್ಟರೆ ಆ ತಂದೆಗೆ ಮೊದಲನೆಯ ದರ್ಜೆಯ ದಂಡವನ್ನು (ಒಂದು ಸಾವಿರಕಾರ್ಷಾಪಣಗಳನ್ನು ವಿಧಿಸಬೇಕು.) ಇದಕ್ಕೆ ಇಮ್ಮಡಿಯಾಗಿ ಬೇಕಾದರೂ ದಂಡಿಸಬಹುದು. ಇದು ಧರ್ಮದ ವ್ಯವಸ್ಥೆಗೆ ಆವಶ್ಯಕವಾದುದು.

೧೯. ತನ್ನ ಪದಾರ್ಥವನ್ನು ಮಾರುವುದಾಗಿ ಪ್ರಮಾಣಪೂರ್ವಕವಾಗಿಯೋ ಬರಿಯ ಮಾತಿನಿಂದಲೋ ಮಾತುಕೊಟ್ಟು, ದುರಾಸೆಯಿಂದ ಬೇರೊಬ್ಬನಿಗೆ ಅದನ್ನು ಮಾರುವವನು ಆರುನೂರು ಹಣಗಳ ದಂಡವನ್ನು ತೆರಬೇಕು.

---

ಕೃಷ್ಣಲಕಃ ...ಗುಂಜಾ, ಪರಿಮಾಣ ವಿಶೇಷಃ
ಪಂಚಕೃಷ್ಣಲಕೋ ಮಾಷಸ್ತೇ ಸುವರ್ಣಸ್ತು ಷೋಡಶ
ದ್ವೇ ಕೃಷ್ಣಲೇ ಸಮುಧೃತೇ ವಿಜ್ಞೇಯೋ ರೂಪ್ಯಮಾಷಕಃ
ಕಾರ್ಷಾಪಣಸ್ತು ವಿಜ್ಞೇಯಸ್ತಾಮ್ರಿಕಃ ಕಾರ್ಷಿಕಃ ಪಣಃ
ನಿಷ್ಕಃ ಸುವರ್ಣಾಶ್ಚತ್ವಾರಃ ಕಾರ್ಷಿಕಸ್ತಾಮ್ರಿಕಃ ಪಣಃ—
ಎಂಬ ವಚನಗಳು ಇವುಗಳ ಪರಿಮಾಣವನ್ನು ತಿಳಿಸುತ್ತವೆ.

ದುಹಿತುಃ ಶುಲ್ಕವಿಕ್ರೇತಾ ಸತ್ಯಂಕಾರಾತ್ತು ಸಂತ್ಯಜೇತ್ ।
ದ್ವಿಗುಣಂ ದಂಡಯೇಥೇನಮಿತಿ ಧರ್ಮೋ ವ್ಯವಸ್ಥಿತಃ ॥೨೦॥

ಮೂಲ್ಯೈಕದೇಶಂ ದತ್ವಾ ತು ಯದಿ ಕ್ರೇತಾ ಧನಂ ತ್ಯಜೇತ್ ।
ಸ ದಂಡ್ಯೋ ಮಧ್ಯಮಂ ದಂಡಂ ತಸ್ಯ ಪಣ್ಯಸ್ಯ ಮೋಕ್ಷಣಂ ॥೨೧॥

ದುಹ್ಯಾದ್ಧೇನುಂ ಚ ಯಃ ಪಾಲೋ ಗೃಹೀತ್ವಾ ಭಕ್ತವೇತನಂ ।
ಸ ತು ದಂಡ್ಯಃ ಶತಂ ರಾಜ್ಞಾ ಸುವರ್ಣಂ ಚಾಪ್ಯರಕ್ಷಿತಾ ॥೨೨॥

ದಂಡಂ ದತ್ವಾ ತು ವಿರಮೇತ್ ಸ್ವಾಮಿತಃ ಕೃತಲಕ್ಷಣಃ ।
ಬದ್ಧಃ ಕಾಷ್ಠಾಯಸೈಃ ಪಾಶೈಸ್ತಸ್ಯ ಕರ್ಮಕರೋ ಭವೇತ್ ॥೨೩॥

---

೨೦. ಮಗಳಿಗೆ ಅವಳ ಗಂಡನೋ ಇತರ ಬಂಧುಗಳೋ ಓದಿಸಿದ ಭೂಷಣಾದಿವಸ್ತುಗಳನ್ನು ಮಾರುವುದು ಅಥವಾ ತನ್ನಲ್ಲಿ ಆ ವಸ್ತುವೇ ಇಲ್ಲವೆಂದು ಆಣೆಮಾಡಿಹೇಳುವುದು ಹೀಗೆ ಮಾಡುವಾತನಿಗೆ ಇಮ್ಮಡಿಯಾಗಿ ದಂಡವನ್ನು ಹಾಕಬೇಕು. ಹೀಗೆ ಮಾಡಿದರೆ ಧರ್ಮವು ನಿಲ್ಲುವುದು.

೨೧. ಪದಾರ್ಥವನ್ನು ಕೊಂಡುಕೊಂಡವನು ಅದರ ಬೆಲೆಯಲ್ಲಿ ಸ್ವಲ್ಪ ಭಾಗವನ್ನು ಕೊಟ್ಟು ತರುವಾಯ ಉಳಿದುದನ್ನು ಕೊಡದೆ ಹೋದರೆ ಅದು ಮಧ್ಯಮ ಸಾಹಸ ಎಂದರೆ ಎರಡನೆಯ ದರ್ಜೆಯ ಅಪರಾಧವಾಗುತ್ತದೆ. ಅದಕ್ಕೆ ನೂರರ ಮೇಲೆ ಐನೂರರ ಒಳಗೆ ದಂಡವನ್ನು ವಿಧಿಸಬೇಕು. ಅವನು ಕೊಂಡು ಕೊಂಡಿದ್ದ ಪದಾರ್ಥವನ್ನು ಹಿಂದಕ್ಕೆ ಕೊಡಿಸಬೇಕು.

೨೨. ದನಕಾಯುವವನು ವೇತನವನ್ನು ತೆಗೆದುಕೊಂಡು ಹಸುವನ್ನು ಸರಿಯಾಗಿ ಕಾಯದೆ ಆದರ ಹಾಲನ್ನೂ ಕರೆದುಕೊಂಡರೆ ರಾಜನು ಅವನಿಗೆ ಒಂದು ನೂರು ಹೊನ್ನುಗಳ ದಂಡವನ್ನು ವಿಧಿಸಬೇಕು.

೨೩. ದಂಡವನ್ನು ತೆತ್ತಬಳಿಕ ಅವನು ತನ್ನ ಒಡೆಯನಿಂದ ತನ್ನ ಅಪರಾಧ ಸೂಚಕವಾದ ಗುರುತನ್ನು ಮಾಡಿಸಿಕೊಂಡು ಆ ಕೆಲಸವನ್ನು ಬಿಡಬೇಕು. ಕಬ್ಬಿಣದ ಸರಪಣಿಯನ್ನು ಕಾಲಿಗೆ ಕಟ್ಟಿಕೊಂಡು ಯಜಮಾನನ ಸೇವಕನಾಗಿ ಅವನು ಹೇಳಿದ ಕೆಲಸವನ್ನು ಮಾಡುತ್ತಿರಬೇಕು.

ಧನುಃಶತಪರೀಣಾಹೋ ಗ್ರಾಮಸ್ಯ ತು ಸಮಂತತಃ ।
ದ್ವಿಗುಣಂ ತ್ರಿಗುಣಂ ವಾಪಿ ನಗರಸ್ಯ ತು ಕಲ್ಪಯೇತ್ ॥೨೪॥

ವೃತಿಂ ತತ್ರ ಪ್ರಕುರ್ವೀತ ಯಾಮುಷ್ಟ್ರೋ ನಾವಲೋಕಯೇತ್ ।
ಛಿದ್ರಂ ವಾ ವಾರಯೇತ್ಸರ್ವಂ ಶ್ವಶೂಕರಮುಖಾನುಗಂ ॥೨೫॥

ಯತ್ರಾಽಪರಿವೃತಂ ಧಾನ್ಯಂ ವಿಹನ್ಯುಃ ಪಶವೋ ಯದಿ ।
ನ ತತ್ರ ಕಾರಯೇದ್ದಂಡಂ ನೃಪತಿಃ ಪಶುರಕ್ಷಿಣೇ ॥೨೬॥

ಅನಿರ್ದಶಾಹಾಂ ಗಾಂ ಸೂತಾಂ ವೃಷಂ ದೇವಪಶುಂ ತಥಾ ।
ಛಿದ್ರಂ ವಾ ವಾರಯೇತ್ಸರ್ವಂ ನ ದಂಡ್ಯಾ ಮನುರಬ್ರವೀತ್ ॥೨೭॥

ಅಥೋನ್ಯಥಾ ವಿನಷ್ಟಸ್ಯ ದಶಾಂಶಂ ದಂಡಮರ್ಹತಿ ।
ಪಾಲ್ಯಸ್ಯ ಪಾಲಕಸ್ವಾಮೀ ವಿನಾಶೇ ಕ್ಷತ್ರಿಯಸ್ಯ ತು ॥೨೮॥

---

೨೪-೨೫. ಹಳ್ಳಿಯ ಸುತ್ತಲೂ ನೂರು ಬಿಲ್ಲುಗಳ ಅಳತೆಯಷ್ಟು ವಿಸ್ತಾರವಾದ ಬಯಲನ್ನು ಬಿಡಬೇಕು (ಒಂದು ಬಿಲ್ಲಿನ ಅಳತೆಯೆಂದರೆ ನಾನೂರು ಮೊಳ) ನಗರದ ವಿಷಯದಲ್ಲಿ ಈ ಪ್ರಮಾಣವು ಇಮ್ಮಡಿಯಾಗಿ ಇರಬಹುದು. ಅದರ ಹೊರಗೆ ಒಂಟೆಗೆ ಸಹ ಕಾಣದಷ್ಟು ಎತ್ತರವಾದ ಬೇಲಿಯನ್ನು ಹಾಕಬೇಕು. ನಾಯಿ, ಹಂದಿ ಮುಂತಾದ ಪ್ರಾಣಿಗಳು ನುಗ್ಗುವುದಕ್ಕೆ ಆಗದಂತೆ ಸಂದುಗಳನ್ನು ಮುಚ್ಚಬೇಕು.

೨೬. ಬೇಲಿಯಿಲ್ಲದ ಹೊಲಕ್ಕೆ ಹಸುಗಳು ನುಗ್ಗಿಹೋಗಿ ಧಾನ್ಯವನ್ನು ತಿಂದು ನಷ್ಟಗೊಳಿಸಿದರೆ ರಾಜನು ದನಕಾಯುವವನಿಗೆ ಯಾವ ಶಿಕ್ಷೆಯನ್ನೂ ಮಾಡಬೇಕಾಗಿಲ್ಲ.

೨೭. ಕರುಹಾಕಿ ಹತ್ತುದಿನ ತುಂಬದ ಹಸು, ಗೂಳಿ, ದೇವಸ್ಥಾನದ ಹಸು ಇವುಗಳನ್ನು ಹೊಡೆಯಬಾರದು. ಇವು ಪ್ರವೇಶಿಸದಂತೆ ಬೇಲಿಯ ಸಂದುಗಳನ್ನೆಲ್ಲ ಮುಚ್ಚಬೇಕು. ಹೀಗೆಂದು ಮನುಚಕ್ರವರ್ತಿ ಹೇಳಿದ್ದಾನೆ.

೨೮. ಮೇಲೆ ಹೇಳಿದಂತೆ ಅಲ್ಲದೆ ಬೇರೆ ವಿಧದಲ್ಲಿ ಧಾನ್ಯವು ನಷ್ಟವಾದರೆ, ಅದು ಕ್ಷತ್ರಿಯನಿಗೆ ಸಂಬಂಧಪಟ್ಟಿದ್ದಲ್ಲಿ ದನಕರುಗಳನ್ನು ಕಾಯುತ್ತಿದ್ದವನ ಯಜಮಾನನು ನಷ್ಟದ ಹತ್ತರಲ್ಲಿ ಒಂದು ಪಾಲನ್ನು ದಂಡವಾಗಿ ಕೊಡಬೇಕು.

ಭಕ್ಷಯಿತ್ವೋಪವಿಷ್ಟಸ್ತು ದ್ವಿಗುಣಂ ದಂಡಮರ್ಹತಿ ।
ವಿಶಂ ದಂಡ್ಯಾದ್ದಶಗುಣಂ ವಿನಾಶೇ ಕ್ಷತ್ರಿಯಸ್ಯ ತು ॥೨೯॥

ಅತೋಽನ್ಯಥಾ ವಿನಷ್ಟಸ್ಯ ದಶಾಂಶಂ ದಂಡಮರ್ಹತಿ ।
ಗೃಹಂ ತಡಾಗಮಾರಾಮಂ ಕ್ಷೇತ್ರಂ ವಾಪಿ ಸಮಾಹರನ್ ।
ಶತಾನಿ ಪಂಚ ದಂಡಃ ಸ್ಯಾದಜ್ಞಾನಾದ್ದ್ವಿ ಶತೋ ದಮಃ ॥೩೦॥

ಸೀಮಾಬಂಧನಕಾಲೇ ತು ಸೀಮಾಂತಂ ಯೋ ಹಿ ಕಾರಯೇತ್ ।
ತೇಷಾಂ ಸಂಜ್ಞಾಂ ದದಾನಸ್ತು ಜಿಹ್ವಾಚ್ಛೇದಮವಾಪ್ನುಯಾತ್ ॥೩೧॥

ಅಥೈನಾಮಪಿ ಯೋ ದದ್ಯಾತ್ಸಂವಿದಂ ವಾಽಧಿಗಚ್ಛತಿ ।
ಉತ್ತಮಂ ಸಾಹಸಂ ದಂಡ್ಯಃ ಇತಿ ಸ್ವಾಯಂಭುವೋಽಬ್ರವೀತ್ ॥೩೨॥

---

೨೯. ಧಾನ್ಯವನ್ನು ತಿಂದು ಹಸುವು ಅಲ್ಲಿಯೇ ಮಲಗಿದ್ದರೆ ಮೇಲಿನ ಶಿಕ್ಷೆ ಎರಡರಷ್ಟು ಹೆಚ್ಚುವುದು. ಕ್ಷತ್ರಿಯನ ಪದಾರ್ಥವನ್ನು ವೈಶ್ಯನು ನಷ್ಟಪಡಿಸಿದರೆ ಅವನಿಗೆ ಹತ್ತರಷ್ಟು ಶಿಕ್ಷೆಯನ್ನು ಕೊಡಬೇಕು.

೩೦. ಮನೆ, ಕೆರೆ, ತೋಟ, ಹೊಲ ಇವುಗಳನ್ನು ಅಪಹರಿಸುವವನು ಐದುನೂರು ಹಣ ದಂಡವನ್ನು ಕೊಡಬೇಕು. ಅಪರಾಧವು ಅಜ್ಞಾನದಿಂದಾಗಿದ್ದರೆ ಇನ್ನೂರು ಹಣಗಳ ದಂಡವೇ ಸಾಕು.

೩೧. ಹೊಲಗದ್ದೆಗಳ ಎಲ್ಲೆಕಟ್ಟನ್ನು ನಿಬಂಧನಮಾಡುವಾಗ ನ್ಯಾಯವಾದುದನ್ನು ಬಿಟ್ಟು ಬೇರೆ ಎಲ್ಲೆಯನ್ನು ಗೊತ್ತುಮಾಡುವವನಿಗೂ, ಅದಕ್ಕೆ ಅನುಕೂಲವಾಗಿ ಸಂಕೇತದಿಂದ ಸನ್ನೆಮಾಡುವವನಿಗೂ ನಾಲಗೆಗಳನ್ನು ಕತ್ತರಿಸಬೇಕು.

೩೨. ಜ್ಞಾನಪೂರ್ವಕವಾಗಿ ಮತ್ತೊಬ್ಬನ ಭೂಮಿಯನ್ನು ಒತ್ತರಿಸಿ ಹೊಲಗದ್ದೆಗಳ ಎಲ್ಲೆಯನ್ನು ವ್ಯತ್ಯಾಸಮಾಡತಕ್ಕವನಿಗೆ ಒಂದು ಸಾವಿರ ಹಣಗಳನ್ನು ದಂಡವಾಗಿ ವಿಧಿಸಬೇಕೆಂದು ಸ್ವಾಯಂಭುವಮನು ಹೇಳಿದನು.

ವರ್ಣಾನಾಮಾನುಪೂರ್ವ್ಯೇಣ ತ್ರಯಾಣಾಮವಿಶೇಷತಃ ।
ಅಕಾರ್ಯಕಾರಿಣಃ ಸರ್ವಾನ್ ಪ್ರಾಯಶ್ಚಿತ್ತಾನಿ ಕಾರಯೇತ್ ॥೩೩॥

ಅಸತ್ಯೇನ ಪ್ರಮಾಪ್ಯ ಸ್ತ್ರೀಂ ಶೂದ್ರಹತ್ಯಾವ್ರತಂ ಚರೇತ್ ।
ದಾನೇನ ಚ ಧನೇನೈಕಂ ಸರ್ಪಾದೀನಾಮಶಕ್ನುವನ್ ॥೩೪॥

ಏಕೈಕಂ ಸ ಚರೇತ್ಕೃಚ್ಛ್ರಂ ದ್ವಿಜಃ ಪಾಪಾಪನುತ್ತಯೇ ।
ಫಲದಾನಾಂ ಚ ವೃಕ್ಷಾಣಾಂ ಛೇದನೇ ಜಪ್ಯಮೃಕ್ಶತಂ ॥೩೫॥

ಗುಲ್ಮವಲ್ಲೀಲತಾನಾಂ ಚ ಪುಷ್ಪಿತಾನಾಂ ಚ ವೀರುಧಾಂ ।
ಅಸ್ಥಿಮತಾಂ ಚ ಸತ್ವಾನಾಂ ಸಹಸ್ರಸ್ಯ ಪ್ರಮಾಪಣೇ ।
ಪೂರ್ಣೇ ವಾನಸ್ಯವಸ್ಥಾತುಂ ಶೂದ್ರಹತ್ಯಾವ್ರತಂ ಚರೇತ್ ॥೩೬॥

---

೩೩. ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರೆಂಬ ಮೂರು ವರ್ಣದವರಲ್ಲಿ ಅಕಾರ್ಯವನ್ನು ಮಾಡಿದವರು ಯಾರೇ ಆಗಲಿ ವಿಶೇಷವೇನೂ ಇಲ್ಲದೆ ಪ್ರಾಯಶ್ಚಿತ್ತ ಮಾಡಿಕೊಳ್ಳುವಂತೆ ವಿಧಿಸಬೇಕು.

೩೪. ಅಸತ್ಯವಚನಗಳಿಂದ ಸ್ತ್ರೀಯನ್ನು ವಂಚಿಸಿ ಕೊಂದವನು ಶೂದ್ರ ಹತ್ಯಾವ್ರತವನ್ನು ಮಾಡಬೇಕು. ದುಡ್ಡುಕಾಸುಗಳನ್ನು ಕೊಟ್ಟು ಹಾವು ಮುಂತಾದ್ರ ಪ್ರಾಣಿಗಳನ್ನು ಕೊಲ್ಲಿಸಿದ ಬ್ರಾಹ್ಮಣನು ಆ ಪಾಪಪರಿಹಾರಕ್ಕಾಗಿ ವಿಶೇಷ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲು ಸಾಧ್ಯವಿಲ್ಲದಿದ್ದರೆ ಒಂದೊಂದು ಕೃಚ್ಛ ವನ್ನಾದರೂ ಆಚರಿಸಬೇಕು.*

೩೫. ಹಣ್ಣುಬಿಡುವ ಮರಗಳನ್ನೂ ಹೂಬಿಡುವ ಗಿಡಬಳ್ಳಿಗಳನ್ನೂ ಕತ್ತರಿಸಿ ಹಾಕಿದರೆ ಆಪಾಪದ ಪರಿಹಾರಕ್ಕಾಗಿ ನೂರು ಋಕ್ಕುಗಳನ್ನು ಜಪಿಸಬೇಕು.

೩೬. ಮೂಳೆಯಿರುವ ಪ್ರಾಣಿಗಳನ್ನು ಬಹುವಾಗಿ ಕೊಂದರೂ, ಗಾಡಿಯು ತುಂಬ ಹೊರೆಯನ್ನು ಹೇರಿ ಎತ್ತು ಎಳೆಯಲಾರದಿರುವಾಗ ತಾನು ಅದರಲ್ಲಿ ಕುಳಿತುಕೊಂಡರೂ ಶೂದ್ರಹತ್ಯಾವ್ರತವನ್ನು ಆಚರಿಸಬೇಕು.

---

* ಕೃಚ್ಛ್ರವೆಂದರೆ ಶರೀರವನ್ನು ದಂಡಿಸುವುದಕ್ಕಾಗಿ ನಡೆಸುವ ವ್ರತವಿಶೇಷ. ಇದರಲ್ಲಿ ಹಲವು ಬಗೆಗಳಿವೆ. ಪ್ರತಿದಿನವೂ ಒಂದೊಂದು ಬೊಗಸೆ ನೀರನ್ನು ಮಾತ್ರ ಕುಡಿದು ಒಂಬತ್ತು ದಿನ ಉಪವಾಸವಿರುವ ಕೃಚ್ಛ್ರಕ್ಕೆ ಕೃಚ್ಛ್ರಾತಿಕೃಚ್ಛ್ರವೆಂದು ಹೆಸರು.

**ಕಿಂಚಿದ್ದೇಯಂ ಚ ವಿಪ್ರಾಯ ದದ್ಯಾದಸ್ಥಿಮತಾಂ ವಧೇ ।**
**ಅನಸ್ಥ್ನಾಂ ಚೈವ ಹಿಂಸಾಯಾಂ ಪ್ರಾಣಾಯಾಮೈರ್ವಿಶುಧ್ಯತಿ ॥೩೭॥**

**ಅನ್ನಾದಿಜಾನಾಂ ಸತ್ವಾನಾಂ ರಸಜಾನಾಂ ಚ ಸರ್ವಶಃ ।**
**ಫಲಪುಷ್ಪೋದ್ಭವಾನಾಂ ಚ ಘೃತಪ್ರಾಶೋ ವಿಶೋಧನಂ ॥೩೮॥**

**ಕೃಷ್ಟಾನಾಮೋಷಧೀನಾಂ ಚ ಜಾತಾನಾಂ ಚ ಸ್ವಯಂ ವನೇ ।**
**ವೃಥಾಚ್ಛೇದೇನ ಗಚ್ಛೇತ ದಿನಮೇಕಂ ಪಯೋವ್ರತೀ ॥೩೯॥**

**ಏತೈರ್ವ್ರತೈರಪೋಹ್ಯಂ ಸ್ಯಾದೇನೋ ಹಿಂಸಾಸಮುದ್ಭವಂ ।**
**ಸ್ತೇಯದೋಷಾಪಹರ್ತ್ಯಣಾಂ ಶ್ರೂಯತಾಂ ವ್ರತಮುತ್ತಮಂ ॥೪೦॥**

---

೩೭. ಮೂಳೆಯಿರುವ ಪ್ರಾಣಿಗಳನ್ನು ಅಜ್ಞಾನದಿಂದ ವಧಿಸಿದಾಗ ಬ್ರಾಹ್ಮಣನಿಗೆ ಏನಾದರೂ ದಾನಮಾಡಬೇಕು. ಮೂಳೆಯಿಲ್ಲದುವನ್ನು ಕೊಂದುಬಿಟ್ಟರೆ ಪ್ರಾಣಾಯಾಮವೇ ಪ್ರಾಯಶ್ಚಿತ್ತ.

೩೮. ಅನ್ನ ಮೊದಲಾದವುಗಳಲ್ಲಿ, ರಸಗಳಲ್ಲಿ, ಫಲಪುಷ್ಪಗಳಲ್ಲಿ ಹುಟ್ಟಿದ ಪ್ರಾಣಿಗಳನ್ನು ಕೊಂದ ಪಾಪವು ತುಪ್ಪವನ್ನು ಪ್ರಾಶನಮಾಡುವುದರಿಂದ ಪರಿಹಾರವಾಗುತ್ತದೆ.

೩೯. ನೆಲವನ್ನು ಉತ್ತು ಬೆಳಸಿದ ಪೈರುಪಚ್ಚೆಗಳನ್ನೂ, ಕಾಡಿನಲ್ಲಿ ತಾನಾಗಿಯೇ ಬೆಳೆದ ಗಿಡಗಳನ್ನೂ ವ್ಯರ್ಥವಾಗಿ ಕತ್ತರಿಸಿದರೆ ಒಂದು ದಿನ ಪಯೋವ್ರತದಿಂದ (ಜಲಪ್ರಾಶನದಿಂದ) ಇರಬೇಕು.

೪೦. ಪ್ರಾಣಿಹಿಂಸಾಜನ್ಯವಾದ ಪಾಪವು ಮೇಲೆ ಹೇಳಿದ ವ್ರತಗಳಿಂದ ಪರಿಹಾರವಾಗುವುದು. ಕಳ್ಳತನದಿಂದ ಬಂದ ಪಾಪವು ಹೋಗುವ ಉತ್ತಮವಾದ ವ್ರತವನ್ನು ಹೇಳುತ್ತೇನೆ ಕೇಳು.

ಧಾನ್ಯಾನ್ನಧನಚೌರ್ಯಾಣಿ ಕೃತ್ವಾ ಕಾಮಾದ್ದ್ವಿಜೋತ್ತಮಃ ।
ಸಜಾತೀಯಗೃಹಾದೇವ ಕೃಚ್ಛ್ರಾರ್ಧೇನ ವಿಶುಧ್ಯತಿ ॥೪೧॥

ಮನುಷ್ಯಾಣಾಂ ತು ಹರಣೇ ಸ್ತ್ರೀಣಾಂ ಕ್ಷೇತ್ರಗೃಹಸ್ಯ ತು ।
ಕೂಪವಾಪೀಜಲಾನಾಂ ತು ಶುದ್ಧಿಶ್ಚಾಂದ್ರಾಯಣಂ ಸ್ಮೃತಂ ॥೪೨॥

ದ್ರವ್ಯಾಣಾಮಲ್ಪಸಾರಾಣಾಂ ಸ್ತೇಯಂ ಕೃತ್ವಾನ್ಯವೇಶ್ಮತಃ ।
ಚರೇತ್ಸಾಂತಪನಂ ಕೃಚ್ಛ್ರಂ ತನ್ನಿರ್ಯಾತ್ಯ ವಿಶುದ್ಧಯೇ ॥೪೩॥

ಭಕ್ಷ್ಯಭೋಜ್ಯಾಪಹರಣೇ ಯಾನಶಯ್ಯಾಸನಸ್ಯ ತು ।
ಪುಷ್ಪಮೂಲಫಲಾನಾಂ ತು ಪಂಚಗವ್ಯಂ ವಿಶೋಧನಂ ॥೪೪॥

---

೪೧. ಬ್ರಾಹ್ಮಣನು ಬ್ರಾಹ್ಮಣನ ಮನೆಯಲ್ಲಿ ಧಾನ್ಯ, ಅನ್ನ, ಧನ ಇವುಗಳನ್ನು ಉದ್ದೇಶಪೂರ್ವಕವಾಗಿ ಕದ್ದರೆ ಅರ್ಧ ಕೃಚ್ಛ್ರವನ್ನು ಮಾಡಿ ಪರಿಶುದ್ಧನಾಗಬೇಕು. (ಕೃಚ್ಛ್ರವೆಂದರೆ ಪ್ರಾಯಶ್ಚಿತ್ತ ವಿಶೇಷ. ಇದರ ಲಕ್ಷಣವನ್ನು ಹಿಂದೆ ಹೇಳಿದೆ.)

೪೨. ಮನುಷ್ಯರು, ಸ್ತ್ರೀಯರು, ಹೊಲ, ಮನೆ, ಬಾವಿ, ಕೊಳ, ನೀರು ಇವುಗಳನ್ನು ಅಪಹರಿಸಿದ ದೋಷವು ಚಾಂದ್ರಾಯಣವ್ರತದಿಂದ ಪರಿಹಾರವಾಗುವುದು.

೪೩. ಕಂಡವರ ಮನೆಯಿಂದ ಸ್ವಲ್ಪ ಬೆಲೆಯ ಅಲ್ಪವಸ್ತುಗಳನ್ನು ಕದ್ದವನು ಅವುಗಳನ್ನು ಒಡೆಯನಿಗೆ ಹಿಂದಕ್ಕೆ ಕೊಡುವುದಲ್ಲದೆ ಆ ಪಾಪದ ಪರಿಹಾರಕ್ಕಾಗಿ ಸಾಂತಪನ ಕೃಚ್ಛ್ರವನ್ನು ಮಾಡಬೇಕು. (ಪಂಚಗವ್ಯ ಪ್ರಾಶನವನ್ನು ಮಾಡಿ ಆ ದಿವಸ ಉಪವಾಸವಿರಬೇಕು. ಇದಕ್ಕೆ ಸಾಂತಪನಕೃಚ್ಛ್ರವೆಂದು ಹೆಸರು.)

೪೪. ಭಕ್ಷ್ಯಭೋಜ್ಯಗಳು, ವಾಹನ, ಹಾಸಿಗೆ, ಆಸನ, ಹೂ, ಗೆಣಸು, ಹಣ್ಣು ಇವುಗಳನ್ನು ಕದ್ದ ಪಾಪವು ಪಂಚಗವ್ಯಪ್ರಾಶನದಿಂದ ಪರಿಹಾರವಾಗುವುದು.

ತೃಣಕಾಷ್ಠದ್ರುಮಾಣಾಂ ತು ಶುಷ್ಕಾನ್ನಸ್ಯ ಗುಡಸ್ಯ ಚ ।
ಚೈಲಚರ್ಮಾಮಿಷಾಣಾಂ ತು ತ್ರಿರಾತ್ರಂ ಸ್ಯಾದಭೋಜನಂ ॥೪೫॥

ಮಣಿಮುಕ್ತಾಪ್ರವಾಲಾನಾಂ ತಾಮ್ರಸ್ಯ ರಜತಸ್ಯ ಚ ।
ಅಯಸ್ಕಾಂಸ್ಯೋಪಲಾನಾಂ ಚ ದ್ವಾದಶಾಹಂ ಕಣಾನ್ನಭುಕ್ ॥೪೬॥

ಕಾರ್ಪಾಸಕೀಟಜೋರ್ಣಾನಾಂ ದ್ವಿಶಫೈಕಶಫಸ್ಯ ಚ ।
ಪಕ್ಷಿಗಂಧೌಷಧೀನಾಂ ಚ ರಜ್ಜ್ವಾಶ್ಚೈವ ತ್ರ್ಯಹಂ ಪಯಃ ॥೪೭॥

ಏತೈರ್ವ್ರತೈರಪೋಹಂತಿ ಪಾಪಂ ಸ್ತೇಯಕೃತಂ ದ್ವಿಜಃ ।
ಅಗಮ್ಯಾಗಮನೀಯಂ ತು ವ್ರತೈರೇಭಿರಪಾನುದೇತ್ ॥೪೮॥

ಗುರುತಲ್ಪವ್ರತಂ ಕುರ್ಯಾದ್ರೇತಃ ಸಿಕ್ತ್ವಾ ಸ್ವಯೋನಿಷು ।
ಸಖ್ಯುಃ ಪುತ್ರಸ್ಯ ಚ ಸ್ತ್ರೀಷು ಕುಮಾರೀಷ್ವಂತ್ಯಜಾಸು ಚ ॥೪೯॥

---

೪೫. ಹುಲ್ಲು, ಸೌದೆ, ಮರ, ಒಣಗಿಸಿದ ಆಹಾರಪದಾರ್ಥ, ಬೆಲ್ಲ, ಬಟ್ಟೆ, ಚರ್ಮ, ಭೋಗ್ಯವಸ್ತುಗಳು ಇವುಗಳನ್ನು ಅಪಹಾರಮಾಡಿದವನು ಮೂರುದಿವಸ ಉಪವಾಸವಿದ್ದು ಆ ದೋಷವನ್ನು ಕಳೆದುಕೊಳ್ಳಬೇಕು.

೪೬. ಮಣಿ, ಮುತ್ತು, ಹವಳ, ತಾಮ್ರ, ಬೆಳ್ಳಿ, ಕಬ್ಬಿಣ, ಕಂಚು, ಕಲ್ಲು ಮುಂತಾದುವನ್ನು ಕದ್ದರೆ ಹನ್ನೆರಡು ದಿನ ಕಣಾನ್ನವನ್ನು (ನುಚ್ಚಕ್ಕಿಯ ಅನ್ನ) ಭಕ್ಷಿಸಬೇಕು.

೪೭. ಹತ್ತಿ, ರೇಶ್ಮೆ, ಉಣ್ಣೆ, ಗೊರಸುಸೀಳಿದ ಮತ್ತು ಸೀಳದ ಪ್ರಾಣಿಗಳು, ಪಕ್ಷಿಗಳು, ಗಂಧವಸ್ತುಗಳು, ಮೂಲಿಕೆಗಳು, ಹಗ್ಗ ಇವನ್ನು ಅಪಹರಿಸಿದವನು ಮೂರು ದಿನ ಜಲಪಾನವ್ರತದಲ್ಲಿ ಇರಬೇಕು.

೪೮. ಹಿಂದೆ ಹೇಳಿದ ವ್ರತಗಳನ್ನು ಮಾಡಿ ಬ್ರಾಹ್ಮಣನು ಕಳ್ಳತನದಿಂದ ಬಂದ ಪಾಪಗಳನ್ನು ಕಳೆದುಕೊಳ್ಳಬೇಕು. ಅಗಮ್ಯಾಗಮನದಿಂದ ಒದಗುವ ಪಾತಕಗಳನ್ನು ಈ ಮುಂದಿನ ವ್ರತಗಳಿಂದ ಪರಿಹರಿಸಿಕೊಳ್ಳಬಹುದು.

೪೯-೫೦. ಬಂಧುಸ್ತ್ರೀಯರಲ್ಲಿಯೂ ಪುತ್ರಮಿತ್ರರ ಸ್ತ್ರೀಯರಲ್ಲಿಯೂ ಕುಮಾರಿಯರಲ್ಲಿಯೂ ಪ್ರವೇಶಿಸಿ ರೇತಸ್ಸೇಚನವನ್ನು ಮಾಡಿದರೆ ಗುರುತಲ್ಪ

ಪಿತೃಷ್ವಸ್ರೀಯಭಗಿನೀಂ ಸ್ವಸ್ರೀಯಾಂ ಮಾತುರೇವ ಚ ।
ಮಾತುಶ್ಚ ಭ್ರಾತುರಾರ್ಯಾಯಾಂ ಗತ್ವಾ ಚಾಂದ್ರಾಯಣಂ ಚರೇತ್ ॥೫೦॥

ಏತಾಃ ಸ್ತ್ರಿಯಸ್ತು ಭಾರ್ಯಾರ್ಥೇ ನೋಪಗಚ್ಛೇತ್ತು ಬುದ್ಧಿಮಾನ್ ।
ಜ್ಞಾತೀನಾಂ ಚ ಸ್ತ್ರಿಯೋ ಯಾಸ್ತು ಪತಿತಾನುಗತಾಶ್ಚ ಯಾಃ ॥೫೧॥

ಅಮಾನುಷೀಷು ಪುರುಷೋ ಉದಕ್ಯಾಯಾಮಯೋನಿಷು ।
ರೇತಃ ಸಿಕ್ತ್ವಾ ಜಲೇ ಚೈವ ಕೃಚ್ಛ್ರಂ ಸಾಂತಪನಂ ಚರೇತ್ ॥೫೨॥

ಮೈಥುನಂ ಚ ಸಮಾಲೋಕ್ಯ ಪುಂಸಿ ಯೋಷಿತಿ ವಾ ದ್ವಿಜಃ ।
ಗೋಯಾನೇಽಪ್ಸು ದಿವಾ ಚೈವ ಸವಾಸಾಃ ಸ್ನಾನಮಾಚರೇತ್ ॥೫೩॥

---

ವ್ರತವನ್ನು ಆಚರಿಸಬೇಕು. ಸೋದರತ್ತೆಯ ಮಗಳು, ಸೋದರಿ, ಸೋದರಿಯ ಮಗಳು, ಚಿಕ್ಕಮ್ಮನ ಅಥವಾ ದೊಡ್ಡಮ್ಮನ ಮಗಳು, ಸೋದರಮಾವನ ಪತ್ನಿ ಮುಂತಾದವರಲ್ಲಿ ಸಂಗಮವನ್ನು ಮಾಡಿದರೆ ಚಾಂದ್ರಾಯಣವ್ರತವನ್ನು ನೆರವೇರಿಸಬೇಕು.

೫೧. ಮೇಲೆ ಹೇಳಿದ ಸ್ತ್ರೀಯರನ್ನೂ ಜ್ಞಾತಿಗಳ ಸ್ತ್ರೀಯರನ್ನೂ ಪತಿತನ ಆಶ್ರಯದಲ್ಲಿರುವ ಸ್ತ್ರೀಯರನ್ನೂ ಪ್ರಾಜ್ಞನಾದವನು ವಿವಾಹಮಾಡಿ ಕೊಳ್ಳಬಾರದು.

೫೨. ಮನುಷ್ಯೇತರ ಪ್ರಾಣಿಗಳಲ್ಲಿಯೂ, ರಜಸ್ವಲೆಯಲ್ಲಿಯೂ, ಅಸ್ಥಾನದಲ್ಲಿಯೂ, ನೀರಿನಲ್ಲಿಯೂ ರೇತಸ್ಸೇಚನವನ್ನು ಮಾಡಿದರೆ ಸಾಂತಪನಕೃಚ್ಛ್ರವನ್ನು ಆಚರಿಸಬೇಕು. ಎಂದರೆ ಪಂಚಗವ್ಯವನ್ನು ಪ್ರಾಶನಮಾಡಿ ಒಂದುದಿನ ಉಪವಾಸವಿರಬೇಕು.

೫೩. ಎತ್ತಿನ ಗಾಡಿಯಲ್ಲಿ, ನೀರಿನಲ್ಲಿ ಅಥವಾ ಹಗಲುಹೊತ್ತಿನಲ್ಲಿ ಸ್ತ್ರೀಪುರುಷರು ಸೇರಿರುವುದನ್ನು ನೋಡಿದರೆ ಬ್ರಾಹ್ಮಣನು ಕೂಡಲೆ ಉಟ್ಟಬಟ್ಟೆಯೊಡನೆ ಸ್ನಾನಮಾಡಬೇಕು.

ಚಾಂಡಾಲೀಂ ಚ ಸ್ತ್ರಿಯಂ ಗತ್ವಾ ಭುಕ್ತ್ವಾ ಚ ಪ್ರತಿಗೃಹ್ಯ ಚ ।
ಪತತ್ಯಜ್ಞಾನತೋ ವಿಪ್ರೋ ಜ್ಞಾನಾತ್ಸಾಮ್ಯಂ ತು ಗಚ್ಛತಿ ॥೫೪॥

ವಿಪ್ರದುಷ್ಟಾಂ ಸ್ತ್ರಿಯಂ ಭರ್ತಾ ನಿರುಂಧ್ಯಾದೇಕವೇಶ್ಮನಿ ।
ಯತ್ಪುಂಸಃ ಪರದಾರೇಷು ತಚ್ಚೈನಾಂ ಚಾರಯೇದ್ವ್ರತಂ ॥೫೫॥

ಸಾ ಚೇತ್ಪುನಃ ಪ್ರದುಷ್ಯೇತ್ತು ಸದೃಶೇನೋಪಮಂತ್ರಿತಾ ।
ಕೃಚ್ಛ್ರಂ ಚಾಂದ್ರಾಯಣಂ ಚೈವ ತತ್ತಸ್ಯಾಃ ಪಾವನಂ ಸ್ಮೃತಂ ॥೫೬॥

ಯಃ ಕರೋತ್ಯೇಕರಾತ್ರೇಣ ವೃಷಲೀಸೇವನಂ ದ್ವಿಜಃ ।
ತದ್ಭೈಕ್ಷ್ಯಭುಗ್ಜಪೇನ್ನಿತ್ಯಂ ತ್ರಿಭಿರ್ವರ್ಷೈರ್ವ್ಯಪೋಹತಿ ॥೫೭॥

---

೫೪. ಅಜ್ಞಾನವಶದಿಂದ ಚಂಡಾಲಸ್ತ್ರೀಯೊಡನೆ ಸೇರಲಿ, ಊಟಮಾಡಲಿ, ಅವಳಿಂದ ಉಪಭೋಗವಸ್ತುಗಳನ್ನು ಸ್ವೀಕರಿಸಲಿ ಬ್ರಾಹ್ಮಣನು ಪತಿತನಾಗುತ್ತಾನೆ. ಬುದ್ಧಿಪೂರ್ವಕವಾಗಿ ಮಾಡಿದರೆ ಚಂಡಾಲನಿಗೆ ಸಮಾನನೇ ಆಗುತ್ತಾನೆ.

೫೫. ಪತ್ನಿಯು ದುಷ್ಟಳಾದರೆ ಪತಿಯು ಅವಳನ್ನು ಒಂದು ಮನೆಯಲ್ಲಿ ನಿರ್ಬಂಧದಿಂದಿರಿಸಬೇಕು. ಪರಸ್ತ್ರೀಗಮನ ಮಾಡುವ ಪುರುಷನಿಗೆ ವಿಧಿಸಿರುವ ಪ್ರಾಯಶ್ಚಿತ್ತವನ್ನೇ ಅವಳಿಗೂ ಮಾಡಿಸಬೇಕು.

೫೬. ಅವಳು ತನ್ನಂತೆಯೇ ದುಷ್ಟಚರಿತ್ರನಾದ ಪರಪುರುಷನೊಡನೆ ಆಲೋಚನೆಮಾಡಿಕೊಂಡು ಮತ್ತೆ ದುರ್ಮಾರ್ಗಕ್ಕೆ ಬಿದ್ದರೆ ಅವಳಿಂದ ಚಾಂದ್ರಾಯಣಕೃಚ್ಛ್ರವನ್ನು (ಚಂದ್ರನ ಏರುತಗ್ಗುಗಳಿಗೆ ಅನುಸಾರವಾಗಿ ಆಹಾರದ ತುತ್ತುಗಳ ಸಂಖ್ಯೆಯಲ್ಲಿ ಹೆಚ್ಚುಕಡಿಮೆಮಾಡುತ್ತ ಅನುಸರಿಸುವ ವ್ರತವಿಶೇಷವನ್ನು) ಮಾಡಿಸಬೇಕು. ಅದರಿಂದ ಆಕೆ ಶುದ್ಧಳಾಗುವಳು.

೫೭. ಬ್ರಾಹ್ಮಣನು ಒಂದುರಾತ್ರಿ ಶೂದ್ರಸ್ತ್ರೀಸಂಗಮವನ್ನು ಮಾಡಿ ಅವಳು ಪಾಕಮಾಡಿದ ಭಕ್ಷ್ಯಭೋಜ್ಯಗಳನ್ನು ತಿಂದರೆ ಆ ದೋಷಪರಿಹಾರಕ್ಕಾಗಿ ಮೂರು ವರುಷಗಳ ಕಾಲ ಪ್ರತಿದಿನವೂ ಮಂತ್ರಜಪವನ್ನು ಮಾಡಬೇಕು.

ಏಷಾ ಪಾಪಕೃತಾಮುಕ್ತಾ ಚತುರ್ಣಾಮಪಿ ನಿಷ್ಕೃತಿಃ ।
ಪತಿತೈಃ ಸಂಪ್ರಯುಕ್ತಾನಾಮಿಮಾಂ ಶೃಣುತ ನಿಷ್ಕೃತಿಂ ॥೫೮॥

ಸಂವತ್ಸರೇಣ ಪತತಿ ಪತಿತೇನ ಸಹಾಚರನ್ ।
ಯಾಜನಾಧ್ಯಾಪನಾದ್ಯೌನಾದನುಯಾನಾಶನಾಸನಾತ್ ॥೫೯॥

ಯೋ ಯೇನ ಪತಿತೇನೈಷಾಂ ಸಂಸರ್ಗಂ ಯಾತಿ ಮಾನವಃ ।
ಸ ತಸ್ಯೈವ ವ್ರತಂ ಕುರ್ಯಾತ್ತತ್ಸಂಸರ್ಗವಿಶುದ್ಧಯೇ ॥೬೦॥

ಪತಿತಸ್ಯೋದಕಂ ಕಾರ್ಯಂ ಸಪಿಂಡೈರ್ಬಾಂಧವೈಃ ಸಹ ।
ನಿಂದಿತೇಽಹನಿ ಸಾಯಾಹ್ನೇ ಜ್ಞಾತಿಭಿರ್ಗುರುಸನ್ನಿಧೌ ॥೬೧॥

---

೫೮. ಪಾಪಮಾಡಿದ ನಾಲ್ಕುವರ್ಣದವರಿಗೂ ತಕ್ಕ ಪ್ರಾಯಶ್ಚಿತ್ತವನ್ನು ಹೇಳಿದುದಾಯಿತು. ಇನ್ನು ಮುಂದೆ ಪತಿತರೊಡನೆ ಸೇರಿದವರಿಗೆ ಆಗಬೇಕಾದ ಪ್ರಾಯಶ್ಚಿತ್ತವನ್ನು ಹೇಳುವೆನು ಕೇಳಿ.

೫೯. ಪತಿತನಿಗೆ ಯಾಗಮಾಡಿಸುವುದು, ವೇದವನ್ನು ಹೇಳಿಕೊಡುವುದು, ಅವನೊಡನೆ ವಿವಾಹಸಂಬಂಧವನ್ನು ಬೆಳಸುವುದು, ಸಂಚರಿಸುವುದು, ಊಟ ಮಾಡುವುದು, ಕುಳಿತುಕೊಳ್ಳುವುದು ಹೀಗೆ ಮಾಡುತ್ತಿದ್ದರೆ ಒಂದು ವರ್ಷದಲ್ಲಿ ತಾನೂ ಪತಿತನಾಗುತ್ತಾನೆ.

೬೦. ಹಿಂದೆ ಹೇಳಿದ ದೋಷಗಳಲ್ಲಿ ಯಾವುದರ ಸಂಸರ್ಗವು ಪತಿತನ ಸಹವಾಸದ ಮೂಲಕ ಸಂಭವಿಸುವುದೋ ಅದರ ಪರಿಹಾರಕ್ಕಾಗಿ ಅದಕ್ಕೆ ಸಂಬಂಧಪಟ್ಟ ಪ್ರಾಯಶ್ಚಿತ್ತವನ್ನೇ ಮಾಡಿಕೊಳ್ಳಬೇಕು.

೬೧. ಏಳುತಲೆಗೆ ಮೀರಿದ ದಾಯಾದಿಗಳು, ಬಾಂಧವರು, ಉಳಿದ ಜ್ಞಾತಿಗಳು ಇವರೆಲ್ಲರೂ ನಿಷಿದ್ಧದಿನದ ಸಾಯಂಕಾಲದ ವೇಳೆಯಲ್ಲಿ ಗುರುಹಿರಿಯರ ಮುಂದೆ ಪತಿತನಿಗೆ ತಿಲೋದಕವನ್ನು ಕೊಡಬೇಕು.

**ದಾಸೀ ಘಟಮಪಾಂ ಪೂರ್ಣಂ ಪರ್ಯಸ್ಯೇತ್ಪ್ರೇತವತ್ಸದಾ ।**
**ಅಹೋರಾತ್ರಮುಪಾಸೀರನ್ನಾಶೌಚಂ ಬಾಂಧವೈಃ ಸಹ ॥೬೨॥**

**ನಿವರ್ತಯೇರಂಸ್ತಸ್ಮಾತ್ತು ಸಂಭಾಷಣಸಹಾಸನಂ ।**
**ದಾಯಾದಸ್ಯ ಪ್ರಮಾಣಂ ಚ ಯಾತ್ರಾಮೇವಂ ಚ ಲೌಕಿಕೀಂ ॥೬೩॥**

**ಜ್ಯೇಷ್ಠಭಾವಾನ್ನಿವರ್ತೇತ ಜ್ಯೇಷ್ಠಾವಾಪ್ತಂ ಚಂ ಯತ್ಪುನಃ ।**
**ಜ್ಯೇಷ್ಠಾಂಶಂ ಪ್ರಾಪ್ನುಯಾಚ್ಚಾಸ್ಯ ಯವೀಯಾನ್ ಗುಣತೋಽಧಿಕಃ ॥೬೪॥**

**ಸ್ಥಾಪಿತಾಂ ಚಾಪಿ ಮರ್ಯಾದಾಂ ಯೇ ಭಿಂದ್ಯುಃ ಪಾಪಕರ್ಮಿಣಃ ।**
**ಸರ್ವೇ ಪೃಥಗ್ದಂಡನೀಯಾ ರಾಜ್ಞಾ ಪ್ರಥಮಸಾಹಸಂ ॥೬೫॥**

---

೬೨. ದಾಸಿಯ ಕೈಯಲ್ಲಿ ಒಂದು ಗಡಿಗೆ ತುಂಬ ನೀರು ತರಿಸಿ ಪ್ರೇತ ಕಾರ್ಯದಲ್ಲಿ ಮಾಡುವಂತೆ ಅದನ್ನು ಅಪ್ರದಕ್ಷಿಣವಾಗಿ ತಿರುಗಿಸಿ ಎತ್ತಿಹಾಕಿ ಒಡೆಯಬೇಕು. ಬಾಂಧವರೆಲ್ಲ ಒಂದು ಹಗಲೂ ರಾತ್ರಿ ಉಪವಾಸವಿರಬೇಕು. ಇದಕ್ಕೆ ಘಟಸ್ಫೋಟವೆಂದು ಹೆಸರು. ಇದಾದ ಬಳಿಕ ಪತಿತನನ್ನು ಪರಿಗ್ರಹಿಸ ಬಾರದು.

೬೩. ಅಷ್ಟೇ ಅಲ್ಲ; ಅವನೊಡನೆ ಸಂಭಾಷಣಮಾಡುವುದು, ಏಕಾಸನದಲ್ಲಿ ಕುಳಿತುಕೊಳ್ಳುವುದು, ಲೌಕಿಕವ್ಯವಹಾರವನ್ನು ನಡೆಸುವುದು, ಅವನಿಗೆ ದಾಯ ಭಾಗವನ್ನು ಕೊಡುವುದು ಇವೆಲ್ಲವನ್ನೂ ತ್ಯಜಿಸಬೇಕು.

೬೪. ಹೀಗೆ ಬಹಿಷ್ಕೃತನಾದ ಪತಿತನು ಜ್ಯೇಷ್ಠನಾಗಿದ್ದರೆ ಆ ಕಾರಣದಿಂದ ಅವನಿಗೆ ಸಹಜವಾಗಿ ಸಲ್ಲಬೇಕಾದ ಅಧಿಕಾರವಿಶೇಷಗಳನ್ನು ಅವನು ಬಿಟ್ಟು ಬಿಡಬೇಕು. ಆಸ್ತಿಯಲ್ಲಿ ಆ ಜ್ಯೇಷ್ಠನಿಗೆ ಸಲ್ಲುವ ವಿಶೇಷ ಭಾಗವನ್ನು ಗುಣಶಾಲಿ ಯಾದ ಆತನ ತಮ್ಮನು ಪಡೆಯುವನು.

೬೫. ರಾಜನು ಏರ್ಪಡಿಸಿದ ಧರ್ಮದ ಎಲ್ಲೆಗಟ್ಟುಗಳನ್ನು ಉಲ್ಲಂಘಿಸಿ ನಡೆಯುವ ಪ್ರತಿಯೊಬ್ಬನಿಗೂ ಒಂದನೆಯ ದರ್ಜೆಯ ಶಿಕ್ಷೆಯನ್ನು ನೂರು ಕಾರ್ಷಾಪಣ (ನಾಣ್ಯ ವಿಶೇಷ) ಗಳ ದಂಡವನ್ನು ವಿಧಿಸಬೇಕು.

ಶತಂ ಬ್ರಾಹ್ಮಣಮಾಕ್ರುಶ್ಯ ಕ್ಷತ್ರಿಯೋ ದಂಡಮರ್ಹತಿ ।
ವೈಶ್ಯಸ್ತು ದ್ವಿಶತಂ ರಾಜಞ್ಛೂದ್ರಸ್ತು ವಧಮರ್ಹತಿ ॥೬೬॥

ಪಂಚಾಶದ್ಬ್ರಾಹ್ಮಣೋ ದಂಡ್ಯಃ ಕ್ಷತ್ರಿಯಸ್ಯಾಭಿಶಂಸನೇ ।
ವೈಶ್ಯಸ್ಯಾಪ್ಯರ್ಧಪಂಚಾಶಚ್ಛೂದ್ರೇ ದ್ವಾದಶಕೋ ದಮಃ ॥೬೭॥

ಕ್ಷತ್ರಿಯಸ್ಯಾಪ್ನುಯಾದ್ವೈಶ್ಯಃ ಸಾಹಸಂ ಪುನರೇವ ಚ ।
ಶೂದ್ರಃ ಕ್ಷತ್ರಿಯಮಾಕ್ರುಶ್ಯ ಜಿಹ್ವಾಚ್ಛೇದಮವಾಪ್ನುಯಾತ್ ॥೬೮॥

ಪಂಚಾಶತ್ಕ್ಷತ್ರಿಯೋ ದಂಡ್ಯಸ್ತಥಾ ವೈಶ್ಯಾಭಿಶಂಸನೇ ।
ಶೂದ್ರೇ ಚೈವಾರ್ಧಪಂಚಾಶತ್ತಥಾ ಧರ್ಮೋ ನ ಹೀಯತೇ ॥೬೯॥

ವೈಶ್ಯಸ್ಯಾಕ್ರೋಶನೇ ದಂಡ್ಯಃ ಶೂದ್ರಶ್ಚೋತ್ತಮಸಾಹಸಂ ।
ಶೂದ್ರಾಕ್ರೋಶೇ ತಥಾ ವೈಶ್ಯಃ ಶತಾರ್ಧಂ ದಂಡಮರ್ಹತಿ ॥೭೦॥

---

೬೬. ಬ್ರಾಹ್ಮಣನನ್ನು ಬಯ್ದರೆ ಕ್ಷತ್ರಿಯನಿಗೆ ನೂರು ಹಣವನ್ನೂ ವೈಶ್ಯನಿಗೆ ಇನ್ನೂರು ಹಣವನ್ನೂ ದಂಡಹಾಕಬೇಕು. ಶೂದ್ರನಿಗಾದರೋ ಮರಣದಂಡನೆಯನ್ನು ವಿಧಿಸಬೇಕು.

೬೭. ಕ್ಷತ್ರಿಯನನ್ನೂ ವೈಶ್ಯನನ್ನೂ ಬಯ್ದರೆ ಬ್ರಾಹ್ಮಣನಿಗೆ ಕ್ರಮವಾಗಿ ಐವತ್ತು ಮತ್ತು ಇಪ್ಪತ್ತೈದು ಹಣಗಳನ್ನೂ, ಶೂದ್ರನನ್ನು ಬಯ್ದರೆ ಹನ್ನೆರಡು ಹಣಗಳನ್ನೂ ದಂಡವಾಗಿ ಹಾಕಬೇಕು.

೬೮. ಕ್ಷತ್ರಿಯನನ್ನು ನಿಂದಿಸಿದರೆ ವೈಶ್ಯನಿಗೆ ಒಂದು ನೂರು ಹಣವನ್ನು ದಂಡವಿಧಿಸಬೇಕು. ಶೂದ್ರನಿಗಾದರೋ ನಾಲಗೆಯನ್ನು ಕತ್ತರಿಸಬೇಕು.

೬೯. ಕ್ಷತ್ರಿಯನು ವೈಶ್ಯನನ್ನು ಬಯ್ದರೆ ಇಪ್ಪತ್ತೈದು ಹಣಗಳನ್ನು ದಂಡ ತೆರಬೇಕು. ಹೀಗೆ ಮಾಡಿದರೆ ಧರ್ಮಕ್ಕೆ ಲೋಪವು ಬಾರದು.

೭೦. ವೈಶ್ಯನನ್ನು ಬಯ್ದರೆ ಶೂದ್ರನಿಗೆ ಐನೂರಕ್ಕೆ ಮೇಲೆ ಒಂದು ಸಾವಿರ ಹೊನ್ನುಗಳ ವರೆಗೆ ದಂಡವನ್ನು ವಿಧಿಸಬೇಕು. ವೈಶ್ಯನು ಶೂದ್ರನನ್ನು ಬಯ್ದರೆ ಐವತ್ತು ಹೊನ್ನುಗಳ ದಂಡವನ್ನು ಕೊಡಬೇಕು.

ಸವರ್ಣಾಕ್ರೋಶನೇ ದಂಡ್ಯಸ್ತಥಾ ದ್ವಾದಶಕಂ ಸ್ಮೃತಂ ।
ವಾದೇಷ್ವವಚನೀಯೇಷು ತದೇವ ದ್ವಿಗುಣಂ ಭವೇತ್ ॥೭೧॥

ಏಕಜಾತಿರ್ದ್ವಿಜಾತಿಂ ತು ವಾಚಾ ದಾರುಣಯಾ ಕ್ಷಿಪನ್ ।
ಜಿಹ್ವಾಯಾಃ ಪ್ರಾಪ್ನುಯಾಚ್ಛೇದಂ ಜಘನ್ಯಃ ಪ್ರಥಮೋ ಹಿ ಸಃ ॥೭೨॥

ನಾಮಜಾತಿಗೃಹಂ ತೇಷಾಮಭಿದ್ರೋಹೇಣ ಕುರ್ವತಃ ।
ನಿಕ್ಷೇಪ್ಯೋಽಯೋಮಯಃ ಶಂಕುರ್ಜ್ವಲನ್ನಾಸ್ಯೇ ದಶಾಂಗುಲಃ ॥೭೩॥

ಧರ್ಮೋಪದೇಶೇ ಶೂದ್ರಸ್ಯ ದ್ವಿಜಾನಾಮಭಿಕುರ್ವತಃ ।
ತಪ್ತಮಾಸೇಚಯೇತ್ತೈಲಂ ವಕ್ತ್ರೇ ಶ್ರೋತ್ರೇ ಚ ಪಾರ್ಥಿವಃ ॥೭೪॥

ಶ್ರುತಿಂ ದೇಶಂ ಚ ಜಾತಿಂ ಚ ಕರ್ಮ ಶಾರೀರಮೇವ ಚ ।
ವಿತಥಂ ಚ ಬ್ರುವನ್ ದಂಡ್ಯೋ ರಾಜ್ಞಾ ದ್ವಿಗುಣಸಾಹಸಂ ॥೭೫॥

---

೭೧. ಸಮಾನವರ್ಣದವರನ್ನು ಬಯ್ದು ವ್ಯಥೆಪಡಿಸಿದರೆ ಹನ್ನೆರಡು ಹಣಗಳನ್ನೂ, ವಾದಗಳು ನಡೆಯುವಾಗ ಆಡಬಾರದ ನುಡಿಗಳನ್ನು ಉಪಯೋಗಿಸಿದರೆ ಇಪ್ಪತ್ತನಾಲ್ಕು ಹಣಗಳನ್ನೂ ದಂಡವಿಧಿಸಬೇಕು.

೭೨. ಶೂದ್ರನು ದ್ವಿಜನನ್ನು ಕ್ರೂರವಾದ ವಾಕ್ಯಗಳಿಂದ ನೋಯಿಸಿದರೆ ಅವನ ನಾಲಗೆಯನ್ನು ಛೇದಿಸಬೇಕು. ಏಕೆಂದರೆ ದ್ವಿಜನು ಶೂದ್ರನಿಗಿಂತಲೂ ವರ್ಣದಲ್ಲಿ ಮೇಲಾದವನು.

೭೩. ದ್ವಿಜರ ಹೆಸರು, ಜಾತಿ, ಮನೆತನ ಇವುಗಳನ್ನು ಹಿಡಿದು ಬಯ್ದರೆ ಶೂದ್ರನ ಬಾಯಿಯಲ್ಲಿ ಕೆಂಪಗೆ ಕಾದ ಹತ್ತಂಗಲ ಉದ್ದ ಕಬ್ಬಿಣದ ಸರಳನ್ನು ಇಡಬೇಕು.

೭೪. ಶೂದ್ರನು ದ್ವಿಜರಿಗೆ ಧರ್ಮೋಪದೇಶವನ್ನು ಮಾಡಬಂದರೆ ರಾಜನು ಅವನ ಬಾಯಿಗೂ ಕಿವಿಗಳಿಗೂ ಕುದಿಯುವ ಎಣ್ಣೆಯನ್ನು ಸುರಿಸಬೇಕು.

೭೫. ವೇದವನ್ನೂ, ಸ್ವದೇಶವನ್ನೂ, ಜಾತಿಯನ್ನೂ, ಧರ್ಮಾನುಸಾರವಾಗಿ ಮಾಡಬೇಕಾದ ಶಾರೀರಕರ್ಮವನ್ನೂ ನಿಷ್ಪ್ರಯೋಜನವೆಂದು ದೂಷಿಸತಕ್ಕವನಿಗೆ ರಾಜನು ಮೊದಲನೆಯ ದರ್ಜೆಯ ಶಿಕ್ಷೆಗೆ ಇಮ್ಮಡಿಯಾಗಿ ಎಂದರೆ ಎರಡುಸಾವಿರ ಕಾರ್ಷಾಪಣಗಳ ದಂಡವನ್ನು ವಿಧಿಸಬೇಕು.

ಯಸ್ತು ಪಾತಕಸಂಯುಕ್ತಃ ಕ್ಷಿಪೇದ್ವರ್ಣಾಂತರಂ ನರಃ ।
ಉತ್ತಮಂ ಸಾಹಸಂ ದಂಡಃ ಪಾತ್ಯಸ್ತಸ್ಮಿನ್ ಯಥಾಕ್ರಮಂ ॥೭೬॥

ರಾಜ್ಞೋ ನಿವೇಶನಿಯಮಂ ವಿತಥಂ ಯಾಂತಿ ವೈ ಮಿಥಃ ।
ಸರ್ವೇ ದ್ವಿಗುಣದಂಡ್ಯಾಸ್ತೇ ವಿಪ್ರಲಂಭಾನ್ನೃಪಸ್ಯ ತು ॥೭೭॥

ಪ್ರೀತ್ಯಾ ಮಯಾಸ್ಯಾಭಿಹಿತಂ ಪ್ರಮಾದೇನಾಥವಾ ವದೇತ್ ।
ಭೂಯೋ ನ ಚೈವಂ ವಕ್ಷ್ಯಾಮಿ ಸ ತು ದಂಡಾರ್ಧಭಾಗ್ಭವೇತ್ ॥೭೮॥

ಕಾಣಂ ವಾಪ್ಯಥವಾ ಖಂಜಮಂಧಂ ಚಾಪಿ ತಥಾವಿಧಂ ।
ತಥ್ಯೇನಾಪಿ ಬ್ರುವರ್ ದಾಪ್ಯೋ ದಂಡಂ ಕಾರ್ಷಾಪಣಂ ಧನಂ ॥೭೯॥

---

೭೬. ತಾನು ಸ್ವತಃ ಪಾತಕಿಯಾಗಿದ್ದುಕೊಂಡು ಬೇರೆ ವರ್ಣದವರನ್ನು ದೂಷಿಸುವವನಿಗೆ ಮೊದಲನೇ ದರ್ಜೆಯ ಶಿಕ್ಷೆಯನ್ನು—ಒಂದು ಸಾವಿರ ಕಾರ್ಷಾಪಣಗಳ ದಂಡವನ್ನು ವಿಧಿಸಬೇಕು.

೭೭. ಯಾವ ಯಾವ ಅಧಿಕಾರಿಗಳು ಒಟ್ಟುಗೂಡಿ ರಾಜನ ನಿಯಮಕ್ಕೆ ವಿರೋಧವನ್ನು ಮಾಡುತ್ತ ಅದರ ಉದ್ದೇಶವನ್ನು ಕೆಡಿಸುವರೋ ಅವರೆಲ್ಲರನ್ನೂ ಇಮ್ಮಡಿಯಾಗಿ ದಂಡಿಸಬೇಕು. ಏಕೆಂದರೆ ಅವರು ಪ್ರಭುವಿಗೆ ದ್ರೋಹವನ್ನು ಆಚರಿಸಿದವರು.

೭೮. “ ಅವನ ಮೇಲಣ ಪ್ರೀತಿಯಿಂದ ಹುಡುಗಾಟಕ್ಕಾಗಿ ನಾನು ನಿಂದಾ ವಾಕ್ಯವನ್ನು ಹೇಳಿದೆನು; ಏನೋ ತಿಳಿಯದೆ ಹೀಗೆ ಮಾಡಿಬಿಟ್ಟೆನು. ಇನ್ನು ಮುಂದೆ ಹೀಗೆ ಮತ್ತೆ ಹೇಳುವುದಿಲ್ಲ” ಎಂದು ಸತ್ಯಾಂಶವನ್ನು ಹೇಳಿ ತನ್ನ ತಪ್ಪನ್ನು ಒಪ್ಪಿಕೊಳ್ಳುವವನಿಗೆ ಅರ್ಧದಂಡವನ್ನು ವಿಧಿಸಬೇಕು.

೭೯. ಕುಂಟ, ಕುರುಡ ಮತ್ತು ಮೂಗರನ್ನು ಅವರು ಅಂತಹವರೆಂದು ತಿರಸ್ಕಾರದಿಂದ ನಿಜವನ್ನೇ ಹೇಳಿದರೂ ಅವನಿಗೆ ಒಂದು ಕಾರ್ಷಾಪಣದ ದಂಡವನ್ನು ಹಾಕಬೇಕು.

ಮಾತರಂ ಪಿತರಂ ಜ್ಯೇಷ್ಠಂ ಭ್ರಾತರಂ ಶ್ವಶುರಂ ಗುರುಂ।
ಆಕ್ರೋಶಯಂಶ್ಛತಂ ದಂಡ್ಯಃ ಪಂಥಾನಂ ಚಾದದದ್ಗುರೋಃ ॥೮೦॥

ಗುರುವರ್ಜ್ಯಂ ತು ಮಾನಾರ್ಹಂ ಯೋ ಹಿ ಮಾರ್ಗಂ ನ ಯಚ್ಛತಿ।
ಸ ದಾಪ್ಯಃ ಕೃಷ್ಣಲಂ ರಾಜ್ಞಾ ತಸ್ಯ ಪಾಪಸ್ಯ ಶಾಂತಯೇ ॥೮೧॥

ಏಕಜಾತಿರ್ದ್ವಿಜಾತಿಂ ತು ಯೇನಾಂಗೇನಾಪರಾಧ್ನುಯಾತ್
ತದೇವ ಚ್ಛೇದಯೇತ್ತಸ್ಯ ಕ್ಷಿಪ್ರಮೇವಾವಿಚಾರಯನ್ ॥೮೨॥

ಅವನಿಷ್ಠೀವತೋ ದರ್ಪಾದ್ದ್ವಾವೋಷ್ಠೌ ಚ್ಛೇದಯೇನ್ನೃಪಃ।
ಅವಮೂತ್ರಯತೋ ಮೇಢ್ರಮುಪಶಬ್ದಯತೋ ಗುದಂ ॥೮೩॥

ಸಹಾಸನಮಭಿಪ್ರೇಪ್ಸುರುತ್ಕೃಷ್ಟಸ್ಯಾಪಕೃಷ್ಟಜಃ।
ಕಟ್ಯಾಂ ಕೃತಾಂಕೋ ನಿರ್ವಾಸ್ಯಃ ಸ್ಫಿಚಂ ವಾಪ್ಯಸ್ಯ ಕರ್ತಯೇತ್ ॥೮೪॥

---

೮೦. ತಾಯಿ, ತಂದೆ, ಅಣ್ಣ, ಮಾವ, ಗುರು ಇವರನ್ನು ಬಯ್ಯುತಕ್ಕವನೂ, ಗುರುವು ಸಂಚರಿಸುವ ದಾರಿಯನ್ನು ಹಳ್ಳಕೊಳ್ಳಗಳಿಂದಲೂ ಕಲ್ಲುಮುಳ್ಳುಗಳಿಂದಲೂ ಅಡ್ಡಿಪಡಿಸುವವನೂ ನೂರು ಹೊನ್ನುಗಳ ದಂಡವನ್ನು ತೆರಬೇಕು.

೮೧. ತಾನು ಪಕ್ಕಕ್ಕೆ ಸರಿದುನಿಂತು ಪೂಜಾರ್ಹನಾದ ಗುರುವಿಗೆ ಮಾರ್ಗವನ್ನು ಬಿಟ್ಟುಕೊಡದಾತನಿಗೆ ಒಂದು ಕೃಷ್ಣಲವನ್ನು (ಗುಲಗಂಜಿ ತೂಕದ ಸುವರ್ಣವನ್ನು) ದಂಡವಾಗಿ ವಿಧಿಸಬೇಕು.

೮೨-೮೩. ಶೂದ್ರನು ಮೇಲಿನ ಮೂರು ವರ್ಣದವರಿಗೆ ತನ್ನ ಯಾವ ಅಂಗದಿಂದ ಅಪಚಾರವನ್ನು ಮಾಡುವನೋ ಆ ಅಂಗವನ್ನು ಒಡನೆ ಕತ್ತರಿಸಿ ಹಾಕಬೇಕು. ವಿಚಾರಮಾಡಬೇಕಾಗಿಯೇ ಇಲ್ಲ. ದರ್ಪದಿಂದ ದ್ವಿಜರಮೇಲೆ ಉಗುಳಿದರೆ ಅವನ ತುಟಿಗಳನ್ನೂ, ಮೂತ್ರೋತ್ಸರ್ಜನಮಾಡಿದರೆ ಶಿಶ್ನವನ್ನೂ ಅಪಾನವಾಯುವನ್ನು ಬಿಟ್ಟರೆ ಗುದವನ್ನೂ ಛೇದಿಸಬೇಕು.

೮೪. ಉತ್ತಮವರ್ಣದವನೊಡನೆ ನೀಚವರ್ಣದವನು ಏಕಾಸನದಲ್ಲಿ ಕುಳಿತುಕೊಳ್ಳಲು ಹೋದರೆ ಅವನ ಸೊಂಟದ ಮೇಲೆ ಬರೆಹಾಕಿ ಓಡಿಸಬೇಕು. ಇಲ್ಲವೇ ಅವನ ಪೃಷ್ಠವನ್ನು ಛೇದಿಸಬೇಕು.

**ಕೇಶೇಷು ಗೃಹ್ಣತೋ ಹಸ್ತಂ ಛೇದಯೇದವಿಚಾರಯನ್ ।**
**ಪಾದಯೋರ್ನಾಸಿಕಾಯಾಂ ಚ ಗ್ರೀವಾಯಾಂ ವೃಷಣೇಷು ಚ ॥೮೫॥**

**ತ್ವಗ್ಭೇದಕಃ ಶತಂ ದಂಡ್ಯೋ ಲೋಹಿತಸ್ಯ ಚ ದರ್ಶಕಃ ।**
**ಮಾಂಸಭೇತ್ತಾ ಚ ಷಣ್ಣಿಷ್ಕಾನ್ನಿರ್ವಾಸ್ಯಸ್ತ್ವಸ್ಥಿಭೇದಕಃ ॥೮೬॥**

**ಅಂಗಭಂಗಕರಸ್ಯಾಂಗಂ ತದೇವಾಪಹರೇನ್ನೃಪಃ ।**
**ದಂಡಪಾರುಷ್ಯಕೃದ್ದಂಡ್ಯಃ ಸಮುತ್ಥಾನವ್ಯಯಂ ತಥಾ ॥೮೭॥**

**ಅರ್ಧಪಾದಕರಃ ಕಾರ್ಯೋ ಗೋಗಜಾಶ್ವೋಷ್ಟ್ರಘಾತಕಃ ।**
**ಪಶುಕ್ಷುದ್ರಮೃಗಾಣಾಂ ಚ ಹಿಂಸಾಯಾಂ ದ್ವಿಗುಣೋ ದಮಃ ॥೮೮॥**

---

೮೫. ಕೂದಲು, ಕಾಲು, ಮೂಗು, ಕುತ್ತಿಗೆ, ವೃಷಣ ಇವುಗಳನ್ನು ಹಿಡಿದುಕೊಂಡು ಆಕ್ರಮಣಮಾಡಲು ಬಂದರೆ ಅವನ ಕೈಯನ್ನು ಕತ್ತರಿಸಬೇಕು.

೮೬. ಚರ್ಮವನ್ನು ಎಬ್ಬಿಸಿದರೂ, ರಕ್ತವನ್ನು ಬರಿಸಿದರೂ ಅವನಿಗೆ ನೂರು ದುಡ್ಡುಗಳ ದಂಡವನ್ನು ಹೊರಿಸಬೇಕು. ಮಾಂಸವನ್ನು ಛೇದಿಸಿದಾತನಿಗೆ ಆರು ಹಣಗಳ ದಂಡವನ್ನು ವಿಧಿಸಬೇಕು. ಮೂಳೆ ಮುರಿದವನನ್ನು ಗ್ರಾಮದಿಂದ ಹೊರಡಿಸಬೇಕು.

೮೭. ಯಾವುದಾದರೂ ಅಂಗವನ್ನು ಊನಪಡಿಸಿದವನಿಗೆ ಅದೇ ಅಂಗವನ್ನು ಕೆಡಿಸಬೇಕು. ಪ್ರಹಾರದಿಂದಲೂ ನಿಷ್ಠುರವಚನದಿಂದಲೂ ನಿಷ್ಕಾರಣವಾಗಿ ಮನವನ್ನು ನೋಯಿಸಿದ ಅಧಿಕಾರಿಯ ಅಧಿಕಾರವನ್ನು ತಪ್ಪಿಸಬೇಕು.

೮೮. ಹಸು, ಆನೆ, ಒಂಟೆ ಇವುಗಳನ್ನು ಕೊಂದರೆ ಅಪರಾಧಿಯ ಕೈಕಾಲುಗಳನ್ನು ಅರ್ಧ ಕತ್ತರಿಸಬೇಕು. ಪಶುಗಳನ್ನೂ ತೊಂದರೆಕೊಡದಿರುವ ಕ್ಷುದ್ರಮೃಗಗಳನ್ನೂ ಹಿಂಸೆಪಡಿಸಿದರೆ ಎರಡನೆಯ ದರ್ಜೆಯ ಶಿಕ್ಷೆಯನ್ನು—ಐದುನೂರು ಕಾರ್ಷಾಪಣಗಳ ದಂಡವನ್ನು ವಿಧಿಸಬೇಕು.

**ಪಂಚಾಶಚ್ಚ ಭವೇದ್ದಂಡ್ಯಸ್ತಥೈವ ಮೃಗಪಕ್ಷಿಷು ।**
**ಕೃಮಿಕೀಟೇಷು ದಂಡ್ಯಃ ಸ್ಯಾದ್ರಜತಸ್ಯ ಚ ಮಾಷಕಂ ॥೮೯॥**

**ತಸ್ಯಾನುರೂಪಂ ಮೂಲ್ಯಂ ಚ ಪ್ರದದ್ಯಾತ್ಸ್ವಾಮಿನೇ ತಥಾ ।**
**ಸ್ವಸ್ವಾಮಿಕಾನಾಂ ಸಕಲಂ ಶೇಷಾಣಾಂ ದಂಡಮೇವ ತು ॥೯೦॥**

**ವೃಕ್ಷಂ ತು ಸಫಲಂ ಛಿತ್ವಾ ಸುವರ್ಣಂ ದಂಡಮರ್ಹತಿ ।**
**ದ್ವಿಗುಣಂ ದಂಡಯೇಚ್ಚೈನಂ ಪಥಿ ಸೀಮ್ನಿ ಜಲಾಶಯೇ ॥೯೧॥**

**ಛೇದನಾದಫಲಸ್ಯಾಪಿ ಮಧ್ಯಮಂ ಸಾಹಸಂ ಸ್ಮೃತಂ ।**
**ಗುಲ್ಮವಲ್ಲೀಲತಾನಾಂ ಚ ಸುವರ್ಣಸ್ಯ ಚ ಮಾಷಕಂ ॥೯೨॥**

---

೮೯-೯೦. ದೊಡ್ಡ ಮೃಗಗಳನ್ನೂ ಪಕ್ಷಿಗಳನ್ನೂ ಹೊಡೆದುಹಾಕಿದವನಿಗೆ ಐವತ್ತು ಕಾರ್ಷಾಪಣಗಳ ದಂಡವನ್ನು ಹೊರಿಸಬೇಕು. ಕ್ರಿಮಿಕೀಟಗಳನ್ನು ಉದ್ದೇಶಪೂರ್ವಕವಾಗಿ ಕೊಂದರೆ ಐದು ಗುಲಗಂಜಿ ತೂಕದ ಮಾಷಕವೆಂಬ ಬೆಳ್ಳಿಯ ನಾಣ್ಯವನ್ನು ದಂಡ ಹಾಕಬೇಕು. ಕೊಂದ ಪ್ರಾಣಿಗಳ ಯಜಮಾನನಿಗೆ ಅವುಗಳ ಬೆಲೆಯನ್ನು ಕೊಡಿಸಬೇಕು. ಶಿಕ್ಷಾರೂಪವಾಗಿ ವಿಧಿಸಿದ ದಂಡದ ಹಣವು ರಾಜನಿಗೆ ಸಲ್ಲಬೇಕು.

೯೧-೯೨. ಫಲವೃಕ್ಷವನ್ನು ಕಡಿದವನು ಎಂಬತ್ತು ಗುಲಗಂಜಿ ತೂಕದ ಸುವರ್ಣನಾಣ್ಯವನ್ನು ದಂಡತೆರಬೇಕು. ಆ ವೃಕ್ಷವು ಮಾರ್ಗದ ಪಕ್ಕದಲ್ಲಿಯೂ, ಎಲ್ಲೆಗಟ್ಟಿನಲ್ಲಿಯೂ ಕೆರೆಕಟ್ಟೆಗಳ ಸಮೀಪದಲ್ಲಿಯೂ ಇದ್ದರೆ ಶಿಕ್ಷೆಯು ಇದರ ಇಮ್ಮಡಿಯಾಗಬೇಕು. ಇಂತಹ ಕಡೆಗಳಲ್ಲಿ ಬೆಳೆದಿರುವ ಮರಗಳನ್ನು, ಅವು ಹಣ್ಣು ಬಿಡದಿದ್ದರೂ ಸರಿಯೇ ಕತ್ತರಿಸಬಾರದು. ಕತ್ತರಿಸಿದರೆ ಎರಡನೆಯ ದರ್ಜೆಯ ದಂಡವನ್ನು (ನೂರು ಕಾರ್ಷಾಪಣಗಳ ಮೇಲೆ ಐನೂರರ ಒಳಗೆ) ವಿಧಿಸಬೇಕು. ತನಗೆ ಸಂಬಂಧಪಡದ ಗಿಡಬಳ್ಳಿಗಳನ್ನೂ ಪೊದೆಗಳನ್ನೂ ಕಡಿದವನಿಂದ ಐದು ಗುಲಗಂಜಿ ತೂಕದ ಚಿನ್ನವನ್ನು ದಂಡವಾಗಿ ತೆಗೆದುಕೊಳ್ಳಬೇಕು.

**ವೃಥಾಚ್ಛೇದೀ ತೃಣಸ್ಯಾಪಿ ದಂಡ್ಯಃ ಕಾರ್ಷಾಪಣಂ ಭವೇತ್ ।**
**ತ್ರಿಭಾಗಂ ಕೃಷ್ಣಲಾ ದಂಡ್ಯಾಃ ಪ್ರಾಣಿನಸ್ತಾಡನೇ ತಥಾ ॥೯೩॥**

**ದೇಶಕಾಲಾನುಸಾರೇಣ ಮೂಲ್ಯಂ ರಾಜಾ ದ್ರುಮಾದಿಷು ।**
**ತತ್ಸ್ವಾಮಿನಸ್ತಥಾ ದದ್ಯಾದ್ದಂಡಮುಕ್ತಂ ತು ಪಾರ್ಥಿವ ॥೯೪॥**

**ಯತ್ರಾತಿವರ್ತತೇ ಯುಗ್ಯಂ ವೈಗುಣ್ಯಾತ್ಪ್ರಾಜಕಸ್ಯ ತು ।**
**ತತ್ರ ಸ್ವಾಮೀ ಭವೇದ್ದಂಡ್ಯೋ ನಾಪ್ತಶ್ಚೇತ್ಪ್ರಾಜಕೋ ಭವೇತ್ ॥೯೫॥**

**ಪ್ರಾಜಕಶ್ಚ ಭವೇದಾಪ್ತಃ ಪ್ರಾಜಕೋ ದಂಡಮರ್ಹತಿ ।**
**ನಾಸ್ತಿ ದಂಡಶ್ಚ ತಸ್ಯಾಪಿ ತಥಾ ವೈ ಹೇತುಕಲ್ಪಕಃ ॥೯೬॥**

---

೯೩. ನಿಷ್ಪ್ರಯೋಜನವಾಗಿ ಒಂದು ಹುಲ್ಲುಕಡ್ಡಿಯನ್ನು ಕೂಡ ಕೀಳಬಾರದು. ಹಾಗೆ ಮಾಡಿದವನು ಒಂದು ಕಾರ್ಷಾಪಣವನ್ನು ದಂಡಕೊಡಬೇಕು. ಹೀಗೆಯೇ ಪ್ರಾಣಿಗಳನ್ನು ಹೊಡೆದು ಬಡಿದು ಹಿಂಸಿಸುವವನಿಂದ ಮೂರು ಕೃಷ್ಣಲಗಳನ್ನು (ಬೆಳ್ಳಿಯ ನಾಣ್ಯ) ದಂಡರೂಪವಾಗಿ ತೆಗೆದುಕೊಳ್ಳಬೇಕು.

೯೪. ಇತರರ ಮರ ಮೊದಲಾದವುಗಳನ್ನು ಕಡಿದರೆ, ದೇಶಕಾಲಗಳಿಗೆ ಅನುಸಾರವಾಗಿ ಅವುಗಳ ಬೆಲೆಯನ್ನು ಗೊತ್ತುಮಾಡಿ ಅದನ್ನು ಪದಾರ್ಥದ ಒಡೆಯನಿಗೆ ಕೊಡಿಸಬೇಕು. ಓ ಮನುಚಕ್ರವರ್ತೀ, ಇದಲ್ಲದೆ ಅಪರಾಧಿಗೆ ಶಾಸ್ತ್ರದಲ್ಲಿ ಹೇಳಿರುವಂತೆ ಶಿಕ್ಷೆಯನ್ನೂ ವಿಧಿಸಬೇಕು.

೯೫. ಗಾಡಿನಡೆಸುವವನು ಅತ್ತಿತ್ತ ಹೋಗಿರುವಾಗ ಎತ್ತುಗಳು ದಾರಿ ತಪ್ಪಿನಡೆದು ಅದರಿಂದ ಅನಾಹುತವು ಸಂಭವಿಸಿದರೆ, ಗಾಡಿಯ ಯಜಮಾನನು ದೇಶಕಾಲಾನುಗುಣವಾದ ಶಿಕ್ಷೆಗೆ ಒಳಗಾಗುವನು.

೯೬. ನಡೆಸುವವನು ಎದುರಿಗೆ ಇದ್ದು ಅನರ್ಥವು ಸಂಭವಿಸಿದರೆ ಅವನಿಗೇ ಶಿಕ್ಷೆಯನ್ನು ಕೊಡಬೇಕು. ಆದರೆ ಅನಾಹುತವು ಸಂಭವಿಸುವುದಕ್ಕೆ ಅವನು ಯಾವ ವಿಧದಲ್ಲಿಯೂ ಕಾರಣವಲ್ಲದಿದ್ದರೆ ಅವನಿಗೆ ಶಿಕ್ಷೆಯಿಲ್ಲ.

ದ್ರವ್ಯಾಣಿ ಯೋ ಹರೇದ್ಯಸ್ಯ ಜಾನತೋಽಜಾನತೋಽಪಿ ವಾ ।
ಸ ತಸ್ಯೋತ್ಪಾದಯೇತ್ತುಷ್ಟಿಂ ರಾಜ್ಞೇ ದದ್ಯಾತ್ತತೋ ದಮಂ ॥೯೭॥

ಯಸ್ತು ರಜ್ಜುಂ ಘಟಂ ಕೂಪಾದ್ಧರೇದ್ಭಿಂದ್ಯಾಚ್ಚ ತಾಂ ಪ್ರಪಾಂ ।
ಸ ದಂಡಂ ಪ್ರಾಪ್ನುಯಾನ್ಮಾಷಂ ತಚ್ಚ ಸಂಪ್ರತಿಪಾದಯೇತ್ ॥೯೮॥

ಧಾನ್ಯಂ ದಶಭ್ಯಃ ಕುಂಭೇಭ್ಯೋ ಹರತೋಽಭ್ಯಧಿಕಂ ವಧಃ
ಶೇಷೇಽಪ್ಯೇಕಾದಶಗುಣಂ ತಸ್ಯ ದಂಡಂ ಪ್ರಕಲ್ಪಯೇತ್ ॥೯೯॥

ತಥಾ ಭಕ್ಷ್ಯಾನ್ನಪಾನಾನಾಂ ನ ತಥಾಪ್ಯಧಿಕೇ ವಧಃ ।
ಸುವರ್ಣರಜತಾದೀನಾಮುತ್ತಮಾನಾಂ ಚ ವಾಸಸಾಂ ॥೧೦೦॥

---

೯೭. ಮತ್ತೊಬ್ಬನ ಪದಾರ್ಥಗಳನ್ನು ಅವನಿಗೆ ತಿಳಿದೋ ತಿಳಿಯದೆಯೋ ಅಪಹರಿಸಿದವನು ಆ ಪದಾರ್ಥಗಳನ್ನೋ ಅಥವಾ ಅವುಗಳ ಬೆಲೆಯನ್ನೋ ಕೊಡುವುದರ ಮೂಲಕ ಒಡೆಯನಿಗೆ ಸಮಾಧಾನವನ್ನು ಉಂಟುಮಾಡಬೇಕು. ಬಳಿಕ ತಾನು ಮಾಡಿದ ತಪ್ಪಿಗಾಗಿ ರಾಜನಿಗೆ ದಂಡವನ್ನೂ ತೆರಬೇಕು.

೯೮. ಪ್ರಯಾಣಿಕರು ಬಾವಿಯಲ್ಲಿ ನೀರುಸೇದಿ ಕುಡಿಯಲೆಂದು ಅರವಟ್ಟಿಗೆಗಳಲ್ಲಿ ಇಟ್ಟಿರುವ ಸೇದುವ ಹಗ್ಗ, ಬಿಂದಿಗೆ ಮುಂತಾದುವನ್ನು ಅಪಹರಿಸುವುದು, ಅಥವಾ ಆ ಅರವಟ್ಟಿಗೆಗೆ ಅಪಾಯವನ್ನು ಉಂಟುಮಾಡುವುದು ಇಂತಹ ಅಪರಾಧಗಳನ್ನು ಮಾಡಿದವನು ತನ್ನಿಂದ ಆದ ನಷ್ಟವನ್ನು ಸರಿಪಡಿಸುವುದು ಮಾತ್ರವಲ್ಲದೆ, ಐದು ಗುಲಗಂಜಿ ತೂಕದ ಚಿನ್ನದ ನಾಣ್ಯವನ್ನು ರಾಜನಿಗೆ ದಂಡ ಕೊಡಬೇಕು.

೯೯. ಹತ್ತು ಗಡಿಗೆಗಳಿಗಿಂತ ಹೆಚ್ಚಾಗಿ ಧಾನ್ಯವನ್ನು ಕದ್ದರೆ ಅವನಿಗೆ ಮರಣದಂಡನೆಯನ್ನು ವಿಧಿಸಬೇಕು. ಇದಕ್ಕಿಂತ ಕಡಿಮೆಯಾಗಿ ಕದ್ದ ಸಂದರ್ಭದಲ್ಲಿ ಅವನು ಕದ್ದುದಕ್ಕಿಂತ ಹನ್ನೊಂದುಪಾಲು ಅಧಿಕವಾದ ಧಾನ್ಯವನ್ನು ಅವನಿಂದ ತೆಗೆದುಕೊಳ್ಳಬೇಕು. ಇದೇ ಅವನಿಗೆ ಶಿಕ್ಷೆ.

೧೦೦-೧೦೧. ಭಕ್ಷ್ಯ, ಅನ್ನ ಮತ್ತು ಪಾನವಸ್ತುಗಳನ್ನು ಹೆಚ್ಚಾಗಿ ಕದ್ದರೂ ವಧಿಸಬಾರದು. ಚಿನ್ನ ಬೆಳ್ಳಿಯನ್ನೂ, ಬೆಲೆಬಾಳುವ ಬಟ್ಟೆಗಳನ್ನೂ, ಸದ್ವಂಶಜರಾದ

ಪುರುಷಾಣಾಂ ಕುಲೀನಾನಾಂ ನಾರೀಣಾಂ ಚ ವಿಶೇಷತಃ ।
ಮಹಾಪಶೂನಾಂ ಹರಣೇ ಶಸ್ತ್ರಾಣಾಮೌಷಧಸ್ಯ ಚ ॥೧೦೧॥

ಮುಖ್ಯಾನಾಂ ಚೈವ ರತ್ನಾನಾಂ ಹರಣೇ ವಧಮರ್ಹತಿ ।
ದಧ್ನಃ ಕ್ಷೀರಸ್ಯ ತಕ್ರಸ್ಯ ಪಾನೀಯಸ್ಯ ರಸಸ್ಯ ಚ ॥೧೦೨॥

ವೇಣುವೈದಲಭಾಂಡಾನಾಂ ಲವಣಾನಾಂ ತಥೈವ ಚ ।
ಮೃನ್ಮಯಾನಾಂ ಚ ಸರ್ವೇಷಾಂ ಮೃದೋ ಭಸ್ಮನ ಏವ ಚ । ॥೧೦೩॥

ಕಾಲಮಾಸಾದ್ಯ ಕಾರ್ಯಂ ಚ ರಾಜಾ ದಂಡಂ ಪ್ರಕಲ್ಪಯೇತ್ ।
ಗೋಷು ಬ್ರಾಹ್ಮಣಸಂಸ್ಥಾಸು ಮಹಿಷೀಷು ತಥೈವ ಚ ॥೧೦೪॥

ಅಶ್ವಾಪಹಾರಕಶ್ಚೈವ ಸದ್ಯಃ ಕಾರ್ಯೋಽರ್ಧಪಾದಕಃ ।
ಸೂತ್ರಕಾರ್ಪಾಸಕಿಣ್ವಾನಾಂ ಗೋಮಯಸ್ಯ ಗುಡಸ್ಯ ಚ ॥೧೦೫॥

ಮತ್ಸ್ಯಾನಾಂ ಪಕ್ಷಿಣಾಂ ಚೈವ ತೈಲಸ್ಯ ಚ ಘೃತಸ್ಯ ಚ ।
ಮಾಂಸಸ್ಯ ಮಧುನಶ್ಚೈವ ಯಚ್ಚಾನ್ಯತ್ಪಶುಸಂಭವಂ ॥೧೦೬॥

---

ಪುರುಷರನ್ನೂ, ಅದರಲ್ಲೂ ಸ್ತ್ರೀಯರನ್ನೂ, ಉತ್ತಮವಾದ ಪಶುಗಳನ್ನೂ, ಶಸ್ತ್ರಗಳನ್ನೂ, ಔಷಧಗಳನ್ನೂ, ಶ್ರೇಷ್ಠವಾದ ರತ್ನಗಳನ್ನೂ ಅಪಹರಿಸಿದವನು ವಧೆಗೆ ಗುರಿಯಾಗುವನು.

೧೦೨-೧೦೩. ಮೊಸರು, ಹಾಲು, ಮಜ್ಜಿಗೆ, ಪಾನಕ, ರಸದ್ರವ್ಯ, ಬಿದಿರಿನ ಅಂಡೆ, ಮೊರ ಮುಂತಾದ ಸಾಮಾನುಗಳು, ಉಪ್ಪು, ಎಲ್ಲಬಗೆಯ ಮಣ್ಣಿನ ಪದಾರ್ಥಗಳು ಮಣ್ಣು, ಬೂದಿ ಇವುಗಳನ್ನು ಕದ್ದರೆ ರಾಜನು ಸಮಯಾನುಸಾರವಾಗಿ ಶಿಕ್ಷೆಯನ್ನು ವಿಧಿಸಬೇಕು.

೧೦೪-೧೦೬. ಬ್ರಾಹ್ಮಣನ ಮನೆಯಲ್ಲಿ ಹಸು, ಎಮ್ಮೆ, ಕುದುರೆ ಇವನ್ನು ಕದ್ದರೆ ಕೂಡಲೆ ಅವನ ಕಾಲನ್ನು ಮುರಿಯಬೇಕು. ದಾರ, ಹತ್ತಿ, ಮಾದಕದ್ರವ್ಯ, ಸಗಣಿ, ಬೆಲ್ಲ, ಮೀನು, ಪಕ್ಷಿ, ಎಣ್ಣೆ, ತುಪ್ಪ, ಮಾಂಸ, ಜೇನು, ಉಪ್ಪು

**ಅನ್ಯೇಷಾಂ ಲವಣಾದೀನಾಂ ಮದ್ಯಾನಾಮೋದನಸ್ಯ ಚ ।**
**ಪಕ್ವಾನ್ನಾನಾಂ ಚ ಸರ್ವೇಷಾಂ ತನ್ಮೂಲಾದ್ದ್ವಿಗುಣೋ ದಮಃ ॥೧೦೭॥**

**ಪುಷ್ಪೇಷು ಹರಿತೇ ಧಾನ್ಯೇ ಗುಲ್ಮವಲ್ಲೀಲತಾಸು ಚ ।**
**ಅನ್ನೇಷು ಪರಿಪೂರ್ಣೇಷು ದಂಡಃ ಸ್ಯಾತ್ಪಂಚಮಾಷಕಃ ।**
**ಪರಿಪೂರ್ಣೇಷು ಧಾನ್ಯೇಷು ಶಾಕಮೂಲಫಲೇಷು ಚ ॥೧೦೮॥**

**ನಿರನ್ವಯೇ ಶತಂ ದಂಡ್ಯಃ ಸಾನ್ವಯೇ ದ್ವಿಶತಂ ದಮಃ ।**
**ಯೇನ ಯೇನ ಯಥಾಂಗೇನ ಸ್ತೇನೋಽನ್ಯೇಷು ವಿಚೇಷ್ಟತೇ ॥೧೦೯॥**

**ತತ್ತದೇವ ಹರೇತ್ತಸ್ಯ ಪ್ರತ್ಯಾದೇಶಾಯ ಪಾರ್ಥಿವಃ ।**
**ದ್ವಿಜೋಽಧ್ವಗಃ ಕ್ಷೀಣವೃತ್ತಿರ್ದ್ವಾವಿಕ್ಷೂ ದ್ವೇ ಚ ಮೂಲಿಕೇ ॥೧೧೦॥**

---

ಮೊದಲಾದ ಉಳಿದ ವಸ್ತುಗಳು ಮದ್ಯ, ಅನ್ನ ಆಹಾರಯೋಗ್ಯವಾದ ಎಲ್ಲಬಗೆಯ ಪಕ್ವಪದಾರ್ಥಗಳು ಇವುಗಳನ್ನು ಕದ್ದರೆ ಇವುಗಳ ಬೆಲೆಗೆ ಇಮ್ಮಡಿಯಾಗಿ ದಂಡವನ್ನು ತೆರಿಸಬೇಕು.

೧೦೮. ಹೂಗಳು, ಹಸಿಯಧಾನ್ಯ, ಪೊದೆ, ಬಳ್ಳಿ, ಲತೆ, ಪೂರ್ಣವಾಗಿ ಸಿದ್ಧಪಡಿಸಿದ ಅನ್ನ ಇವುಗಳನ್ನು ಅಪಹರಿಸಿದರೆ ಐದು ಮಾಷಕಗಳ (ಚಿನ್ನದ ನಾಣ್ಯಗಳ) ದಂಡವನ್ನು ವಿಧಿಸಬೇಕು. ಕಾಳುಕಡ್ಡಿಗಳನ್ನು ಬೇರ್ಪಡಿಸಿ ಅಚ್ಚುಕಟ್ಟುಮಾಡಿದ ಧಾನ್ಯಗಳು, ಕಾಯಿಪಲ್ಯಗಳು, ಗೆಡ್ಡೆಗೆಣಸುಗಳು, ಹಣ್ಣು ಹಂಪಲುಗಳು ಇವುಗಳನ್ನು ಕದ್ದವನಿಗೆ, ಒಬ್ಬಂಟಿಗನಾಗಿ ಬಂದಿದ್ದರೆ ನೂರು ಕಾರ್ಷಾಪಣಗಳನ್ನೂ ಜೊತೆಯವರೊಡನೆ ಬಂದಿದ್ದರೆ ಇನ್ನೂರು ಕಾರ್ಷಾಪಣಗಳನ್ನೂ ದಂಡವಾಗಿ ವಿಧಿಸಬೇಕು.

೧೦೯. ಇತರರ ಪದಾರ್ಥಗಳನ್ನು ಅಪಹರಿಸುವುದಕ್ಕಾಗಿ ಕಳ್ಳನು ತನ್ನ ಯಾವ ಯಾವ ಅಂಗದಿಂದ ಕೆಲಸಮಾಡಿರುವನೋ ಆಯಾ ಅಂಗಗಳನ್ನೆಲ್ಲ ರಾಜನು ಭಂಗಗೊಳಿಸಬೇಕು. ಇದರಿಂದ ಆ ವ್ಯಾಪಾರವನ್ನು ತಪ್ಪಿಸಿದಂತಾಗುವುದು.

೧೧೦-೧೧೧. ದಾರಿನಡೆದು ಶಕ್ತಿಗುಂದಿರುವ ದ್ವಿಜನು ಎರಡು ಕಬ್ಬಿನ ಜಲ್ಲೆಗಳನ್ನೂ, ಎರಡು ಗೆಣಸುಗಳನ್ನೂ, ಎರಡು ಕಕ್ಕರಿಕೆ ಅಥವಾ ಸೌತೆಕಾಯಿ

ತ್ರಪುಸೋರ್ವಾರುಕೌ ದ್ವೌ ಚ ತಾವನ್ಮಾತ್ರಂ ಫಲೇಷು ಚ ।
ತಥಾ ಚ ಸರ್ವಧಾನ್ಯಾನಾಂ ಮುಷ್ಟಿಗ್ರಾಹೇಣ ಪಾರ್ಥಿವ ||೧೧೧||

ಶಾಕೇ ಶಾಕಪ್ರಮಾಣೇನ ಗೃಹ್ಯಮಾಣೇ ನ ದುಷ್ಯತಿ ।
ವಾನಸ್ಪತ್ಯಂ ಫಲಂ ಮೂಲಂ ದಾರ್ವಗ್ನ್ಯರ್ಥಂ ತಥೈವ ಚ ||೧೧೨||

ತೃಣಂ ಗೋಽಭ್ಯವಹಾರಾರ್ಥಮಸ್ತೇಯಂ ಮನುರಬ್ರವೀತ್ ।
ಅದೇವವಾಟಿಜಂ ಪುಷ್ಪಂ ದೇವತಾರ್ಥಂ ತಥೈವ ಚ ||೧೧೩||

ಆವದಾನಃ ಪರಕ್ಷೇತ್ರಾನ್ನ ದಂಡಂ ದಾತುಮರ್ಹತಿ ।
ಶೃಂಗಿಣಂ ನಖಿನಂ ರಾಜನ್ ದಂಷ್ಟ್ರಿಣಂ ಚ ವಧೋದ್ಯತಂ ||೧೧೪||

---

ಗಳನ್ನೂ, ಯಾವುದಾದರೂ ಎರಡು ಹಣ್ಣುಗಳನ್ನೂ, ಹಿಡಿಯಲ್ಲಿ ಹಿಡಿದುಕೊಳ್ಳ ಬಹುದಾದಷ್ಟು ಧಾನ್ಯವನ್ನೂ, ಅದೇ ಪ್ರಮಾಣದ ಕೀರೆ ಮುಂತಾದ ಸೊಪ್ಪನ್ನೂ ಒಡೆಯನನ್ನು ಕೇಳದೆ ಒಂದು ವೇಳೆ ತೆಗೆದುಕೊಂಡರೆ ಅದನ್ನು ಅಪರಾಧವೆಂದು ಎಣಿಸಬಾರದು.

೧೧೨. ಹಣ್ಣುಹಂಪಲು ಮತ್ತು ಗೆಡ್ಡೆಗೆಣಸುಗಳನ್ನೂ, ಅಗ್ನಿಕಾರ್ಯಕ್ಕಾಗಿ ಬೇಕಾದ ಕಟ್ಟಿಗೆಯನ್ನೂ, ಹಸುವಿಗೆ ಹಾಕುವುದಕ್ಕಾಗಿ ಹುಲ್ಲನ್ನೂ ಸ್ವಾಮಿಯ ಆಜ್ಞೆಯಿಲ್ಲದೆ ತೆಗೆದುಕೊಂಡರೂ ಚೌರ್ಯದೋಷವು ಬಾರದೆಂದು ಮನು ಹೇಳಿರುವನು.

೧೧೩. ದೇವರ ಪೂಜೆಗೋಸ್ಕರವಾಗಿ ದೇವಸ್ಥಾನಕ್ಕೆ ಸೇರಿರುವುದನ್ನು ಬಿಟ್ಟು ಬೇರೆಯವರ ತೋಟದಿಂದ ಹೂವನ್ನು ಕೇಳದೆ ತಂದರೆ ಶಿಕ್ಷೆಗೆ ಒಳಗಾಗ ಬೇಕಾಗಿಲ್ಲ.

೧೧೪. ಓ ರಾಜಾ, ತೀಕ್ಷ್ಣವಾದ ಕೊಂಬು, ಉಗುರು, ಕೋರೆಹಲ್ಲು ಇವುಗಳಿಂದ ಮನುಷ್ಯನನ್ನು ಕೊಲ್ಲಬರುವ ಯಾವ ಪ್ರಾಣಿಯನ್ನು ಸಂಹರಿಸಿದರೂ ಪಾಪವು ಬಾರದು.

**ಯೋ ಹನ್ಯಾನ್ನ ಸ ಪಾಪೇನ ಲಿಪ್ಯತೇ ಮನುಜೇಶ್ವರ ।**
**ಗುರುಂ ವಾ ಬಾಲವೃದ್ಧಂ ವಾ ಬ್ರಾಹ್ಮಣಂ ವಾ ಬಹುಶ್ರುತಂ ॥೧೧೫॥**

**ಆತತಾಯಿನಮಾಯಾಂತಂ ಹನ್ಯಾದೇವಾಽವಿಚಾರಯನ್ ।**
**ನಾತತಾಯಿವಧೇ ದೋಷೋ ಹಂತುರ್ಭವತಿ ಕಶ್ಚನ ॥೧೧೬॥**

**ಪ್ರಕಾಶಂ ವಾಽಪ್ರಕಾಶಂ ವಾ ಮನ್ಯುಸ್ತಂ ಮನ್ಯುಮೃಚ್ಛತಿ।**
**ಗೃಹಕ್ಷೇತ್ರಾಭಿಹರ್ತಾರಸ್ತಥಾಽಗಮ್ಯಾಭಿಗಾಮಿನಃ ॥೧೧೭॥**

**ಅಗ್ನಿದೋ ಗರದಶ್ಚೈವ ತಥಾ ಚಾಭ್ಯುದ್ಯತಾಯುಧಃ ।**
**ಅಭಿಚಾರಂ ತು ಕುರ್ವಾಣೋ ರಾಜಗಾಮಿ ಚ ಪೈಶುನಂ ॥೧೧೮॥**

---

೧೧೫-೧೧೬. ಆತತಾಯಿ* ಬರುತ್ತಿರುವುದನ್ನು ಕಂಡರೆ, ಅವನು ಬಾಲಕ, ವೃದ್ಧ, ಸಕಲಶಾಸ್ತ್ರಜ್ಞನಾದ ಬ್ರಾಹ್ಮಣ ಇವರಲ್ಲಿ ಯಾರೇ ಆಗಿರಲಿ ಹಿಂದುಮುಂದು ನೋಡದೆ ಕೊಂದುಹಾಕಬೇಕು. ಆತತಾಯಿಯನ್ನು ಸಂಹರಿಸಿದವನಿಗೆ ಯಾವ ದೋಷವೂ ಬರುವುದಿಲ್ಲ.

೧೧೭-೧೧೮. ಎದುರಿನಲ್ಲಿ ಇರುವವನ ಮೇಲೂ, ಪರೋಕ್ಷದಲ್ಲಿ ಇರುವವನ ಮೇಲೂ ಅವನು ಕೋಪಗೊಳ್ಳುವನು. ಮನೆಮಠಗಳನ್ನೂ ಹೊಲಗದ್ದೆಗಳನ್ನೂ ಅಪಹರಿಸುವವನು, ಹೋಗಬಾರದ ಕಡೆಗೆ ಹೋಗುವವನು, ಬೆಂಕಿಹಾಕುವವನು, ವಿಷಕೊಡುವವನು, ಯಾವಾಗಲೂ ಹೊಡೆಯುವುದಕ್ಕೆ ಸಿದ್ಧನಾಗಿ ಆಯುಧವನ್ನು ಎತ್ತಿಹಿಡಿದಿರುವವನು, ಮಾಟವನ್ನು ಮಾಡುವವನು, ಅರಸನಿಗೆ ಚಾಡಿ ಹೇಳುವವನು ಇವರನ್ನು ಧರ್ಮಜ್ಞರು ಆತತಾಯಿಗಳೆನ್ನುವರು.

---

* ಅಗ್ನಿದೋ ಗರದಶ್ಚೈವ ಶಸ್ತ್ರಪಾಣಿರ್ಧನಾಪಹಃ ।
ಕ್ಷೇತ್ರದಾರಾಪಹರ್ತಾ ಚ ಷಡೇತೇ ಹ್ಯಾತತಾಯಿನಃ ॥

ಮನೆಮಠಗಳಿಗೆ ಬೆಂಕಿಯಿಡುವವನು, ವಿಷವನ್ನು ಹಾಕುವವನು, ಕೈಯಲ್ಲಿ ಶಸ್ತ್ರವನ್ನು ಹಿಡಿದು ಯಾವಾಗಲೂ ನಿಷ್ಕಾರಣವಾಗಿ ಹಿಂಸಿಸುವವನು, ಕಂಡವರ ಸೊತ್ತನ್ನು ಅಪಹರಿಸುವವನು, ಇತರರ ಹೊಲಗದ್ದೆಗಳನ್ನೂ ಸ್ತ್ರೀಯರನ್ನೂ ಆಕ್ರಮಿಸಿಕೊಳ್ಳುವವನು ಈ ಆರು ಮಂದಿಗೂ ಆತತಾಯಿಗಳೆಂದು ಹೆಸರು.

ಏತೇ ಹಿ ಕಥಿತಾ ಲೋಕೇ ಧರ್ಮಜ್ಞೈರಾತತಾಯಿನಃ ।
ಭಿಕ್ಷುಕೋಽಪ್ಯಥವಾ ನಾರೀ ಯೋಽಪಿ ವಾ ಸ್ಯಾತ್ಕುಶೀಲವಃ ॥೧೧೯॥

ಪ್ರವಿಶೇತ್ಪ್ರತಿಷಿದ್ಧಸ್ತು ಪ್ರಾಪ್ನುಯಾದ್ದ್ವಿಗುಣಂ ದಮಂ ।
ಪರಸ್ತ್ರೀಣಾಂ ತು ಸಂಭಾಷೇ ತೀರ್ಥೇಽರಣ್ಯೇ ಗೃಹೇಽಪಿ ವಾ ॥೧೨೦॥

ನದೀನಾಂ ಚೈವ ಸಂಭೇದೇ ಸ ಸಂಗ್ರಹಣಮಾಪ್ನುಯಾತ್ ।
ನ ಸಂಭಾಷೇತ್ಪರಸ್ತ್ರೀಭಿಃ ಪ್ರತಿಷಿದ್ಧಃ ಪುಮಾನ್ ಕಿಲ ॥೧೨೧॥

ಯಸ್ತು ಸಂಭಾಷತೇ ಸ್ತ್ರೀಭಿಃ ಸುವರ್ಣಂ ದಂಡಮರ್ಹತಿ ।
ನೈಷ ಚಾರಣದಾರೇಷು ವಿಧಿರಾತ್ಮೋಪಜೀವಿಷು ॥೧೨೨॥

---

೧೧೯. ಭಿಕ್ಷುಕ, ಭಿಕ್ಷುಕಿ ಅಥವಾ ತಿರುಪೆಗಾಗಿ ಬರುವ ಯಾವನಾದರೂ ಹಾಡುಗಾರ ಇವರು ಬೇಡ ಬೇಡವೆನ್ನುತ್ತಿದ್ದರೂ ಮನೆಗೆ ನುಗ್ಗಿದರೆ ಇಮ್ಮಡಿಯ ದಂಡಕ್ಕೆ ಗುರಿಯಾಗುವರು.

೧೨೦. ಪುಣ್ಯತೀರ್ಥ, ಅರಣ್ಯ, ಗೃಹ, ಅಥವಾ ನದಿಗಳ ಸಂಗಮ ಮುಂತಾದ ಸ್ಥಳಗಳಲ್ಲಿ ಪರಸ್ತ್ರೀಯರೊಡನೆ ಸಂಭಾಷಿಸುವವನನ್ನು ಸೆರೆಯಲ್ಲಿ ಹಾಕಬೇಕು.

೧೨೧. ಪರಸ್ತ್ರೀಯರೊಡನೆ ಸಲ್ಲಾಪಗಳಲ್ಲಿ ತೊಡಗಬಾರದು. ಅದು ನಿಷಿದ್ಧವೆಂದು ಶಾಸ್ತ್ರವೂ ಲೋಕರೂಢಿಯೂ ಹೇಳುತ್ತವೆ. ಪರನಾರಿಯರೊಡನೆ ಸಂಭಾಷಣೆ ಮಾಡುವವನಿಗೆ ಒಂದು ಸುವರ್ಣ ದಂಡವನ್ನು ವಿಧಿಸಬೇಕು.

೧೨೨-೧೨೩. ತನ್ನ ಸಹಾಯದಿಂದಲೇ ಉಪಜೀವಿಸುವ ನರ್ತಕಿಯರ ವಿಷಯದಲ್ಲಿ ಮೇಲೆ ಹೇಳಿದ ಶಿಕ್ಷೆಯ ನಿರ್ಬಂಧವಿಲ್ಲ. ಏಕೆಂದರೆ ಅವರು ಮನುಷ್ಯ ರೊಡನೆ ಬೆರೆಯುತ್ತಾರೆ; ಅಲ್ಲದೆ ರಹಸ್ಯವಾಗಿ ಸಂಚರಿಸುತ್ತಾರೆ. ಆದರೂ ಅವರೊಡ

ಸಜ್ಜಯಂತಿ ಮನುಷ್ಯೈಸ್ತಾ ನಿಗೂಢಂ ವಾ ಚರಂತ್ಯುತ ।
ಕಿಂಚಿದೇವ ತು ದಾಪ್ಯಃ ಸ್ಯಾತ್ಸಂಭಾಷೇಣಾಪಚಾರಯನ್ ॥೧೨೩॥

ಪ್ರೇಷ್ಯಾಸು ಚೈವ ಸರ್ವಾಸು ಗೃಹಪ್ರವ್ರಜಿತಾಸು ಚ ।
ಯೋಽಕಾಮಾಂ ದೂಷಯೇತ್ಕನ್ಯಾಂ ಸ ಸದ್ಯೋ ವಧಮರ್ಹತಿ ॥೧೨೪॥

ಸಕಾಮಾಂ ದೂಷಯಾಣಸ್ತು ಪ್ರಾಪ್ನುಯಾದ್ದ್ವಿಶತಂ ದಮಂ ।
ಯಶ್ಚ ಸಂಚಾರಕಸ್ತತ್ರ ಪುರುಷಃ ಸ ತಥಾ ಭವೇತ್ ॥೧೨೫॥

ಪಾರದಾರಿಕವದ್ದಂಡ್ಯೋ ಯೋಽಪಿ ಸ್ಯಾದವಕಾಶದಃ ।
ಬಲಾತ್ಸಂದೂಷಯೇದ್ಯಸ್ತು ಪರಭಾರ್ಯಾಂ ನರಃ ಕ್ವಚಿತ್ ॥೧೨೬॥

---

ನೆಯೂ, ತನ್ನ ಸೇವಕಿಯರೊಡನೆಯೂ, ಮನೆಮಠಗಳಿಲ್ಲದೆ ತಿರುಗುವ ಸ್ತ್ರೀಯರೊಡನೆಯೂ ಆಕ್ಷೇಪಕರವಾದ ರೀತಿಯಲ್ಲಿ ಮಾತನಾಡಿದವನಿಗೆ ರಾಜನು ಯಥೋಚಿತವಾಗಿ ದಂಡವನ್ನು ವಿಧಿಸಬೇಕು.

೧೨೪. ಇಷ್ಟವಿಲ್ಲದಾಕೆಯನ್ನು ಬಲಾತ್ಕಾರದಿಂದ ಕೆಡಿಸುವವನನ್ನು ಕೂಡಲೇ ವಧಿಸಬೇಕು. ಇಷ್ಟಪಟ್ಟ ಪರಸ್ತ್ರೀಯೊಡನೆ ಕೂಡಿದವನಿಗೆ ಇನ್ನೂರು ಕಾರ್ಷಾಪಣಗಳ ದಂಡವನ್ನು ಹಾಕಬೇಕು.

೧೨೫. ಮೇಲೆ ಹೇಳಿದ ಅಕೃತ್ಯಗಳಿಗೆ ಸಹಾಯಕನಾದವನಿಗೂ ಅದೇ ಶಿಕ್ಷೆಯನ್ನು ಕೊಡಬೇಕು. ಪರಸ್ತ್ರೀಗಮನವನ್ನು ಮಾಡಿದವನಿಗೆ ಯಾವ ದಂಡವೋ, ಅದೇ ದಂಡವು ಆ ಕಾರ್ಯಕ್ಕೆ ಅವಕಾಶವನ್ನು ಕೊಟ್ಟವನಿಗೂ ಅನ್ವಯಿಸುವುದು.

೧೨೬. ಬಲಪ್ರಯೋಗದಿಂದ ಪರಸ್ತ್ರೀಸಂಗವನ್ನು ಮಾಡಿದ ಮನುಷ್ಯನಿಗೆ ವಧೆಯೇ ಶಿಕ್ಷೆ. ಅವಮಾನಕ್ಕೆ ಗುರಿಯಾದ ಸ್ತ್ರೀಯ ಮೇಲೆ ಯಾವ ದೋಷವೂ ಇಲ್ಲ.

ವಧೋ ದಂಡೋ ಭವೇತ್ತಸ್ಯ ನಾಪರಾಧೋ ಭವೇತ್ಸ್ತ್ರಿಯಾಃ ।
ರಜಸ್ತೃತೀಯಂ ಯಾ ಕನ್ಯಾ ಸ್ವಗೃಹೇ ಪ್ರತಿಪದ್ಯತೇ ॥೧೨೭॥
ಅದಂಡ್ಯಾ ಸಾ ಭವೇದ್ರಾಜ್ಞಾ ವರಯಂತೀ ಪತಿಂ ಸ್ವಯಂ ।
ಸ್ವದೇಶೇ ಕನ್ಯಕಾಂ ದತ್ವಾ ತಾಮಾದಾಯ ತಥಾ ವ್ರಜೇತ್ ॥೧೨೮॥
ಪರದೇಶೇ ಭವೇದ್ವಧ್ಯಃ ಸ್ತ್ರೀಚೋರಃ ಸ ಯತೋ ಭವೇತ್ ।
ಅದ್ರವ್ಯಾಂ ಮೃತಪತ್ನೀಂ ತು ಸಂಗೃಹ್ಣನ್ನಾಪರಾಧ್ಯತಿ ॥೧೨೯॥
ಸದ್ರವ್ಯಾಂ ತಾಂ ಸಂಗ್ರಹೀತಾ ದಂಡಂ ತು ಕ್ಷಿಪ್ರಮರ್ಹತಿ ।
ಉತ್ಕೃಷ್ಟಂ ಯಾ ಭಜೇತ್ಕನ್ಯಾ ದೇಯಾ ತಸ್ಯೈವ ಸಾ ಭವೇತ್ ॥೧೩೦॥
ಉತ್ತಮಾಂ ಸೇವಮಾನಸ್ತು ಜಘನ್ಯೋ ವಧಮರ್ಹತಿ ।
ಜಘನ್ಯಮುತ್ತಮಾ ನಾರೀ ಸೇವಮಾನಾ ತಥೈವ ಚ ॥೧೩೦॥

---

೧೨೭. ಮೂರು ಸಾರಿ ರಜಸ್ವಲೆಯಾಗುವವರೆಗೂ ತಂದೆತಾಯಿಗಳು ಮದುವೆಯನ್ನೇ ಮಾಡದ ಕನ್ಯೆಯು ಆ ಬಳಿಕ ತನಗೆ ಇಚ್ಛೆಬಂದವನನ್ನು ತಾನಾಗಿಯೇ ವರಿಸಿದರೆ ರಾಜನು ಅವಳನ್ನು ದಂಡಿಸಬಾರದು.

೧೨೮. ತನ್ನ ದೇಶದಲ್ಲಿ ಮಗಳಿಗೆ ಮದುವೆಯನ್ನು ಮಾಡಿಕೊಟ್ಟು, ಬಳಿಕ ಆವಳೊಡನೆ ಪರದೇಶಕ್ಕೆ ಹೊರಟುಹೋಗುವ ತಂದೆಯನ್ನು ಮರಣದಂಡನೆಗೆ ಗುರಿಮಾಡಬೇಕು. ಏಕೆಂದರೆ ಅವನು ಸ್ತ್ರೀಚೋರನೆಂದು ಪರಿಗಣಿಸಲ್ಪಡುವನು.

೧೨೯. ಪತಿಯನ್ನು ಕಳೆದುಕೊಂಡು ದುಡ್ಡುಕಾಸಿಲ್ಲದೆ ತೊಳಲುತ್ತಿರುವ ಸ್ತ್ರೀಯನ್ನು ಇಟ್ಟುಕೊಂಡವನು ಅಪರಾಧಕ್ಕೆ ಗುರಿಯಾಗುವುದಿಲ್ಲ. ಅವಳು ಐಶ್ವರ್ಯವಂತಳಾಗಿದ್ದರೆ ಅಂತಹವನು ಕೂಡಲೆ ಶಿಕ್ಷೆಗೆ ಒಳಗಾಗುವನು.

೧೩೦. ಕನ್ಯೆಯು ಉತ್ಕೃಷ್ಟನಾದವನನ್ನು ತಾನಾಗಿಯೇ ಆರಿಸಿ ಸೇರಿದ್ದರೆ ಅವಳನ್ನು ಅವನಿಗೇ ಕೊಟ್ಟು ಮದುವೆಮಾಡಬೇಕು. ನೀಚನನ್ನು ಸೇವಿಸಿದ್ದರೆ ಅವಳನ್ನು ಮನೆಯಲ್ಲಿಯೇ ನಿರ್ಬಂಧದಲ್ಲಿ ಇರಿಸಬೇಕು.

೧೩೧. ತನಗಿಂತ ಉತ್ತಮವರ್ಣದವಳಾದ ಸ್ತ್ರೀಯನ್ನು ಕೂಡಿರುವ ಪುರುಷನು ಮರಣದಂಡನೆಗೆ ಅರ್ಹನಾಗುವನು. ಹಾಗೆಯೇ ಮುಂದೆ ಹೇಳುವ ಶಿಕ್ಷೆಯನ್ನು ವಿಧಿಸಬೇಕು.

**ಭರ್ತಾರಂ ಲಂಘಯೇದ್ಯಾ ಸ್ತ್ರೀ ಸ್ವಜ್ಞಾತಿಬಲದರ್ಪಿತಾ ।**
**ತಾಂ ಚ ನಿಷ್ಕಾಸಯೇದ್ರಾಜಾ ಸಂಸ್ಥಿತೇ ಸರ್ವಸಂಸದಿ ||೧೩೨||**

**ಹೃತಾಧಿಕಾರಾಂ ಮಲಿನಾಂ ಪಿಂಡಮಾತ್ರೋಪಜೀವಿನೀಂ ।**
**ವಾಸಯೇತ್ಸ್ವೈರಿಣೀಂ ನಿತ್ಯಂ ಸವರ್ಣೇನಾಭಿದೂಷಿತಾಂ ||೧೩೩||**

**ಜ್ಯಾಯಸಾ ದೂಷಿತಾ ನಾರೀ ಮುಂಡನಂ ಸಮವಾಪ್ನುಯಾತ್ ।**
**ವಾಸಶ್ಚ ಮಲಿನಂ ನಿತ್ಯಂ ಶಿಖಾಂ ಸಂಪ್ರಾಪ್ನುಯಾದ್ದಶ ||೧೩೪||**

**ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಕ್ಷತ್ರವಿಟ್ಶೂದ್ರಯೋಷಿತಃ ।**
**ವ್ರಜನ್ ದಾಪ್ಯೋ ಭವೇದ್ರಾಜ್ಞಾ ದಂಡಮುತ್ತಮಸಾಹಸಂ ||೧೩೫||**

---

೧೩೨. ತನ್ನ ಬಂಧುಬಳಗದವರ ಬಲದಿಂದ ಕೊಬ್ಬಿ ಪತಿಯ ಆಜ್ಞೆಯನ್ನು ಉಲ್ಲಂಘಿಸುವ ಸ್ತ್ರೀಯನ್ನು ರಾಜನು ತುಂಬಿದ ಸಭೆಯಲ್ಲಿ ಹೊರದೂಡಿಸಿ ಅವಮಾನಗೊಳಿಸಬೇಕು.

೧೩೩. ಸ್ತ್ರೀಯು ಸ್ವಜಾತಿಯ ಪುರುಷನಲ್ಲಿ ವ್ಯಭಿಚರಿಸಿ ಶೀಲವನ್ನು ಹಾಳುಮಾಡಿಕೊಂಡಿದ್ದರೆ, ಅವಳಿಗೆ ಮನೆಯಲ್ಲಿ ಯಾವ ಅಧಿಕಾರವನ್ನೂ ಕೊಡದೆ, ಹೊಟ್ಟೆಗೆ ಮಾತ್ರ ಹಾಕಿ, ಕೊಳಕಿಯಾಗಿ ಒಂದು ಕಡೆ ಬಿದ್ದಿರುವಂತೆ ಏರ್ಪಡಿಸಬೇಕು.

೧೩೪. ತನಗಿಂತ ಉತ್ತಮಜಾತಿಯ ಪುರುಷನಿಂದ ದೂಷಿತಳಾದ ಸ್ತ್ರೀಗೆ ಕೂದಲನ್ನು ತೆಗೆಯಿಸಿ, ಮಲಿನವಸ್ತ್ರವನ್ನು ಉಡಿಸಿ ತಲೆಯಲ್ಲಿ ಹತ್ತು ಪಟ್ಟಿಗಳನ್ನು ತೆಗೆಸಬೇಕು.

೧೩೫. ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರು ಕ್ರಮವಾಗಿ ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಸ್ತ್ರೀಯರೊಡನೆ ಸಮಾಗಮವನ್ನು ಮಾಡಿದರೆ ರಾಜನು ಅವರಿಗೆ ಮೊದಲನೆಯ ದರ್ಜೆಯ ದಂಡವನ್ನು ವಿಧಿಸಬೇಕು.

**ವೈಶ್ಯಾಗಮೇ ಚ ವಿಪ್ರಸ್ಯ ಕ್ಷತ್ರಿಯಸ್ಯಾಂತ್ಯಜಾಗಮೇ ।**
**ಮಧ್ಯಮಂ ಪ್ರಥಮಂ ವೈಶ್ಯೋ ದಂಡ್ಯಃ ಶೂದ್ರಾಗಮಾದ್ಭವೇತ್ ||೧೪೬||**

**ಶೂದ್ರಃ ಸವರ್ಣಾಗಮನೇ ಶತಂ ದಂಡ್ಯೋ ಮಹೀಕ್ಷಿತಾ ।**
**ವೈಶ್ಯಸ್ತು ದ್ವಿಗುಣಂ ರಾಜ್ಞಾ ಕ್ಷತ್ರಸ್ತು ತ್ರಿಗುಣಂ ತಥಾ ||೧೪೭||**

**ಬ್ರಾಹ್ಮಣಶ್ಚ ಭವೇದ್ದಂಡ್ಯಸ್ತಥಾ ರಾಜಂಶ್ಚತುರ್ಗುಣಂ ।**
**ಅಗುಪ್ತಾಸು ಭವೇದ್ದಂಡಃ ಸುಗುಪ್ತಾಸ್ವಧಿಕೋ ಭವೇತ್ ||೧೪೮||**

**ಮಾತಾ ಪಿತೃಷ್ವಸಾ ಶ್ವಶ್ರೂರ್ಮಾತುಲಾನೀ ಪಿತೃವ್ಯಜಾ ।**
**ಪಿತೃವ್ಯಸಖಿಶಿಷ್ಯಸ್ತ್ರೀ ಭಗಿನೀ ತತ್ಸಖೀ ತಥಾ ।**
**ಭ್ರಾತೃಭಾರ್ಯಾಗಮೇ ಪೂರ್ವಾದ್ದಂಡಸ್ತು ದ್ವಿಗುಣೋ ಭವೇತ್ ||೧೪೯||**

---

೧೩೬. ಬ್ರಾಹ್ಮಣನು ವೈಶ್ಯಸ್ತ್ರೀಯಲ್ಲಿಯೂ, ಕ್ಷತ್ರಿಯನು ಶೂದ್ರಸ್ತ್ರೀಯಲ್ಲಿಯೂ ಪ್ರವೇಶಿಸಿದರೆ ಮಧ್ಯಮದಂಡವನ್ನು ಎಂದರೆ ಐದುನೂರು ಕಾರ್ಷಾಪಣಗಳನ್ನು ಕೊಡಬೇಕು. ವೈಶ್ಯನು ಶೂದ್ರಸ್ತ್ರೀಯ ಸಮಾಗಮವನ್ನು ಮಾಡಿದರೆ ಪ್ರಥಮದಂಡವನ್ನು ಎಂದರೆ ಒಂದುನೂರು ಕಾರ್ಷಾಪಣಗಳನ್ನು ತೆರಬೇಕು.

೧೪೭. ಸ್ವಜಾತಿಯ ಪರಸ್ತ್ರೀಯೊಡನೆ ಕೂಡಿದರೆ ಶೂದ್ರನಿಗೆ ನೂರು, ವೈಶ್ಯನಿಗೆ ಇನ್ನೂರು, ಕ್ಷತ್ರಿಯನಿಗೆ ಮುನ್ನೂರು ಹಣಗಳನ್ನು ರಾಜನು ದಂಡ ಹಾಕಬೇಕು.

೧೪೮. ರಾಜಾ, ಅದೇ ಅಪರಾಧವನ್ನು ಬ್ರಾಹ್ಮಣನು ಮಾಡಿದರೆ ನಾಲ್ಕು ಪಾಲು ಹೆಚ್ಚಾಗಿ ಶಿಕ್ಷೆಯನ್ನು ಅನುಭವಿಸಬೇಕು. ರಕ್ಷಣೆಯಿಲ್ಲದ ಪರಸ್ತ್ರೀ ವಿಷಯದಲ್ಲಿ ಮೇಲೆ ಹೇಳಿದ ಶಿಕ್ಷೆ. ಸರಿಯಾದ ರಕ್ಷಣೆಯಿರುವಾಗ ಬ್ರಾಹ್ಮಣಾದಿಗಳು ಅಕೃತ್ಯವನ್ನು ನಡೆಸಿದರೆ ಶಿಕ್ಷೆಯು ಇನ್ನೂ ಅಧಿಕವಾಗುವುದು.

೧೪೯. ತಾಯಿ, ಸೋದರತ್ತೆ, ಅತ್ತೆ, ಸೋದರಮಾವನ ಹೆಂಡತಿ, ಚಿಕ್ಕಪ್ಪನ ಮಗಳು, ಚಿಕ್ಕಪ್ಪನ ಸಖಿ, ಶಿಷ್ಯನ ಹೆಂಡತಿ, ಒಡಹುಟ್ಟಿದವಳು, ಅವಳ ಗೆಳತಿ, ಸೋದರನ ಪತ್ನಿ ಇವರೊಡನೆ ಸಮಾಗಮ ಮಾಡಿದರೆ ಶಿಕ್ಷೆಯು ಮೇಲೆ ಹೇಳಿದುದಕ್ಕೆ ಇಮ್ಮಡಿಯಾಗಬೇಕು.

ಭಾಗಿನೇಯೀ ತಥಾ ಚೈವ ರಾಜಪತ್ನೀ ಶಥೈವ ಚ ।
ತಥಾ ಪ್ರವ್ರಾಜಿತಾ ನಾರೀ ವರ್ಣೋತ್ಕೃಷ್ಟಾ ತಥೈವ ಚ ॥೧೪೦॥

ಇತ್ಯಗಮ್ಯಾಶ್ಚ ನಿರ್ದಿಷ್ಟಾಸ್ತಾಸಾಂ ತು ಗಮನೇ ನರಃ ।
ಶಿಶ್ನಸ್ಯೋತ್ಕರ್ತನಂ ಕೃತ್ವಾ ತತಸ್ತು ವಧಮರ್ಹತಿ ॥೧೪೧॥

ಚಂಡಾಲೀಂ ಚ ಶ್ವಪಾಕೀಂ ಚ ಗಚ್ಛನ್ ವಧಮವಾಪ್ನುಯಾತ್ ॥೧೪೨॥

ತಿರ್ಯಗ್ಯೋನಿಂ ಚ ಗೋವರ್ಜ್ಯಂ ಮೈಥುನಂ ಯೋ ನಿಷೇವತೇ ।
ವಪನಂ ಪ್ರಾಪ್ನುಯಾದ್ದಂಡಂ ತಸ್ಯಾಶ್ಚ ಯವಸೋದಕಂ ॥೧೪೩॥

ಸುವರ್ಣಂ ಚ ಭವೇದ್ದಂಡ್ಯೋ ಗಾಂ ವ್ರಜನ್ ಮನುಜೋತ್ತಮ ।
ವೇಶ್ಯಾಗಾಮೀ ದ್ವಿಜೋ ದಂಡ್ಯೋ ವೇಶ್ಯಾಶುಲ್ಕಸಮಂ ಪಣಂ ॥೧೪೪॥

---

೧೪೦-೧೪೧. ಸೋದರ ಸೊಸೆ, ರಾಜನ ಪತ್ನಿ, ಸಂನ್ಯಾಸಿನಿ, ತನಗಿಂತ ಉತ್ತಮ ವರ್ಣದ ಹೆಂಗಸು ಇವರೆಲ್ಲ ಸಂಗಮಕ್ಕೆ ನಿಷಿದ್ಧರಾದವರು. ಇವರೊಡನೆ ಕೂಡಿದ ಪುರುಷನ ಶಿಶ್ನವನ್ನು ಕತ್ತರಿಸಿ ತರುವಾಯ ಅವನನ್ನು ವಧಿಸಬೇಕು.

೧೪೨-೧೪೩. ಚಂಡಾಲ ಸ್ತ್ರೀಯೊಡನೆಯೂ ಶ್ವಪಚಸ್ತ್ರೀಯೊಡನೆಯೂ ರಮಿಸಿದವನನ್ನು ವಧೆಗೆ ಗುರಿಪಡಿಸಬೇಕು. ಹಸುವನ್ನು ಹೊರತು ಉಳಿದ ತಿರ್ಯಗ್ಜಂತುಗಳಲ್ಲಿ ಮೈಥುನವನ್ನು ಮಾಡಿದವನ ತಲೆಯನ್ನು ಬೋಳಿಸಬೇಕು. ಅಲ್ಲದೆ ಆ ಪ್ರಾಣಿಗೆ ಹುಲ್ಲುನೀರನ್ನು ಕೊಟ್ಟುಸಾಕುವ ಹೊರೆಯನ್ನು ಅವನಿಗೇ ಹೊರಿಸಬೇಕು. ಇದೇ ಅವನಿಗೆ ಶಿಕ್ಷೆ.

೧೪೪. ರಾಜಾ, ಗೋಮೈಥುನವನ್ನು ಮಾಡಿದಾತನಿಗೆ ಮೇಲಿನ ಶಿಕ್ಷೆಯಲ್ಲದೆ ಸುವರ್ಣನಾಣ್ಯದ ದಂಡವನ್ನೂ ವಿಧಿಸಬೇಕು. ವೇಶ್ಯಾಸ್ತ್ರೀ ಗಮನಮಾಡುವ ಬ್ರಾಹ್ಮಣನು ವೇಶ್ಯೆಗೆ ಕೊಟ್ಟಷ್ಟು ಹಣವನ್ನು ರಾಜನಿಗೆ ದಂಡವಾಗಿ ಕೊಡಬೇಕು.

ಗೃಹೀತ್ವಾ ವೇತನಂ ವೇಶ್ಯಾ ಲೋಭಾದನ್ಯತ್ರ ಗಚ್ಛತಿ ।
ವೇತನಂ ದ್ವಿಗುಣಂ ದದ್ಯಾದ್ದಂಡಶ್ಚ ದ್ವಿಗುಣಂ ತಥಾ ||೧೪೫||

ಅನ್ಯಮುದ್ದಿಶ್ಯ ಯೋ ವೇಶ್ಯಾಂ ನಯೇದನ್ಯಸ್ಯ ಕಾರಣಾತ್ ।
ತಸ್ಯ ದಂಡೋ ಭವೇದ್ರಾಜನ್ ಸುವರ್ಣಸ್ಯ ಚ ಮಾಷಕಂ ||೧೪೬||

ನೀತ್ವಾ ಭೋಗಾನ್ನ ಯೋ ದದ್ಯಾದ್ದಾಪ್ಯೋ ದ್ವಿಗುಣವೇತನಂ ।
ರಾಜ್ಞಶ್ಚ ದ್ವಿಗುಣಂ ದಂಡಂ ತಥಾ ಧರ್ಮೋ ನ ಹೀಯತೇ ||೧೪೭||

ಬಹೂನಾಂ ವ್ರಜತಾಮೇಕಾಂ ಸರ್ವೇ ತೇ ದ್ವಿಗುಣಂ ದಮಂ ।
ದದ್ಯುಃ ಪೃಥಕ್ಪೃಥಕ್ಸರ್ವೇ ದಂಡಂ ಚ ದ್ವಿಗುಣಂ ಪರಂ ||೧೪೮||

---

೧೪೫. ವೇಶ್ಯೆಯು ಶುಲ್ಕವನ್ನು ತೆಗೆದುಕೊಂಡ ಬಳಿಕ ಲೋಭದಿಂದ ಮತ್ತೊಬ್ಬನಲ್ಲಿ ಹೋದರೆ ಅವಳು ತಾನು ತೆಗೆದುಕೊಂಡ ಹಣದ ಎರಡರಷ್ಟನ್ನು ಆ ಪುರುಷನಿಗೆ ಕೊಡಬೇಕು. ಅಲ್ಲದೆ ರಾಜನಿಗೂ ಅಷ್ಟೇ ದ್ರವ್ಯವನ್ನು ದಂಡತೆರಬೇಕು.

೧೪೬. ಓ ಭೂಪಾಲಕಾ, ಒಬ್ಬನನ್ನು ಉದ್ದೇಶಿಸಿ ಗೊತ್ತುಮಾಡಿದ ವೇಶ್ಯೆಯನ್ನು ಮತ್ತೊಬ್ಬನ ಬಳಿಗೆ ಕರೆದೊಯ್ಯುವ ದೂತನಿಗೆ ಮಾಷಪ್ರಮಾಣದ ಸುವರ್ಣನಾಣ್ಯವನ್ನು ದಂಡಹಾಕಬೇಕು.

೧೪೭. ಭೋಗಕ್ಕೋಸ್ಕರವಾಗಿ ವೇಶ್ಯೆಯನ್ನು ಕರೆದುಕೊಂಡು ಹೋಗಿ ಅವಳಿಗೆ ಭೋಗವನ್ನೂ ಭೋಗಶುಲ್ಕವನ್ನೂ ಕೊಡದಿದ್ದರೆ ಅವನಿಂದ ಅವಳಿಗೆ ಗೊತ್ತಾದ ಹಣದ ಎರಡರಷ್ಟನ್ನು ಕೊಡಿಸಬೇಕು. ಹಾಗೆಯೇ ಅರಮನೆಗೂ ಅಷ್ಟೇ ದ್ರವ್ಯವನ್ನು ತೆಗೆದುಕೊಳ್ಳಬೇಕು. ಅದರಿಂದ ಧರ್ಮಕ್ಕೆ ಲೋಪವು ಬಾರದು.

೧೪೮. ಒಬ್ಬ ವೇಶ್ಯೆಯ ಬಳಿಗೆ ಹಲವರು ವಿಟರು ಹೋಗುತ್ತಿದ್ದರೆ ಅವರಲ್ಲಿ ಒಬ್ಬೊಬ್ಬನೂ ವೇಶ್ಯಾಶುಲ್ಕದ ಎರಡರಷ್ಟು ಹಣವನ್ನು ರಾಜನಿಗೆ ಅಪರಾಧಕ್ಕಾಗಿ ಕೊಡಬೇಕು. ಅಷ್ಟಕ್ಕೆ ಶಕ್ತಿಯಿಲ್ಲದಿದ್ದರೆ ಎಲ್ಲರೂ ಒಟ್ಟುಗೂಡಿಯಾದರೂ ಅಷ್ಟೇ ಹಣವನ್ನು ದಂಡವಾಗಿ ಕೊಡಬೇಕು.

**ನ ಮಾತಾ ನ ಪಿತಾ ನ ಸ್ತ್ರೀ ನ ಋತ್ವಿಗ್ಯಾಜ್ಯಮಾನವಾಃ ।**
**ಅನ್ಯೋನ್ಯಂ ಪತಿತಾಸ್ತ್ಯಾಜ್ಯಾ ಯೋಗೇ ದಂಡ್ಯಾಃ ಶತಾನಿ ಷಟ್ ॥೧೪೯॥**

**ಪತಿತಾ ಗುರವಸ್ತ್ಯಾಜ್ಯಾ ನ ತು ಮಾತಾ ಕಥಂಚನ ।**
**ಗರ್ಭಧಾರಣಪೋಷಾಭ್ಯಾಂ ತೇನ ಮಾತಾ ಗರೀಯಸೀ ॥೧೫೦॥**

**ಅಧೀಯಾನೋಽಪ್ಯನಧ್ಯಾಯೇ ದಂಡ್ಯಃ ಕಾರ್ಷಾಪಣತ್ರಯಂ ।**
**ಅಧ್ಯಾಪಕಶ್ಚ ದ್ವಿಗುಣಂ ತಥಾಚಾರಸ್ಯ ಲಂಘನೇ ॥೧೫೧॥**

**ಅನುಕ್ತಸ್ಯ ಭವೇದ್ದಂಡಃ ಸುವರ್ಣಸ್ಯ ಚ ಕೃಷ್ಣಲಂ ।**
**ಭಾರ್ಯಾ ಪುತ್ರಶ್ಚ ದಾಸಶ್ಚ ಶಿಷ್ಯೋ ಭ್ರಾತಾ ಚ ಸೋದರಃ ॥೧೫೨॥**

---

೧೪೯. ತಾಯಿ, ತಂದೆ, ಸ್ತ್ರೀ, ಋತ್ವಿಕ್ಕು, ತಾನು ಯಾಗಮಾಡಿಸುವ ಯಜಮಾನ ಇವರನ್ನು ತ್ಯಾಗಮಾಡಬಾರದು. ಪತಿತರಾದವರು ಒಬ್ಬ ರೊಡನೊಬ್ಬರು ಬೆರೆಯಬಾರದು. ಬೆರೆತರೆ ಆರುನೂರು ಹಣಗಳ ದಂಡವನ್ನು ತೆರಬೇಕು.

೧೫೦. ಪತಿತರಾದರೆ ಗುರುಗಳನ್ನು ಕೂಡ ಬಿಡಬೇಕು. ಆದರೆ ಏನೇ ಆಗಲಿ ತಾಯಿಯನ್ನು ತ್ಯಾಗಮಾಡಬಾರದು. ಏಕೆಂದರೆ ಹೊತ್ತು, ಹೆತ್ತು ಸಾಕಿದವಳು ಅವಳು. ಆದುದರಿಂದ ತಾಯಿಯೆಂದರೆ ಅತ್ಯಂತಶ್ರೇಷ್ಠಳು.

೧೫೧. ಅಧ್ಯಯನಕ್ಕೆ ಅರ್ಹವಲ್ಲದ ಕಾಲದಲ್ಲಿ ವಿದ್ಯಾಭ್ಯಾಸಂಗವನ್ನು ಮಾಡುವಾತನಿಗೆ ಮೂರು ಕಾರ್ಷಾಪಣಗಳ (ಬೆಳ್ಳಿಯ ನಾಣ್ಯಗಳ) ದಂಡವನ್ನು ವಿಧಿಸಬೇಕು. ಆಚಾರವನ್ನು ಅತಿಕ್ರಮಿಸಿದ ಅಧ್ಯಾಪಕನು ಇದರ ಇಮ್ಮಡಿಯಾಗಿ ದಂಡವನ್ನು ತೆರಬೇಕು.

೧೫೨-೧೫೩. ಮೇಲೆ ಹೇಳಿದ ಅಪರಾಧಗಳಲ್ಲದೆ ಉಳಿದವುಗಳಿಗೆ ಚಿನ್ನದ ಕೃಷ್ಣಲವೆಂಬ ನಾಣ್ಯವನ್ನು ದಂಡವಾಗಿ ವಿಧಿಸಬೇಕು. ಹೆಂಡತಿ, ಮಗ, ಸೇವಕ, ಶಿಷ್ಯ, ಒಡಹುಟ್ಟಿದ ತಮ್ಮ ಇವರು ತಪ್ಪುಮಾಡಿದರೆ ಹಗ್ಗದಿಂದಲೋ ಬಿದಿರಿನ

ಕೃತಾಪರಾಧಾಸ್ತಾಡ್ಯಾಃ ಸ್ಯೂ ರಜ್ವಾ ವೇಣುದಲೇನ ವಾ ।
ಪೃಷ್ಠತಸ್ತು ಶರೀರಸ್ಯ ನೋತ್ತಮಾಂಗೇ ಕಥಂಚನ ॥೧೫೩॥

ಅತೋಽನ್ಯಥಾ ಪ್ರಹರತಃ ಪ್ರಾಪ್ತಂ ಸ್ಯಾಚ್ಚೋರಕಿಲ್ಬಿಷಂ ।
ದೂತೀಂ ಸಮಾಹ್ವಯಂಶ್ಚೈವ ಯೋ ನಿಷಿದ್ಧಂ ಸಮಾಚರೇತ್ ॥೧೫೪॥

ಪ್ರಚ್ಛನ್ನಂ ವಾ ಪ್ರಕಾಶಂ ವಾ ಸ ದಂಡ್ಯಃ ಪಾರ್ಥಿವೇಚ್ಛಯಾ ।
ವಾಸಾಂಸಿ ಫಲಕೈಃ ಶ್ಲಕ್ಷ್ಣೈರ್ನಿರ್ಣೇಯಾದ್ರಜಕಃ ಶನೈಃ ॥೧೫೫॥

ಅತೋಽನ್ಯಥಾ ಹಿ ಕುರ್ವಂಸ್ತು ದಂಡ್ಯಃ ಸ್ಯಾದ್ರುಕ್ಮಮಾಷಕಂ ।
ರಕ್ಷಾಸ್ವಧಿಕೃತೈಶ್ಚೈವ ಪ್ರದೇಯಂ ಯೈರ್ವಿಲುಪ್ಯತೇ ॥೧೫೬॥

ಕರ್ಷಕೇಭ್ಯೋಽರ್ಥಮಾದಾಯ ಯಃ ಕುರ್ಯಾತ್ಕರಮನ್ಯಥಾ ।
ತಸ್ಯ ಸರ್ವಸ್ವಮಾದಾಯ ತಂ ರಾಜಾ ವಿಪ್ರವಾಸಯೇತ್ ॥೧೫೭॥

---

ದಬ್ಬೆಯಿಂದಲೋ ಬೆನ್ನಿನ ಮೇಲೆ ಹೊಡೆಯಬೇಕು. ತಲೆಯಮೇಲೆ ಖಂಡಿತವಾಗಿ ಹೊಡೆಯಬಾರದು. ಹೀಗಲ್ಲದೆ ಬೇರೆ ವಿಧವಾಗಿ ಹೊಡೆದು ಶಿಕ್ಷಿಸುವಾತನಿಗೆ ಚೌರ್ಯದ ಪಾಪವು ಬರುತ್ತದೆ.

೧೫೪. ದೂತಿಯನ್ನು ಕೂಗಿ ಕರೆದು ಅವಳಲ್ಲಿ ಅನುಚಿತವಾಗಿ ನಡೆಯುವವನನ್ನು ರಾಜನು ತನ್ನ ಇಷ್ಟಾನುಸಾರವಾಗಿ ರಹಸ್ಯವಾಗಿಯೋ ಬಹಿರಂಗವಾಗಿಯೋ ಶಿಕ್ಷಿಸಬೇಕು.

೧೫೫. ಅಗಸನು ಬಟ್ಟೆಗಳನ್ನು ನಯವಾದ ಹಲಗೆಗಳ ಮೇಲೆ ಮೆಲ್ಲಗೆ ಒಗೆಯಬೇಕು. ಹಾಗಲ್ಲದೆ ಒರಟುತನಮಾಡಿ ಬಟ್ಟೆಯನ್ನು ಹರಿದುಹಾಕಿದರೆ ಒಂದು ಸುವರ್ಣಮಾಷವನ್ನು (ಐದು ಗುಲಗಂಜಿ ತೂಕದ ಚಿನ್ನದ ನಾಣ್ಯ) ದಂಡವಾಗಿ ತೆರಬೇಕು.

೧೫೬-೧೫೭. ಯಾವುದಾದರೂ ಪದಾರ್ಥವು ಕಳೆದುಹೋದರೆ ಅದರ ಕಾವಲಿಗೆ ಗೊತ್ತಾಗಿದ್ದವರು ಅದನ್ನು ಅಥವಾ ಅದರ ಮೌಲ್ಯವನ್ನು ಕೊಡಬೇಕು. ಬೇಸಾಯಗಾರರಿಂದ ಕಂದಾಯವನ್ನೆತ್ತಿ ಅದನ್ನು ಸರ್ಕಾರಕ್ಕೆ ಕೊಡದೆ ದುರುಪಯೋಗಪಡಿಸಿಕೊಳ್ಳುವವನ ಆಸ್ತಿಯನ್ನೆಲ್ಲ ರಾಜನು ವಶಪಡಿಸಿಕೊಂಡು, ಅವನನ್ನು ದೇಶದಿಂದ ಹೊರಡಿಸಬೇಕು.

ಯೇ ನಿಯುಕ್ತಾಃ ಸ್ವಕಾರ್ಯೇಷು ಹನ್ಯುಃ ಕಾರ್ಯಾಣಿ ಕಾರ್ಯಿಣಾಂ ।
ನಿರ್ಘೃಣಾಃ ಕ್ರೂರಮನಸಃ ಸರ್ವೇ ಕರ್ಮಾಪರಾಧಿನಃ ॥೧೫೮॥

ಧನೋಷ್ಮಣಾ ಪಚ್ಯಮಾನಾಸ್ತಾನ್ ನಿಃಸ್ವಾನ್ ಕಾರಯೇನ್ನೃಪಃ
ಕೂಟಶಾಸನಕರ್ತೄಂಶ್ಚ ಪ್ರಕೃತೀನಾಂ ಚ ದೂಷಕಾನ್ ॥೧೫೯॥

ಸ್ತ್ರೀಬಾಲಬ್ರಾಹ್ಮಣಘ್ನಾಂಶ್ಚ ವಧ್ಯಾದ್ದ್ವಿಟ್ಸೇವಿನಸ್ತಥಾ ।
ಅಮಾತ್ಯಃ ಪ್ರಾಡ್ವಿವಾಕೋ ವಾ ಯಃ ಕುರ್ಯಾತ್ಕಾರ್ಯಮನ್ಯಥಾ ॥೧೬೦॥

ತಸ್ಯ ಸರ್ವಸ್ವಮಾದಾಯ ತಂ ರಾಜಾ ವಿಪ್ರವಾಸಯೇತ್ ।
ಬ್ರಹ್ಮಘ್ನಶ್ಚ ಸುರಾಪಶ್ಚ ತಸ್ಕರೋ ಗುರುತಲ್ಪಗಃ ॥೧೬೧॥

---

೧೫೮. ಯಜಮಾನನಿಂದ ತಮ್ಮ ತಮ್ಮ ಕಾರ್ಯಗಳಲ್ಲಿ ನಿಯಮಿಸಲ್ಪಟ್ಟವರು ಅವುಗಳನ್ನು ಸರಿಯಾಗಿ ಮಾಡದೆ ಕೆಡಿಸಿದರೆ ಅವರನ್ನು ನಿರ್ಘೃಣರೆಂದೂ ಕ್ರೂರಮನಸ್ಸಿನವರೆಂದೂ ಹೇಳಬೇಕು. ಅವರೆಲ್ಲರೂ ಕೆಲಸವನ್ನು ಹಾಳುಮಾಡಿದ ಅಪರಾಧಿಗಳು. ಹಣದಾಸೆಯ ಬೇಗೆಯಿಂದ ಬೇಯುತ್ತಿರುವ ಅವರ ಆಸ್ತಿಯನ್ನು ಕಿತ್ತುಕೊಂಡು ರಾಜನು ಅವರನ್ನು ದರಿದ್ರರನ್ನಾಗಿ ಮಾಡಬೇಕು.

೧೫೯. ರಾಜನ ಹೆಸರನ್ನು ಹೇಳಿ ಕಪಟದ ಆಜ್ಞೆಯನ್ನು ಹೊರಡಿಸುವವರು, ಪ್ರಜೆಗಳ ಮನಸ್ಸನ್ನು ಕೆಡಿಸುವವರು, ಸ್ತ್ರೀಯರ ಬಾಲಕರ ಮತ್ತು ಬ್ರಾಹ್ಮಣರ ಕೊಲೆಯನ್ನು ಮಾಡುವವರು, ರಾಜನ ಶತ್ರುಗಳ ಕಡೆಗೆ ಸೇರಿದವರು ಇವರನ್ನು ವಧಿಸಬೇಕು.

೧೬೦. ತನ್ನ ಕರ್ತವ್ಯವನ್ನು ಸರಿಯಾಗಿ ನಿರ್ವಹಿಸದೆ ನ್ಯಾಯಕ್ಕೆ ವಿರೋಧವಾಗಿ ವರ್ತಿಸುವ ಸಚಿವನ ಅಥವಾ ನ್ಯಾಯಾಧಿಪತಿಯ ಆಸ್ತಿಯೆಲ್ಲವನ್ನೂ ಅರಸನು ಮುಟ್ಟುಗೋಲುಹಾಕಿಕೊಂಡು ಅವನನ್ನು ಗಡೀಪಾರು ಮಾಡಬೇಕು.

೧೬೧. ಬ್ರಾಹ್ಮಣನನ್ನು ಕೊಂದವನು, ಮದ್ಯವನ್ನು ಕುಡಿದವನು, ಕಳ್ಳತನ ಮಾಡಿದವನು, ಗುರುಪತ್ನಿಯೊಡನೆ ಕೂಡಿದವನು ಇವರೆಲ್ಲರೂ ಮಹಾಪಾತಕಿಗಳು. ಇವರನ್ನು ಸಮಾಜದಿಂದ ಬೇರೆಯಾಗಿಟ್ಟು ಶಿಕ್ಷಿಸಬೇಕು.

ಏತಾನ್ ಸರ್ವಾನ್ ಪೃಥಗ್ಜ್ಞಿಂಸ್ತಾನ್ಮಹಾಪಾತಕಿನೋ ನರಾನ್ ।
ಮಹಾಪಾತಕಿನೋ ವಧ್ಯಾ ಬ್ರಾಹ್ಮಣಂ ತು ವಿವಾಸಯೇತ್ ॥೧೬೨॥

ಕೃತಚಿಹ್ನಂ ಸ್ವದೇಶಾಚ್ಚ ಶೃಣು ಚಿಹ್ನಾಕೃತಿಂ ತತಃ ।
ಗುರುತಲ್ಪೇ ಭಗಃ ಕಾರ್ಯಃ ಸುರಾಪಾನೇ ಸುರಾಧ್ವಜಃ ॥೧೬೩॥

ಸ್ತೇನೇ ತು ಶ್ವಪದಂ ತದ್ವದ್ಬ್ರಹ್ಮಹನ್ಯಶಿರಾಃ ಪುಮಾನ್ ।
ಅಸಂಭಾಷ್ಯಾ ಹ್ಯಸಂಭೋಜ್ಯಾ ಅಸಂವಾಹ್ಯಾ ವಿಶೇಷತಃ ॥೧೬೪॥

ತ್ಯಕ್ತವ್ಯಾಶ್ಚ ತಥಾ ರಾಜಜ್ಞಾತಿಸಂಬಂಧಿಬಾಂಧವೈಃ ।
ಮಹಾಪಾತಕಿನೋ ವಿತ್ತಮಾದಾಯ ನೃಪತಿಃ ಸ್ವಯಂ ॥೧೬೫॥

ಅಪ್ಸು ಪ್ರವೇಶಯೇದ್ದಂಡಂ ವರುಣಾಯೋಪಪಾದಯೇತ್ ।
ಸಹೋಢಂ ನ ವಿನಾ ಚೋರಂ ಘಾತಯೇದ್ಧಾರ್ಮಿಕೋ ನೃಪಃ ॥೧೬೬॥

---

೧೬೨. ಮೇಲೆ ಹೇಳಿದ ಮಹಾಪಾತಕಿಗಳನ್ನು ವಧಿಸಬೇಕು. ಬ್ರಾಹ್ಮಣನು ಆ ಪಾಪವನ್ನು ಮಾಡಿದ್ದರೆ ಅವನ ಮೈ ಮೇಲೆ ಗುರುತನ್ನು ಮಾಡಿ ಸ್ವದೇಶದಿಂದ ಓಡಿಸಬೇಕು. ಗುರುತಿನ ಆಕಾರವನ್ನು ಹೇಳುವೆನು ಕೇಳು.

೧೬೩. ಗುರುಪತ್ನೀಗಮನದಲ್ಲಿ ಯೋನಿಯನ್ನೂ, ಸುರಾಪಾನದಲ್ಲಿ ಮದ್ಯ ಗೃಹದ ಬಾವುಟವನ್ನೂ, ಕಳ್ಳತನದಲ್ಲಿ ನಾಯಿಯ ಹೆಜ್ಜೆಯನ್ನೂ, ಬ್ರಾಹ್ಮಣ ವಧದಲ್ಲಿ ತಲೆಯಿಲ್ಲದ ಮನುಷ್ಯನನ್ನೂ ಗುರುತುಮಾಡಬೇಕು.

೧೬೪. ಮಹಾಪಾತಕಿಗಳೊಡನೆ ಮಾತನಾಡಬಾರದು. ಊಟಮಾಡ ಬಾರದು. ಸತ್ತರೆ ಅವರ ಶವವನ್ನು ಹೊರಬಾರದು. ಜ್ಞಾತಿಗಳು, ಸಂಬಂಧಿಗಳು ಮತ್ತು ಬಂಧುಗಳು ಅವನೊಡನೆ ಸಂಬಂಧವನ್ನು ತೊರೆಯಬೇಕು.

೧೬೫. ಮಹಾಪಾತಕವನ್ನು ಮಾಡಿದಾತನ ಹಣಕಾಸುಗಳನ್ನು ರಾಜನು ತಾನೇ ಕೊಂಡೊಯ್ದು ನೀರಿನಲ್ಲಿ ಹಾಕಬೇಕು. ಅವನಿಗೆ ವಿಧಿಸಿದ ದಂಡವನ್ನು ಜಲದೇವತೆಯಾದ ವರುಣನಿಗೆ ಅರ್ಪಿಸಬೇಕು.

೧೬೬. ಧರ್ಮನಿರತನಾದ ರಾಜನು ಕದ್ದ ಪದಾರ್ಥವು ಸಿಕ್ಕದಿರುವಾಗ ಕಳ್ಳನನ್ನು ವಧಿಸಬಾರದು. ಕಳವಿನ ಪದಾರ್ಥವೂ ಉಪಕರಣಗಳೂ ಸಿಕ್ಕಿದೊಡನೆ ತಡಮಾಡದೆ ವಧಿಸಬೇಕು.

ಸಹೋಢಂ ಸೋಪಕರಣಂ ಘಾತಯೇದವಿಚಾರಯನ್ ।
ಗ್ರಾಮೇಷ್ವಪಿ ಚ ಯೇ ಕೇಚಿಚ್ಚೋರಾಣಾಂ ಭಕ್ತದಾಯಕಾಃ ॥೧೬೭॥

ಭಾಂಡಾವಕಾಶದಾಶ್ಚೈವ ಸರ್ವಾಂಸ್ತಾನಪಿ ಘಾತಯೇತ್ ।
ರಾಷ್ಟ್ರೇಷು ರಾಜ್ಞಾಧಿಕೃತಾಃ ಸಾಮಂತಾಶ್ಚೈವ ದೂಷಕಾಃ ॥೧೬೮॥

ಅಭ್ಯಾಘಾತೇಷು ಮಧ್ಯಸ್ಥಾಃ ಕ್ಷಿಪ್ರಂ ಶಾಸ್ಯಾಸ್ತು ಚೋರವತ್ ।
ಗ್ರಾಮಘಾತೇ ಮಠಾಭಂಗೇ ಪಥಿ ಮೋಷಾಭಿಮರ್ದನೇ ॥೧೬೯॥

ಶಕ್ತಿತೋ ನಾಭಿಧಾವಂತೋ ನಿರ್ವಾಸ್ಯಾಃ ಸಪರಿಚ್ಛದಾಃ ।
ರಾಜ್ಞಃ ಕೋಶಾಪಹರ್ತೄಂಶ್ಚ ಪ್ರತಿಕೂಲೇಷು ಸಂಸ್ಥಿತಾನ್ ॥೧೭೦॥

---

೧೬೭. ಕಳ್ಳರಿಗೆ ಆಹಾರಕೊಡುವವರೂ ಅವರ ಸಾಮಾನುಗಳನ್ನಿಡಲು ಅವಕಾಶಕೊಡುವವರೂ ಗ್ರಾಮಗಳಲ್ಲಿದ್ದರೆ ಅವರೆಲ್ಲರನ್ನೂ ಮರಣದಂಡನೆಗೆ ಗುರಿಮಾಡಬೇಕು.

೧೬೮. ರಾಷ್ಟ್ರಗಳಲ್ಲಿ ರಾಜನಿಂದ ನಿಯಮಿಸಲ್ಪಟ್ಟ ಅಧಿಕಾರಿಗಳೂ ಸಾಮಂತರಾಜರೂ ಪ್ರಜೆಗಳ ಮನಸ್ಸನ್ನು ಕೆಡಿಸುತ್ತ, ಶತ್ರುಗಳು ಮುತ್ತಿದಾಗ ಸಹಾಯಕ್ಕೆ ಬಾರದೆ ತಟಸ್ಥರಾಗಿದ್ದರೆ ಅಂತಹವರನ್ನು ಕಳ್ಳರಂತೆ ಪರಿಗಣಿಸಿ ಕೂಡಲೆ ಶಿಕ್ಷಿಸಬೇಕು.

೧೬೯. ಗ್ರಾಮದಲ್ಲಿ ಅನಾಹುತ ಸಂಭವಿಸಿದಾಗ, ಮನೆಮಠಗಳಿಗೆ ಅಪಾಯವೊದಗಿದಾಗ, ಮಾರ್ಗಸ್ಥರನ್ನು ಕಳ್ಳಕಾಕರು ಮುತ್ತಿ ಸುಲಿಗೆಮಾಡುವಾಗ ತಮ್ಮ ಶಕ್ತಿಗೆ ತಕ್ಕಂತೆ ಮುಂದೆ ನುಗ್ಗಿ ಸಹಾಯಮಾಡದವರನ್ನು ರಾಜನು ಪರಿವಾರಸಮೇತವಾಗಿ ದೇಶದಿಂದ ಹೊರಡಿಸಬೇಕು.

೧೭೦. ಅರಸನ ಬೊಕ್ಕಸದಲ್ಲಿ ಕಳ್ಳತನಮಾಡುವವರು, ವಿರೋಧಪಕ್ಷಕ್ಕೆ ಸೇರಿದವರು, ಶತ್ರುಗಳಿಗೆ ಉಪಕಾರಮಾಡುವವರು ಇವರೆಲ್ಲರನ್ನೂ ಚಿತ್ರಹಿಂಸೆಗಳಿಗೆ ಗುರಿಮಾಡಿ ವಧಿಸಬೇಕು.

ಅರೀಣಾಮುಪಕರ್ತ್ರೂಂಶ್ಚ ಘಾತಯೇದ್ವಿವಿಧೈರ್ವಧೈಃ ।
ಸಂಧಿಂ ಕೃತ್ವಾ ತು ಯೇ ಚೌರ್ಯಂ ರಾತ್ರೌ ಕುರ್ವಂತಿ ತಸ್ಕರಾಃ ॥೧೭೧॥

ತೇಷಾಂ ಛಿತ್ವಾ ನೃಪೋ ಹಸ್ತೌ ತೀಕ್ಷ್ಣಶೂಲೇ ನಿವೇಶಯೇತ್ ।
ತಡಾಗಭೇದಕಂ ಹನ್ಯಾದಪ್ಸು ಶುದ್ಧವಧೇನ ತು ॥೧೭೨॥

ಯಸ್ತು ಪೂರ್ವಂ ನಿವಿಷ್ಟಂ ಸ್ಯಾತ್ತಡಾಗಸ್ಯೋದಕಂ ಹರೇತ್ ।
ಆಗಮಂ ಚಾಪ್ಯಪಾಂ ಭಿಂದ್ಯಾತ್ಸ ದಾಪ್ಯಃ ಪೂರ್ವಶಾಸನಂ ॥೧೭೩॥

ಕೋಷ್ಠಾಗಾರಾಯುಧಾಗಾರದೇವಗಾರವಿಭೇದಕಾ
ಪಾಪಾ ಪಾಪಸಮಾಚಾರಾ ಘಾತಯೇಚ್ಛೀಘ್ರಮೇವ ಚ ॥೧೭೪॥

ಸಮುತ್ಸೃಜೇದ್ರಾಜಮಾರ್ಗೇ ಯಸ್ತ್ವಮೇಧ್ಯಮನಾಪದಿ ।
ಸ ಹಿ ಕಾರ್ಷಾಪಣಂ ದಂಡ್ಯಸ್ತತ್ತ್ವಮೇಧ್ಯಂ ಚ ಶೋಧಯೇತ್ ॥೧೭೫॥

---

೧೭೧. ರಾತ್ರಿಯಲ್ಲಿ ಕನ್ನವನ್ನು ಕೊರೆದು ಮನೆಗೆ ನುಗ್ಗಿ ಕಳವುಮಾಡುವ ಕಳ್ಳರ ಕೈಗಳನ್ನು ಕಡಿದುಹಾಕಿ ಅವರನ್ನು ಮೊನಚಾದ ಶೂಲಕ್ಕೆ ಏರಿಸಬೇಕು.

೧೭೨-೧೭೩. ಕೆರೆಯೊಡೆದವನನ್ನು ನೀರಿನಲ್ಲಿ ಮುಳುಗಿಸಿ ಕೊಲ್ಲಬೇಕು. ಜನರ ಮತ್ತು ದನಕರುಗಳ ಉಪಯೋಗಕ್ಕಾಗಿ ಕೂಡಿಟ್ಟಿರುವ ನೀರನ್ನು ನಿರರ್ಥಕವಾಗಿ ಬಿಟ್ಟುಬಿಡುವುದು, ಕೆರೆಗೆ ನೀರು ಬರುವ ಕಾಲುವೆಯನ್ನು ಒಡೆಯುವುದು ಹೀಗೆ ಮಾಡಿದವನಿಗೆ ಮೇಲೆ ಹೇಳಿದ ಶಿಕ್ಷೆಯನ್ನೇ ವಿಧಿಸಬೇಕು.

೧೭೪. ಉಗ್ರಾಣ, ಆಯುಧಶಾಲೆ, ದೇವಾಲಯ ಇವುಗಳನ್ನು ಒಡೆಯುವ ಪಾಪಸ್ವಭಾವದ ದುರ್ಮಾರ್ಗಿಗಳನ್ನು ಶೀಘ್ರವಾಗಿ ಘಾತಿಸಬೇಕು.

೧೭೫. ರೋಗಾದ್ಯುಪದ್ರವಗಳಿಲ್ಲದೆ ಸ್ವಸ್ಥವಾಗಿರುವಾಗ ರಾಜಮಾರ್ಗದಲ್ಲಿ ಮಲವಿಸರ್ಜನಮಾಡುವವನಿಗೆ ಕಾರ್ಷಾಪಣದ (ಬೆಳ್ಳಿಯನಾಣ್ಯ) ದಂಡವನ್ನು ವಿಧಿಸಬೇಕು. ಮತ್ತು ಅವನಿಂದಲೇ ಆ ಮಲವನ್ನು ತೆಗೆದುಹಾಕಿಸಿ ಆ ಸ್ಥಳವನ್ನು ಶುಚಿಮಾಡಿಸಬೇಕು.

**ಆಪದ್ಗತೋऽಥವಾ ವೃದ್ಧೋ ಗರ್ಭಿಣೀ ಬಾಲ ಏವ ಚ ।**
**ಪರಿಭಾಷಣಮರ್ಹಂತಿ ನ ಚ ಶೋಧ್ಯಮಿತಿ ಸ್ಥಿತಿಃ ॥೧೭೬॥**

**ಪ್ರಥಮಂ ಸಾಹಸಂ ದಂಡ್ಯಃ ಪಶೌ ಮಿಥ್ಯಾ ಚಿಕಿತ್ಸತೇ ।**
**ಪುರುಷೇ ಮಧ್ಯಮಂ ದಂಡ್ಯ ಉತ್ತಮೇ ಚ ತಥೋತ್ತಮಂ ॥೧೭೭॥**

**ಛತ್ರಸ್ಯ ಧ್ವಜಯಷ್ಟೀನಾಂ ಪ್ರತಿಮಾನಾಂ ಚ ಭೇದಕಾಃ ।**
**ಪ್ರತಿಕುರ್ಯುಸ್ತತಃ ಸರ್ವೇ ಪಂಚ ದಂಡ್ಯಾಶ್ಶತಾನಿ ಚ ॥೧೭೮॥**

**ಅದೂಷಿತಾನಾಂ ದ್ರವ್ಯಾಣಾಂ ದೂಷಣೇ ಭೇದನೇ ತಥಾ ।**
**ಮಣೀನಾಮಪಿ ಭೇದೇನ ದಂಡ್ಯಃ ಪ್ರಥಮಸಾಹಸಂ ॥೧೭೯॥**

---

೧೭೬. ರೋಗಿ, ವೃದ್ಧ, ಗರ್ಭಿಣಿ, ಬಾಲಕ ಇವರು ರಾಜಮಾರ್ಗದಲ್ಲಿ ಹೊಲಸುಮಾಡಿದರೆ ಅವರನ್ನು ಆಕ್ಷೇಪಿಸಬೇಕು. ಇದೇ ಅವರಿಗೆ ಶಿಕ್ಷೆ. ಅವರಿಂದ ಆ ಸ್ಥಳವನ್ನು ಚೊಕ್ಕಟಮಾಡಿಸಬೇಕಾಗಿಲ್ಲ.

೧೭೭. ತಕ್ಕ ಯೋಗ್ಯತೆಯಿಲ್ಲದೆ ವೈದ್ಯನೆಂದು ಹೇಳಿಕೊಂಡು ಪಶುಗಳಿಗೆ ಚಿಕಿತ್ಸೆಮಾಡಿದರೆ ಅವನಿಗೆ ಸಾಧಾರಣದಂಡವನ್ನೂ (೨೭೦ ದುಡ್ಡು) ಮನುಷ್ಯನಿಗೆ ಚಿಕಿತ್ಸೆಮಾಡಿದರೆ ಮಧ್ಯಮ ದಂಡವನ್ನೂ (೫೪೦ ದುಡ್ಡು) ಸಮಾಜದಲ್ಲಿ ಮುಖ್ಯಸ್ಥನಾದವನಿಗೆ ಚಿಕಿತ್ಸೆಮಾಡಿದರೆ ಉತ್ತಮ ದಂಡವನ್ನೂ (೧೦೮೦ ದುಡ್ಡು) ವಿಧಿಸಬೇಕು.

೧೭೮. ರಾಜಸಂಬಂಧವಾದ ಛತ್ರ, ಧ್ವಜ, ದಂಡ, ಪ್ರತಿಮೆ ಇವುಗಳನ್ನು ಮುರಿದುಹಾಕುವವರು ಅವುಗಳನ್ನು ಪುನಃ ಸರಿಪಡಿಸಬೇಕು. ಅಲ್ಲದೆ ಐದುನೂರು ಹಣಗಳ ದಂಡವನ್ನು ತೆರಬೇಕು.

೧೭೯. ನಿರ್ದುಷ್ಟವಾದ ವಸ್ತುಗಳನ್ನು ಕೆಡಿಸಲಿ ಅಥವಾ ರತ್ನಗಳನ್ನು ಒಡೆಯಲಿ ಅವನಿಗೆ ಸಾಧಾರಣ ದಂಡವನ್ನು (೨೭೦ ಕಾರ್ಷಾಪಣ) ವಿಧಿಸಬೇಕು. (ಅಲ್ಲದೆ ಪದಾರ್ಥದ ನಷ್ಟವನ್ನು ಕಟ್ಟಿಕೊಡಬೇಕೆಂದು ಹಿಂದೆಯೇ ಹೇಳಿದೆ).

ಸಮಂ ಚ ವಿಷಮಂ ಚೈವ ಕುರುತೇ ಮೂಲ್ಯತೋಽಪಿ ವಾ ।
ಸಮಾಪ್ನುಯಾತ್ಸ ವೈ ಪೂರ್ವಂ ದಮಂ ಮಧ್ಯಮಮೇವ ಚ ॥೧೮೦॥

ಬಂಧನಾನಿ ಚ ಸರ್ವಾಣಿ ರಾಜಮಾರ್ಗೇ ನಿವೇಶಯೇತ್ ।
ಕ್ಲಿಶ್ಯಂತೋ ಯತ್ರ ದೃಶ್ಯಂತೇ ವಿಕೃತಾಃ ಪಾಪಕಾರಿಣಃ ॥೧೮೧॥

ಪ್ರಾಕಾರಸ್ಯ ಚ ಭೇತ್ತಾರಂ ಪರಿಖಾಣಾಂ ಚ ಭೇದಕಂ ।
ದ್ವಾರಾಣಾಂ ಚೈವ ಭೇತ್ತಾರಂ ಕ್ಷಿಪ್ರಂ ನಿರ್ವಾಸಯೇತ್ಪುರಾತ್ । ॥೧೮೨॥

ಮೂಲಕರ್ಮಾಭಿಚಾರೇಷು ಕರ್ತವ್ಯೋ ದ್ವಿಶತೋ ದಮಃ ।
ಅಬೀಜವಿಕ್ರಯೀ ಯಶ್ಚ ಬೀಜೋತ್ಕರ್ಷಕ ಏವ ಚ । ॥೧೮೩॥

---

೧೮೦. ಸಮಾನವಾದ ವಸ್ತುಗಳಿಗೆ ಬೆಲೆಯಲ್ಲಿ ವ್ಯತ್ಯಾಸವನ್ನು ಮಾಡ ತಕ್ಕವನಿಗೆ ಸಾಧಾರಣದಂಡವನ್ನೂ, ಯೋಗ್ಯತೆಯಲ್ಲಿ ಹೆಚ್ಚುಕಡಿಮೆಯಿರುವ ವಸ್ತುಗಳಿಗೆ ಒಂದೇ ಬೆಲೆಯನ್ನು ಕಟ್ಟುವವನಿಗೆ ಮಧ್ಯಮ ದಂಡವನ್ನೂ ವಿಧಿಸಬೇಕು.

೧೮೧. ಸರೆಮನೆಗಳನ್ನೆಲ್ಲ ರಾಜಮಾರ್ಗದಲ್ಲಿ ನಿರ್ಮಿಸಬೇಕು. ರಾಜ ಶಾಸನಗಳನ್ನು ಮೀರಿ ನಡೆದವರು ವಿಕಾರವಾದ ರೂಪದಿಂದ ಕಷ್ಟಪಡುತ್ತಿರು ವುದು ಎಲ್ಲರಿಗೂ ಕಾಣುವಂತಿರಬೇಕು.

೧೮೨. ಕೋಟೆ, ಕಂದಕ, ಹೆಬ್ಬಾಗಿಲು ಇವುಗಳಿಗೆ ಅಪಾಯತರುವ ದುಷ್ಕರ್ಮಿಗಳನ್ನು ಒಡನೆ ಪಟ್ಟಣದಿಂದ ಹೊರಹೊರಡಿಸಬೇಕು.

೧೮೩. ಯಕ್ಷಿಣಿ, ಮಾಟ ಮುಂತಾದುದನ್ನು ಮಾಡಿ ಜನರನ್ನು ಮೋಸ ಗೊಳಿಸುವವರಿಗೆ ಇನ್ನೂರು ಹಣಗಳ ದಂಡವನ್ನು ಹಾಕಬೇಕು. ಒಪ್ಪಿಗೆಯಂತೆ ಬಿತ್ತನೆಗೆ ಬೀಜವನ್ನೂ ಕೊಡದಿರುವವನೂ, ಬಿತ್ತಿದ ಬೀಜವನ್ನು ಕಿತ್ತುಹಾಕುವ ವನೂ, ಬಾಂದುಗುಡ್ಡೆ ಮತ್ತು ಗಡಿಯ ಕಲ್ಲುಗಳನ್ನು ನಾಶಪಡಿಸುವವನೂ ಘೋರವಾದ ವಧೆಗೆ ಗುರಿಯಾಗಬೇಕು.

ಮರ್ಯಾದಾಭೇದಕಶ್ಚಾಪಿ ವಿಕೃತಂ ವಧಮಾಪ್ನುಯಾತ್
ಸರ್ವಸಂಕರಪಾಪಿಷ್ಠಂ ಹೇಮಕಾರಂ ನರಾಧಿಪ ।೧೮೪॥

ಅನ್ಯಾಯೇ ವರ್ತಮಾನಂ ಚ ಛೇದಯೇಲ್ಲವಶಃ ಕ್ಷುರೈಃ ।
ದ್ರವ್ಯಮಾದಾಯ ವಣಿಜಾಮನರ್ಘೇಣಾವರುಂಧತಾ ।೧೮೫॥

ದ್ರವ್ಯಾಣಾಂ ದೂಷಕೋ ಯಸ್ತು ಪ್ರತಿಚ್ಛನ್ನಸ್ಯ ವಿಕ್ರಯೀ ।
ಮಧ್ಯಮಂ ಪ್ರಾಪ್ನುಯಾದ್ದಂಡಂ ಕೂಟಕರ್ತಾ ತಥೋತ್ತಮಂ ॥೧೮೬॥

ರಾಜಾ ಪೃಥಕ್ಪೃಥಕ್ಕುರ್ಯಾದ್ದಂಡಂ ಚೋತ್ತಮಸಾಹಸಂ ।
ಶಾಸ್ತ್ರಾಣಾಂ ಯಜ್ಞತಪಸಾಂ ದೇಶಾನಾಂ ಕ್ಷೇಪಕೋ ನರಃ ॥೧೮೭॥

ದೇವತಾನಾಂ ಸತೀನಾಂ ಚ ಉತ್ತಮಂ ದಂಡಮರ್ಹತಿ ।
ಏಕಸ್ಯ ದಂಡಪಾರುಷ್ಯೇ ಬಹೂನಾಂ ದ್ವಿಗುಣೋ ದಮಃ ॥೧೮೮॥

---

೧೮೪. ಅನ್ಯಾಯದಲ್ಲಿ ಪ್ರವರ್ತಿಸುವ ಚಿನ್ನಗೆಲಸದವನ್ನು ಕತ್ತಿಯಿಂದ ತುಂಡುತುಂಡಾಗಿ ಕತ್ತರಿಸಿ ಹಾಕಬೇಕು. ಓ ರಾಜಾ, ಅವನು ಸಕಲ ವಿಧವಾದ ಪಾಪಗಳ ಸಂಕರದಿಂದ ಆದವನೆಂದು ತಿಳಿಯಬೇಕು.

೧೮೫-೧೮೬. ಪದಾರ್ಥಗಳನ್ನು ಶೇಖರಿಸಿ ಇಟ್ಟುಕೊಂಡು, ಬೆಲೆ ಹೆಚ್ಚಾಗಲೆಂದು ನಿರೀಕ್ಷಿಸುತ್ತ ಜನರಿಗೆ ಅವುಗಳನ್ನು ಮಾರದೆ ಇರತಕ್ಕವರಿಗೂ, ಬೆರಕೆಯಿಂದ ಪದಾರ್ಥಗಳನ್ನು ಕೆಡಿಸಿ ಮಾರುವವರಿಗೂ, ಗುಟ್ಟುಗುಟ್ಟಾಗಿ ಹೆಚ್ಚು ಬೆಲೆಗೆ ಮಾರತಕ್ಕವರಿಗೂ ಮಧ್ಯಮ ದಂಡವನ್ನು ಎಂದರೆ ಐದು ನೂರು ಕಾರ್ಷಾಪಣಗಳನ್ನು ಹೊರಿಸಬೇಕು. ಇದಕ್ಕೆಲ್ಲ ಒಳಸಂಚು ಮಾಡುವಾತನಿಗೆ ಉತ್ತಮ ದಂಡವನ್ನು ಎಂದರೆ ಒಂದು ಸಾವಿರ ಕಾರ್ಷಾಪಣಗಳನ್ನು ವಿಧಿಸಬೇಕು.

೧೮೭. ಶಾಸ್ತ್ರಗಳನ್ನೂ, ಯಜ್ಞಗಳನ್ನೂ, ತಪಸ್ಸನ್ನೂ ದೇವತೆಗಳನ್ನೂ, ಸಾಧ್ವಿಯರನ್ನೂ, ನಿಂದಿಸುವ ಮನುಷ್ಯನಿಗೆ ಉತ್ತಮದಂಡವನ್ನು ಎಂದಿರೆ ಸಾವಿರ ಕಾರ್ಷಾಪಣಗಳ ದಂಡವನ್ನು ಹಾಕಬೇಕು.

೧೮೮-೧೮೯. ಒಬ್ಬ ಅಧಿಕಾರಿಯು ಹಲವರಿಗೆ ಅತ್ಯುಗ್ರವಾದ ಶಿಕ್ಷೆಯನ್ನು ವಿಧಿಸುತ್ತಿದ್ದರೆ ಅವನನ್ನು ಅಪರಾಧಿಗಳಿಗೆ ಇಮ್ಮಡಿಯಾಗಿ ಶಿಕ್ಷಿಸಬೇಕು. ಯಾವನು

ಕಲಹೇ ಯದ್ಗತೋ ದಾಪ್ಯೋ ದಂಡಶ್ಚ ದ್ವಿಗುಣಸ್ತತಃ ।
ಮಾಧ್ಯಮಂ ಬ್ರಾಹ್ಮಣಂ ರಾಜಾ ವಿಷಯಾತ್ಸ್ವಿಪ್ರವಾಸಯೇತ್ ॥೧೮೯॥

ಲಶುನಂ ಚ ಪಲಾಂಡುಂ ಚ ಶೂಕರಂ ಗ್ರಾಮಕುಕ್ಕುಟಂ ।
ತಥಾ ಪಂಚನಖಂ ಸರ್ವಂ ಭಕ್ಷ್ಯಾದನ್ಯತ್ತು ಭಕ್ಷಯೇತ್ ॥೧೯೦॥

ವಿವಾಸಯೇತ್ಕ್ಷಿಪ್ರಮೇವ ಬ್ರಾಹ್ಮಣಂ ವಿಷಯಾತ್ಸ್ವಕಾತ್ ।
ಅಭಕ್ಷ್ಯಭಕ್ಷಣೇ ದಂಡ್ಯಃ ಶೂದ್ರೋ ಭವತಿ ಕೃಷ್ಣಲಂ ॥೧೯೧॥

ಬ್ರಾಹ್ಮಣಕ್ಷತ್ರಿಯವಿಶಾಂ ಚತುಸ್ತ್ರಿದ್ವಿಗುಣಂ ಸ್ಮೃತಂ ।
ಯಃ ಸಾಹಸಂ ಕಾರಯತಿ ಸ ದಂಡ್ಯೋ ದ್ವಿಗುಣಂ ದಮಂ ॥೧೯೨॥

---

ಜಗಳಕ್ಕೆ ಕಾರಣನೋ ಅವನಿಗೆ ಉಳಿದವರ ಎರಡರಷ್ಟು ದಂಡವನ್ನು ವಿಧಿಸಬೇಕು. ಬ್ರಾಹ್ಮಣನು ಮಧ್ಯಸ್ಥನಾಗಿ ನಿಂತು ಕಲಹವನ್ನು ಹೆಚ್ಚಿಸುತ್ತಿದ್ದರೆ ಅವನನ್ನು ದೇಶದಿಂದ ಹೊರಡಿಸಬೇಕು.

೧೯೦. ಬೆಳ್ಳುಳ್ಳಿ, ಈರುಳ್ಳಿ, ಹಂದಿ, ಊರುಕೋಳಿ, ಭಕ್ಷ್ಯಾರ್ಹವಲ್ಲ ವೆಂದು ಶಾಸ್ತ್ರಗಳಲ್ಲಿ ಹೇಳಿರುವ ಐದು ಉಗುರಿನ ಪ್ರಾಣಿಗಳು ಇವುಗಳನ್ನು ತಿನ್ನುವ ಬ್ರಾಹ್ಮಣನನ್ನು ಒಡನೆ ನಾಡಿನಿಂದ ಹೊರದೂಡಬೇಕು.

೧೯೧ ಭಕ್ಷಿಸುವುದಕ್ಕೆ ಅನರ್ಹವಾದ ಎಂದರೆ ಶಾಸ್ತ್ರನಿಷಿದ್ಧವಾದ ಪದಾರ್ಥ ಗಳನ್ನು ಭಕ್ಷಿಸಿದರೆ ಶೂದ್ರನಿಗೆ ಒಂದು, ಬ್ರಾಹ್ಮಣನಿಗೆ ನಾಲ್ಕು, ಕ್ಷತ್ರಿಯನಿಗೆ ಮೂರು ಮತ್ತು ವೈಶ್ಯನಿಗೆ ಎರಡು ಕೃಷ್ಣಲಗಳನ್ನು (ಗುಲಗಂಜಿತೂಕದ ಚಿನ್ನದ ನಾಣ್ಯವನ್ನು) ದಂಡವಾಗಿ ವಿಧಿಸಬೇಕು.

೧೯೨. ಇತರರಿಂದ ಅಪರಾಧವನ್ನು ಮಾಡಿಸುವಾತನಿಗೆ ಅಪರಾಧಿಯ ಇಮ್ಮಡಿಯಾಗಿ ಶಿಕ್ಷೆಯನ್ನು ಕೊಡಬೇಕು. "ಎಷ್ಟಾದರೂ ಆಗಲಿ; ನಾನು ಕೊಡುತ್ತೇನೆ" ಎಂದು ಉಬ್ಬಿಸಿ ಅಕೃತ್ಯವನ್ನು ಮಾಡಿಸುವವನು ನಾಲ್ಕರಷ್ಟು ಶಿಕ್ಷೆಯನ್ನು ಅನುಭವಿಸಬೇಕು.

ಯಃ ಸ್ವೀವಮುಕ್ತ್ವಾಹಂ ದಾತಾ ಕಾರಯೇತ್ಸ ಚತುರ್ಗುಣಂ ।
ಸಂದಿಷ್ಟಸ್ಯಾಪ್ರದಾತಾ ಚ ಸಮುದ್ರಗೃಹಭೇದಕಃ ॥೧೯೩॥

ಪಂಚಾಶತ್ಪಣಿಕೋ ದಂಡಸ್ತಯೋಃ ಕಾರ್ಯೋ ಮಹೀಕ್ಷಿತಾ ।
ಅಸ್ಪೃಶ್ಯಂ ಚ ಸ್ಪೃಶನ್ಕಾರ್ಯೋ ಹ್ಯಯೋಗ್ಯೋ ಯೋಗ್ಯಕರ್ಮಕೃತ್

ಪುಂಸ್ತ್ವಹರ್ತಾ ಪಶುನಾಂ ಚ ದಾಸೀಗರ್ಭವಿನಾಶಕೃತ್ ।
ಶೂದ್ರಪ್ರವ್ರಜಿತಾನಾಂ ಚ ದೈವೇ ಪಿತ್ರ್ಯೇ ಚ ಭೋಜಕಃ ॥೧೯೫॥

ಅವ್ರಜ್ಯ ಬಾಢಮುಕ್ತ್ವಾ ತು ತಥೈವ ಚ ನಿಮಂತ್ರಣೇ ।
ಏತೇ ಕಾರ್ಷಾಪಣಶತಂ ಸರ್ವೇ ದಂಡ್ಯಾ ಮಹೀಕ್ಷಿತಾ ॥೧೯೬॥

ದುಃಖೋತ್ಪಾದಿ ಗೃಹೇ ದ್ರವ್ಯಂ ಕ್ಷಿಪನ್ ದಂಡ್ಯಸ್ತು ಕೃಷ್ಣಲಂ ॥೧೯೭॥

---

೧೯೩. ಒಪ್ಪಿಕೊಂಡುದನ್ನು ಕೊಡದವನು, ತಕ್ಕ ಅಧಿಕಾರವಿಲ್ಲದೆ ಮನೆಗೆ ಹಾಕಿದ ಮುದ್ರೆಯನ್ನು ಒಡೆಯುವವನು ಇವರಿಬ್ಬರಿಗೂ ರಾಜನು ಐವತ್ತು ಹಣಗಳ ದಂಡವನ್ನು ವಿಧಿಸಬೇಕು.

೧೯೪-೧೯೬. ಅಸ್ಪೃಶ್ಯನನ್ನು ಮುಟ್ಟುವ ಉತ್ತಮವರ್ಣದವನು, ಯೋಗ್ಯನ ಕರ್ಮವನ್ನು ಮಾಡುವ ಅಯೋಗ್ಯನು, ಪಶುಗಳ ಪುಂಸ್ತ್ವವನ್ನು ನಿಷ್ಕಾರಣವಾಗಿ ತಪ್ಪಿಸುವವನು, ದಾಸಿಯ ಗರ್ಭವನ್ನು ವಿನಾಶಗೊಳಿಸುವವನು, ದೇವಕರ್ಮ ದಲ್ಲಿಯೂ ಪಿತೃಕರ್ಮದಲ್ಲಿಯೂ ಶೂದ್ರಭಿಕ್ಷುವಿಗೆ ಭೋಜನಮಾಡಿಸುವವನು, ಊಟಕ್ಕೆ ಬರುವುದಾಗಿ ಒಪ್ಪಿಕೊಂಡು ನಿಷ್ಕಾರಣವಾಗಿ ಹೋಗದಿರುವವನು ಇವರೆಲ್ಲರಿಗೂ ರಾಜನು ಒಂದುನೂರು ಕಾರ್ಷಾಪಣಗಳ ದಂಡವನ್ನು ಹಾಕಬೇಕು.

೧೯೭-೧೯೮. ಅಪಾಯವನ್ನುಂಟುಮಾಡುವ ಪದಾರ್ಥವನ್ನು ತಂದು ಮನೆ ಯಲ್ಲಿ ಇರಿಸುವಾತನಿಗೆ ಕೃಷ್ಣಲವನ್ನು (ಒಂದು ಗುಲಗಂಜಿತೂಕದ ಚಿನ್ನದ ನಾಣ್ಯ) ದಂಡವಾಗಿ ವಿಧಿಸಬೇಕು. ತಂದೆಮಕ್ಕಳ ಜಗಳದಲ್ಲಿ ಸಾಕ್ಷಿಯಾಗಿ ಹೋಗತಕ್ಕ

ಪಿತಾಪುತ್ರವಿರೋಧೇ ಚ ಸಾಕ್ಷಿಣಾಂ ದ್ವಿಶತೋ ದಮಃ ।
ಸ್ಯಾನ್ನರಶ್ಚ ತಥಾರ್ಯಃ ಸ್ಯಾತ್ತಸ್ಯಾಪ್ಯಷ್ಟಶತೋ ದಮಃ ॥೧೯೮॥
ತುಲಾಶಾಸನಮಾನಾನಾಂ ಕೂಟಕೃನ್ನಾಣಕಸ್ಯ ಚ ।
ಏಭಿಶ್ಚ ವ್ಯವಹರ್ತಾ ಚ ಸ ದಂಡ್ಯೋ ದಮಮುತ್ತಮಂ ॥೧೯೯॥
ವಿಷಾಗ್ನಿದಾಂ ಪತಿಗುರುನಿಜಾಪತ್ಯಪ್ರಮಾಪಣೀಂ ।
ವಿಕರ್ಣನಾಸಿಕಾಂ ವ್ರೋಷ್ಠೀಂ ಕೃತ್ವಾ ಗೋಭಿಃ ಪ್ರಮಾಪಯೇತ್ ॥೨೦೦॥
ಗ್ರಾಮಸ್ಯ ದಾಹಕಾ ಯೇ ಚ ಯೇ ಚ ಕ್ಷೇತ್ರಸ್ಯ ವೇಶ್ಮನಃ ।
ರಾಜಪತ್ನ್ಯಭಿಗಾಮೀ ಚ ದಗ್ಧವ್ಯಾಸ್ತೇ ಕಟಾಗ್ನಿನಾ ॥೨೦೧॥
ಊನಂ ವಾಪ್ಯಧಿಕಂ ಚಾಪಿ ಲಿಖೇದ್ಯೋ ರಾಜಶಾಸನಂ ।
ಪಾರದಾರಿಕಚೌರಂ ವಾ ಮುಂಚತೋ ದಂಡ ಉತ್ತಮಃ ॥೨೦೨॥

---

ವನು ಇನ್ನೂರು ಕಾರ್ಷಾಪಣಗಳ ದಂಡವನ್ನು ತೆರಬೇಕು. ಈ ಜಗಳವನ್ನು ಹೆಚ್ಚಿಸುವ ಸಲುವಾಗಿ ಮೂರನೆಯ ಮನುಷ್ಯನು ಪ್ರವೇಶಿಸಿದರೆ, ಅವನು ಎಷ್ಟೇ ಪೂಜ್ಯನಾಗಿರಲಿ—ಅವನಿಗೆ ಎಂಟುನೂರು ಕಾರ್ಷಾಪಣಗಳ ದಂಡವನ್ನು ಹೊರಿಸಬೇಕು.

೧೯೯. ತೂಕ, ಅಳತೆ, ಕಾನೂನು, ರತ್ನ ಇವುಗಳಲ್ಲಿ ಕೃತ್ರಿಮವನ್ನು ನಡೆಸುವಾತನಿಗೂ ಇವನಿಗೆ ಸಹಾಯನಾಗಿರುವವನಿಗೂ ಉತ್ತಮದಂಡವನ್ನು ಎಂದರೆ ಒಂದುಸಾವಿರ ಕಾರ್ಷಾಪಣಗಳನ್ನು ವಿಧಿಸಬೇಕು.

೨೦೦. ವಿಷಕೊಡುವವಳ, ಬೆಂಕಿಹಾಕುವವಳ, ಪತಿಯನ್ನೂ ಗುರುಗಳನ್ನೂ ಮಕ್ಕಳನ್ನೂ ಕೊಲ್ಲುವವಳ ಮೂಗನ್ನೂ ತುಟಿಗಳನ್ನೂ ಕತ್ತರಿಸಿ ಅವಳನ್ನು ಎತ್ತುಗಳಿಂದ ತುಳಿಸಿ ಕೊಲ್ಲಿಸಬೇಕು.

೨೦೧. ಊರು, ಹೊಲ, ಗದ್ದೆ ಮತ್ತು ಮನೆಗಳಿಗೆ ಬೆಂಕಿಯಿಡುವವರನ್ನೂ ರಾಜಪತ್ನಿಯಲ್ಲಿ ಸಮಾಗಮಮಾಡುವವರನ್ನೂ ಕಟಾಗ್ನಿಯಿಂದ ಸುಡಬೇಕು.

೨೦೨. ರಾಜಾಜ್ಞೆಯನ್ನು ಹೆಚ್ಚುಕಡಿಮೆಮಾಡಿ ಬರೆಯತಕ್ಕವನಿಗೂ ಪರಸ್ತ್ರೀಯರನ್ನು ಅಪಹರಿಸಿವವನನ್ನು ಶಿಕ್ಷಿಸದೆ ಬಿಟ್ಟವನಿಗೂ ಉತ್ತಮದಂಡವನ್ನು—ಒಂದುಸಾವಿರ ಕಾರ್ಷಾಪಣಗಳ ದಂಡವನ್ನು ವಿಧಿಸಬೇಕು.

**ಅಭಕ್ಷ್ಯೇಣ ದ್ವಿಜಂ ದೂಷ್ಯ ದಂಡ ಉತ್ತಮಸಾಹಸಃ ।**
**ಕ್ಷತ್ರಿಯಂ ಮಧ್ಯಮಂ ವೈಶ್ಯಂ ಪ್ರಥಮಂ ಶೂದ್ರಮರ್ಧಕಂ ॥೨೦೩॥**

**ಮೃತಾಂಗಲಗ್ನವಿಕ್ರೇತುರ್ಗುರುಂ ತಾಡಯತಸ್ತಥಾ ।**
**ರಾಜಯಾನಾಸನಾರೋಢುರ್ದಂಡ ಉತ್ತಮಸಾಹಸಃ ॥೨೦೪॥**

**ಯೋ ಮನ್ಯೇತಾಜಿತೋಽಸ್ಮೀತಿ ನ್ಯಾಯೇನಾಪಿ ಪರಾಜಿತಃ ।**
**ತಮಾಯಾಂತಂ ಪುನರ್ಜಿತ್ವಾ ದಂಡಯೇದ್ದ್ವಿಗುಣಂ ದಮಂ ॥೨೦೫॥**

**ಆಹ್ವಾನಕಾರೀ ಮಧ್ಯಃ ಸ್ಯಾದನಾಹ್ವಾನೇ ತಥಾಹ್ವಯನ್ ।**
**ದಾಂಡಿಕಸ್ಯ ಚ ಯೋ ಹಸ್ತಾದಭಿಯುಕ್ತಃ ಪಲಾಯತೇ ॥೨೦೬॥**

---

೨೦೩. ಭಕ್ಷ್ಯಾರ್ಹವಲ್ಲದ ದೂಷ್ಯವಸ್ತುವನ್ನು ಬ್ರಾಹ್ಮಣನಿಗೆ ಕೊಟ್ಟರೆ ಉತ್ತಮದಂಡವನ್ನೂ, ಕ್ಷತ್ರಿಯನಿಗೆ ಕೊಟ್ಟರೆ ಮಧ್ಯಮದಂಡವನ್ನೂ ವೈಶ್ಯನಿಗೆ ಕೊಟ್ಟರೆ ಪ್ರಥಮದಂಡವನ್ನೂ, ಶೂದ್ರನಿಗೆ ಕೊಟ್ಟರೆ ಅರ್ಧದಂಡವನ್ನೂ ವಿಧಿಸಬೇಕು—ಎಂದರೆ ಕ್ರಮವಾಗಿ ಸುಮಾರು ಸಾವಿರ, ಐನೂರು, ಇನ್ನೂರೈವತ್ತು ಮತ್ತು ನೂರಿಪ್ಪತ್ತೈದು ಕಾರ್ಷಾಪಣಗಳು.

೨೦೪. ಮೃತಪಟ್ಟವನ ಮೈಮೇಲಿದ್ದ ಒಡವೆವಸ್ತುಗಳನ್ನು ಅಪಹರಿಸಿ ಮಾರುವವನು, ಗುರುವನ್ನು ಹೊಡೆಯುವವನು, ಅರಸನ ವಾಹನವನ್ನೂ ಆಸನವನ್ನೂ ಏರುವವನು ಇವರಿಗೆ ಉತ್ತಮದಂಡವನ್ನು ವಿಧಿಸಬೇಕು.

೨೦೫. ವಾದವಿವಾದಗಳಲ್ಲಿ ನ್ಯಾಯವಾಗಿ ಪರಾಜಿತನಾಗಿದ್ದರೂ ಸೋತಿಲ್ಲವೆಂದು ಹಟಮಾಡತಕ್ಕವನನ್ನು ಮರಳಿ ಸೋಲಿಸಿ ಅವನಿಗೆ ಇಮ್ಮಡಿಯಾಗಿ ದಂಡವನ್ನು ಹಾಕಬೇಕು.

೨೦೬. ಭೋಜನಾದಿಗಳಿಗೆ ಮೊದಲು ಕ್ರಮವಾಗಿ ಕರೆಯದೆ ಆ ಹೊತ್ತಿನಲ್ಲಿ ಹೋಗಿ ಕರೆಯತಕ್ಕವನಿಗೆ ಮಧ್ಯಮದಂಡವನ್ನು ವಿಧಿಸಬೇಕು. ಶಿಕ್ಷೆಗೆ ಗುರಿಯಾದವನು ಕೋಲುಕಾರನ ಕೈಯಿಂದ ತಪ್ಪಿಸಿಕೊಂಡು ಹೋದರೆ, ಅವನನ್ನು ಹಿಡಿಯಲು ತಕ್ಕ ಪ್ರಯತ್ನವನ್ನು ಆ ಕೋಲುಕಾರನು ಮಾಡದಿರುವ ಸಂದರ್ಭದಲ್ಲಿ, ಅಪರಾಧಿಯು ಕೊಡಬೇಕಾದ ದಂಡದ ಹಣವನ್ನು ಕೋಲುಕಾರನೇ ಕೊಡಬೇಕು.

ಹೀನಃ ಪುರುಷಕಾರೇಣ ತಂ ದಂಡ್ಯಾದ್ದಾಂಡಿಕೋ ದಮಂ ।
ಪ್ರೇಷ್ಯಾಪರಾಧಾತ್ಪ್ರೇಷ್ಯಸ್ತು ಸ ದಂಡ್ಯಶ್ಚಾರ್ಧಮೇವ ಚ ॥೨೦೭

ದಂಡಾರ್ಥಂ ನಿಯಮಾರ್ಥಂ ಚ ನೀಯಮಾನೇಷು ಬಂಧನಂ ।
ಯದಿ ಕಶ್ಚಿತ್ಪಲಾಯೇತ ದಂಡಶ್ಚಾಷ್ಟಗುಣೋ ಭವೇತ್ ॥೨೦೮॥

ಅನಿಂದಿತೇ ವಿವಾದೇ ತು ನಖರೋಮಾವತಾರಣಂ ।
ಕಾರಯೇದ್ಯಃ ಸ ಪುರುಷೋ ಮಧ್ಯಮಂ ದಂಡಮರ್ಹತಿ ॥೨೦೯॥

ಬಂಧನಂ ಚಾಪ್ಯವಧ್ಯಸ್ಯ ಬಲಾನ್ಮೋಚಯತೇ ತು ಯಃ ।
ವಧ್ಯಂ ವಿಮೋಚಯೇದ್ಯಸ್ತು ದಂಡಾದ್ದ್ವಿಗುಣಭಾಗ್ಭವೇತ್ ॥೨೧೦॥

---

೨೦೭-೨೦೮. ಹಿಂದೆ ಹೇಳಿದಂತಲ್ಲದೆ ಅಪರಾಧಿಯು ಓಡಿಹೋಗುವುದಕ್ಕೆ ಆಳಿನ ತಪ್ಪು ಕಾರಣವಾಗಿದ್ದರೆ ಆ ಆಳಿಗೆ ಅರ್ಧದಂಡವನ್ನು ವಿಧಿಸಬೇಕು. ನಿಗ್ರಹ ಕ್ಕಾಗಿಯೋ ಸೆರೆಯಲ್ಲಿ ಇಡುವುದಕ್ಕಾಗಿಯೋ ಹಲವರನ್ನು ಕರೆದೊಯ್ಯುತ್ತಿರು ವಾಗ ಯಾವನಾದರೊಬ್ಬನು ತಪ್ಪಿಸಿಕೊಂಡು ಓಡಿದರೆ ಅವನನ್ನು ಹಿಡಿದು ಅವನಿಗೆ ಎಂಟುಪಾಲು ಅಧಿಕವಾಗಿ ಶಿಕ್ಷೆಯನ್ನು ಕೊಡಬೇಕು.

೨೦೯. ವಿವಾದದಲ್ಲಿ ಸತ್ಯವಾಗಿ ನಡೆದವನಿಗೆ ಯಾವನು ಶಿಕ್ಷಾರೂಪವಾಗಿ ಮುಂಡನವನ್ನು ಮಾಡಿಸಿ ಉಗುರುಗಳನ್ನು ತೆಗೆಸುವನೋ ಆ ಅಧಿಕಾರಿಗೆ ಅಪರಾಧಾನುಗುಣವಾಗಿ ಮಧ್ಯಮದಂಡವನ್ನು (ಐನೂರು ಕಾರ್ಷಾಪಣಗಳ ದಂಡವನ್ನು) ವಿಧಿಸಬೇಕು.

೨೧೦. ಮರಣದಂಡನೆಯಲ್ಲದೆ ಬೇರೆ ವಿಧವಾದ ಶಿಕ್ಷೆಗೆ ಗುರಿಯಾಗಿ ಸೆರೆಯಲ್ಲಿ ಇರುವವನನ್ನೂ, ಮರಣದಂಡನೆಗೆ ಒಳಗಾದವನನ್ನೂ ರಾಜಾಜ್ಞೆಯಿಲ್ಲದೆ ಬಲಾತ್ಕಾರವಾಗಿ ಯಾವನು ಬಿಡಿಸುತ್ತಾನೋ ಅವನಿಗೆ ಇಮ್ಮಡಿಯಾಗಿ ಶಿಕ್ಷೆಯನ್ನು ವಿಧಿಸಬೇಕು.

ದುರ್ದೃಷ್ಟವ್ಯವಹಾರಾಣಾಂ ಸಭ್ಯಾನಾಂ ದ್ವಿಗುಣೋ ದಮಃ ।
ರಾಜ್ಞಾ ತ್ರಿಂಶದ್ಗುಣೋ ದಂಡಃ ಪ್ರಕ್ಷೇಪ್ಯ ಉದಕೇ ಭವೇತ್ ॥೨೧೧॥

ಅಲ್ಪದಂಡೇಽಧಿಕಂ ಕುರ್ಯಾದ್ವಿಪುಲೇ ಚಾಲ್ಪಮೇವ ಚ ।
ಊನಾಧಿಕಂ ತು ತಂ ದಂಡಂ ಸಭ್ಯೋ ದದ್ಯಾತ್ಸ್ವಕಾದ್ಗೃಹಾತ್ ॥೨೧೨॥

ಯಾವಾನವಧ್ಯಸ್ಯ ವಧೇ ತಾವಾನ್ವಧ್ಯಸ್ಯ ರಕ್ಷಣೇ ।
ಅಧರ್ಮೋ ನೃಪತೇರ್ದೃಷ್ಟ ಏತಯೋರುಭಯೋರಪಿ ॥೨೧೩॥

ಬ್ರಾಹ್ಮಣಂ ನೈವ ಹನ್ಯಾತ್ತು ಸರ್ವಪಾಪೇಷ್ವವಸ್ಥಿತಂ ।
ಪ್ರವಾಸಯೇತ್ಸ್ವಕಾದ್ರಾಷ್ಟ್ರಾತ್ಸಮಗ್ರಧನಸಂಯುತಂ ॥೨೧೪॥

---

೨೧೧. ನ್ಯಾಯಸಮಿತಿಯವರು ಲೋಭದಿಂದ ಶಾಸ್ತ್ರವನ್ನು ಉಲ್ಲಂಘಿಸಿ ವ್ಯವಹಾರಗಳಲ್ಲಿ ನ್ಯಾಯಾನುಗುಣವಾಗಿ ತೀರ್ಮಾನವನ್ನು ಕೊಡದೆಹೋದರೆ ಅವರಿಗೆ ಇಮ್ಮಡಿಯಾಗಿ ದಂಡವನ್ನು ವಿಧಿಸಬೇಕು. ಒಂದುವೇಳೆ ರಾಜನು ತಾನೇ ಆ ರೀತಿಯಾಗಿ ನಡೆದರೆ ಮೂವತ್ತು ಪಾಲು ಅಧಿಕವಾಗಿ ದಂಡವನ್ನು ತೆರಬೇಕಲ್ಲದೆ ಆ ದ್ರವ್ಯವನ್ನು ವರುಣನ ಹೆಸರಿನಲ್ಲಿ ನೀರಿಗೆ ಹಾಕಬೇಕು.

೨೧೨. ಸಭ್ಯರು ಲೋಭಮೋಹಗಳಿಗೆ ಒಳಗಾಗಿ, ಅಪರಾಧವು ಅಲ್ಪವಾಗಿರುವಾಗ ಅಧಿಕದಂಡವನ್ನೂ ಅಧಿಕವಾಗಿರುವಾಗ ಅಲ್ಪದಂಡವನ್ನೂ ವಿಧಿಸಿದರೆ, ಹಾಗೆ ಹೆಚ್ಚುಕಡಿಮೆಯಾದಷ್ಟು ಹಣವನ್ನು ಅವರಿಂದ ದಂಡರೂಪವಾಗಿ ತೆಗೆದು ಕೊಳ್ಳಬೇಕು.

೨೧೩. ವಧಾರ್ಹನಲ್ಲದವನನ್ನು ವಧಿಸಿದರೆ ಎಷ್ಟು ದೋಷವೋ ವಧಾರ್ಹನನ್ನು ರಕ್ಷಿಸಿದರೂ ಅಷ್ಟೇ ದೋಷವು ಬರುವುದು. ಈ ಎರಡರಿಂದಲೂ ರಾಜನಿಗೆ ಅಧರ್ಮವು ಪ್ರಾಪ್ತವಾಗುವುದು.

೨೧೪. ಎಷ್ಟೇ ಪಾಪಗಳನ್ನು ಮಾಡಿರಲಿ ಬ್ರಾಹ್ಮಣನನ್ನು ಮಾತ್ರ ಕೊಲ್ಲಲೇ ಬಾರದು. ಎಲ್ಲ ಆಸ್ತಿಪಾಸ್ತಿಗಳೊಡನೆ ಅವನನ್ನು ರಾಷ್ಟ್ರದಿಂದ ಹೊರಕ್ಕೆ ಹೊರಡಿಸಬೇಕು.

ನ ಜಾತು ಬ್ರಾಹ್ಮಣಂ ವಧ್ಯಾತ್ಪಾತಕಂ ತ್ವಧಿಕಂ ಭವೇತ್ ।
ಯಸ್ಮಾತ್ತಸ್ಮಾತ್ಪ್ರಯತ್ನೇನ ಬ್ರಹ್ಮಹತ್ಯಾಂ ವಿವರ್ಜಯೇತ್ ॥೨೧೫॥

ಅದಂಡ್ಯಾನ್ ದಂಡಯನ್ ರಾಜಾ ದಂಡ್ಯಾಂಶ್ಚೈವಾಪ್ಯದಂಡಯನ್ ।
ಅಯಶೋ ಮಹದಾಪ್ನೋತಿ ನರಕಂ ಚಾಧಿಗಚ್ಛತಿ ॥೨೧೬॥

ಜ್ಞಾತ್ವಾಪರಾಧಂ ಪುರುಷಸ್ಯ ರಾಜಾ ।
ಕಾಲಂ ತಥಾ ಚಾನುಮತಂ ದ್ವಿಜಾನಾಂ ।
ದಂಡ್ಯೇಷು ದಂಡಂ ಪರಿಕಲ್ಪಯೇತ್ತು ।
ಪಾಪಸ್ಯ ಯದ್ಯಚ್ಛಮನಂ ಚ ಕುರ್ಯಾತ್ ॥೨೧೭॥

ಇತಿ ಶ್ರೀಮತ್ಸ್ಯೇ ಮಹಾಪುರಾಣೇ ರಾಜಧರ್ಮೇ ದಂಡಪ್ರಣಯನಂ
ನಾಮ ಸಪ್ತವಿಂಶತ್ಯಧಿಕದ್ವಿಶತತಮೋಽಧ್ಯಾಯಃ

---

೨೧೫. ಬ್ರಾಹ್ಮಣನನ್ನು ಎಂದಿಗೂ ವಧಿಸಬಾರದು. ಅದರಿಂದ ಬಹು ಪಾಪವು ಬರುತ್ತದೆ. ಆದಕಾರಣ ಸಕಲ ಪ್ರಯತ್ನದಿಂದಲೂ ಬ್ರಹ್ಮಹತ್ಯೆಯನ್ನು ದೂರಮಾಡಬೇಕು.

೨೧೬. ನಿರಪರಾಧಿಗಳನ್ನು ದಂಡಿಸುವುದರಿಂದಲೂ ಅಪರಾಧಿಗಳನ್ನು ದಂಡಿಸದೆ ಬಿಡುವುದರಿಂದಲೂ ರಾಜನಿಗೆ ಬಹಳ ಅಪಕೀರ್ತಿ ಬರುತ್ತದೆ. ಅಷ್ಟೇ ಅಲ್ಲ; ನರಕಪ್ರಾಪ್ತಿ ಸಹ ಆಗುತ್ತದೆ.

೨೧೭. ಅರಸನು ಮನುಷ್ಯನ ಅಪರಾಧ, ಅವನ್ನು ಮಾಡಿದ ಸಮಯ, ನ್ಯಾಯನಿರ್ಣಯಕ್ಕಾಗಿ ನಿಯಮಿಸಲ್ಪಟ್ಟ ಬ್ರಾಹ್ಮಣರ ಅಭಿಪ್ರಾಯ ಇವೆಲ್ಲವನ್ನೂ ವಿಮರ್ಶಿಸಿ ಅಪರಾಧಿಗಳಿಗೆ ದಂಡವನ್ನು ವಿಧಿಸಬೇಕು. ಪಾಪಪರಿಹಾರಕ್ಕಾಗಿ ಏನೇನು ಮಾಡಬೇಕೋ ಅದೆಲ್ಲವನ್ನೂ ಮಾಡಬೇಕು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಮೋಸ, ಕಳ್ಳತನ, ಪರನಿಂದೆ, ಅಗಮ್ಯಗಮನ, ಅಭಕ್ಷ್ಯ ಭಕ್ಷಣ ಮುಂತಾದ ನೂರಾರು ಅಪರಾಧಗಳಿಗೆ ವಿಧಿಸಬೇಕಾದ ದಂಡವಿಧಾನ ಗಳನ್ನು ಹೇಳಿದೆ.

ದಂಡವು ಅನೇಕ ವಿಧವಾಗಿದೆ. ಕೆಲವು ಅಪರಾಧಗಳಿಗೆ ಅರ್ಥದಂಡವನ್ನೂ ಇನ್ನು ಕೆಲವುಗಳಿಗೆ ದೇಹದಂಡವನ್ನೂ ವಿಧಿಸಬೇಕು. ದಂಡವು ಅಪರಾಧಾನು ಗುಣವಾಗಿಯೂ ಅಪರಾಧಿಯ ವಯಸ್ಸು, ಸ್ಥಿತಿ, ಯೋಗ್ಯತೆ ಇವುಗಳಿಗೆ ಅನುಸಾರ ವಾಗಿಯೂ ವ್ಯತ್ಯಾಸವಾಗುತ್ತದೆ. ಹಗ್ಗದಿಂದ ಅಥವಾ ಕೋಲಿನಿಂದ ಹೊಡೆಯು ವುದು, ಅಂಗಚ್ಛೇದನಮಾಡುವುದು ಮುಂತಾದುವು ದೇಹದಂಡನೆಯ ಪ್ರಭೇದಗಳು. ಮಹಾಪಾತಕಿಗಳಿಗೂ ರಾಜದ್ರೋಹಿಗಳಿಗೂ ಮರಣದಂಡನೆಯನ್ನು ವಿಧಿಸಬೇಕು. ಇನ್ನು ಕೆಲವು ಅಪರಾಧಗಳಿಗೆ ಗಡೀಪಾರು ಮಾಡುವುದು ಶಿಕ್ಷೆ. ನಿರಪರಾಧಿಯನ್ನು ಶಿಕ್ಷಿಸುವುದು, ಅಪರಾಧಿಯನ್ನು ಶಿಕ್ಷಿಸದಿರುವುದು ಇವೆರಡೂ ರಾಜನ ಅಪಕೀರ್ತಿಗೆ ಕಾರಣವಾಗುವುವು.

ಶ್ರೀಮತ್ಸ್ಯಮಹಾಪುರಾಣದಲ್ಲಿ ರಾಜಧರ್ಮದಲ್ಲಿ ದಂಡಪ್ರಣಯನವೆಂಬ
ಇನ್ನೂರ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು

## ಅಥಾಷ್ಟಾವಿಂಶತ್ಯಧಿಕದ್ವಿಶತತಮೋಽಧ್ಯಾಯಃ

॥ ಮನುರುವಾಚ ॥

ದಿವ್ಯಾಂತರಿಕ್ಷಭೌಮೇಷು ಯಾ ಶಾಂತಿರಭಿಧೀಯತೇ ।
ತಾಮಹಂ ಶ್ರೋತುಮಿಚ್ಛಾಮಿ ಮಹೋತ್ಪಾತೇಷು ಕೇಶವ ॥ ೧ ॥

॥ ಮತ್ಸ್ಯ ಉವಾಚ ॥

ಅಥಾತಃ ಸಂಪ್ರವಕ್ಷ್ಯಾಮಿ ವಿವಿಧೇಷ್ವದ್ಭುತಾದಿಷು ।
ವಿಶೇಷೇಣ ತು ಭೌಮೇಷು ಶಾಂತಿಃ ಕಾರ್ಯಾ ಯಥಾ ಭವೇತ್ ॥ ೨ ॥

ಅಭಯಾ ಚಾಂತರಿಕ್ಷೇಷು ಸೌಮ್ಯಾ ದಿವ್ಯೇಷು ಪಾರ್ಥಿವ ।
ವಿಜಿಗೀಷುಃ ಪರಂ ರಾಜ್ಯಂ ಭೂತಿಕಾಮಸ್ತು ಯೋ ಭವೇತ್ ॥ ೩ ॥

---

೧. ಮನುಚಕ್ರವರ್ತಿ ಹೇಳಿದನು.—ಓ ಕೇಶವಾ, ಸ್ವರ್ಗದಲ್ಲಿ, ಅಂತರಿಕ್ಷದಲ್ಲಿ ಮತ್ತು ಭೂಮಿಯಲ್ಲಿ ಉತ್ಪಾತಗಳು ಗೋಚರವಾದಾಗ ಮಾಡಬೇಕಾದ ಶಾಂತಿವಿಧಾನಗಳನ್ನು ಕೇಳಬಯಸುತ್ತೇನೆ.

೨. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಬಗೆಬಗೆಯ ಉತ್ಪಾತಗಳು, ಅದರಲ್ಲೂ ಭೂಸಂಬಂಧವಾದವುಗಳು ತಲೆದೋರಿದಾಗ ಮಾಡಬೇಕಾದ ಶಾಂತಿಯೇನೆಂಬುದನ್ನು ಇನ್ನುಮುಂದೆ ಹೇಳುವೆನು.

೩. ರಾಜಾ, ಅಂತರಿಕ್ಷದಲ್ಲಿ ಉತ್ಪಾತಗಳು ಗೋಚರವಾದಾಗ ಮಾಡಬೇಕಾದ ಶಾಂತಿಯು "ಅಭಯಾ" ಎನಿಸುವುದು. ಸ್ವರ್ಗೀಯವಾದುವು ಕಾಣಿಸಿದಾಗ ನೆರವೇರಿಸುವ ಶಾಂತಿಗೆ "ಸೌಮ್ಯಾ" ಎನ್ನುವರು. ಶತ್ರುಜಯವನ್ನೂ ಸಂಪತ್ತನ್ನೂ ಕೋರುವವನು ಇವನ್ನು ನಡೆಸಬೇಕು.

ವಿಜಿಗೀಷುಃ ಪರಾನೇವಮಭಿಯುಕ್ತಸ್ತಥಾ ಪರೈಃ ।
ತಥಾಭಿಚಾರಶಂಕಾಯಾಂ ಶತ್ರೂಣಾಮಭಿನಾಶನೇ ॥ ೪ ॥

ಭಯೇ ಮಹತಿ ಸಂಪ್ರಾಪ್ತೇ ಅಭಯಾ ಶಾಂತಿರಿಷ್ಯತೇ ।
ರಾಜಯಕ್ಷ್ಮಾಭಿಭೂತಸ್ಯ ಕ್ಷತಕ್ಷೀಣಸ್ಯ ಚಾಪ್ಯಥ ॥ ೫ ॥

ಸೌಮ್ಯಾ ಪ್ರಶಸ್ಯತೇ ಶಾಂತಿರ್ಯಜ್ಞಕಾಮಸ್ಯ ಚಾಪ್ಯಥ ।
ಭೂಕಂಪೇ ಚ ಸಮುತ್ಪನ್ನೇ ಪ್ರಾಪ್ತೇ ಚಾನ್ನಕ್ಷಯೇ ತಥಾ ॥ ೬ ॥

ಅತಿವೃಷ್ಟ್ಯಾಮನಾವೃಷ್ಟ್ಯಾಂ ಶಲಭಾನಾಂ ಭಯೇಷು ಚ ।
ಪ್ರಮತ್ತೇಷು ಚ ಚೋರೇಷು ವೈಷ್ಣವೀ ಶಾಂತಿರಿಷ್ಯತೇ ॥ ೭ ॥

ಪಶೂನಾಂ ಮಾರಣೇ ಪ್ರಾಪ್ತೇ ನರಾಣಾಮಪಿ ದಾರುಣೇ ।
ಭೂತೇಷು ಧೃಶ್ಯಮಾನೇಷು ರೌದ್ರೀ ಶಾಂತಿಸ್ತಥೇಷ್ಯತೇ ॥ ೮ ॥

---

೪. ಶತ್ರುಗಳನ್ನು ಜಯಿಸಬೇಕೆನ್ನುವಾಗ, ಶತ್ರುಗಳ ಮುತ್ತಿಗೆಯಲ್ಲಿ ಸಿಕ್ಕಿದಾಗ, ಮಾಯೆಮಾಟಗಳು ನಡೆದಿರಬಹುದೆಂಬ ಸಂದೇಹ ಬಂದಾಗ, ಶತ್ರುಗಳನ್ನು ಧ್ವಂಸಮಾಡಬೇಕಾದಾಗ ಮತ್ತು ಮಹಾಭೀತಿಯೊದಗಿದಾಗ ಅಭಯಾ ಶಾಂತಿಯನ್ನು ಮಾಡಬೇಕು.

೫. ಕ್ಷಯರೋಗದಿಂದ ಪೀಡಿತನಾದವನೂ, ವ್ರಣದಿಂದ ಕೃಶನಾದವನೂ, ಯಜ್ಞವನ್ನು ಮಾಡಬೇಕೆಂದು ಬಯಸುವವನೂ ಸೌಮ್ಯಾಶಾಂತಿಯನ್ನು ನೆರವೇರಿಸಬೇಕು.

೬-೭. ಭೂಕಂಪ, ಅನ್ನಕ್ಷಾಮ, ಅತಿವೃಷ್ಟಿ, ಮಿಡಿತೆಗಳ ಕಾಟ, ಕಳ್ಳರ ಹಾವಳಿ ಇವು ಒದಗಿದಾಗ ಮಾಡಬೇಕಾದ ಶಾಂತಿಯನ್ನು ವೈಷ್ಣವಿಯೆನ್ನುವರು.

೮. ಪಶುಹತ್ಯವೂ ನರಹತ್ಯವೂ ಭಯಂಕರವಾಗಿ ನಡೆದಾಗ, ಭೂತಗಳು ಕಣ್ಣಿಗೆ ಕಂಡಾಗ ರೌದ್ರಿಯೆಂಬ ಶಾಂತಿಯನ್ನು ಆಚರಿಸಬೇಕು.

ವೇದನಾಶೇ ಸಮುತ್ಪನ್ನೇ ಜನೇ ಜಾತೇ ಚ ನಾಸ್ತಿಕೇ ।
ಅಪೂಜ್ಯಪೂಜನೇ ಜಾತೇ ಬ್ರಾಹ್ಮೀ ಶಾಂತಿಸ್ತಥೇಷ್ಯತೇ ॥ ೯ ॥

ಭವಿಷ್ಯತ್ಯಭಿಷೇಕೇ ಚ ಪರಚಕ್ರಭಯೇಽಪಿ ಚ ।
ಸ್ವರಾಷ್ಟ್ರಭೇದೇಽರಿವಧೇ ರೌದ್ರೀ ಶಾಂತಿಃ ಪ್ರಶಸ್ಯತೇ ॥೧೦॥

ತ್ರ್ಯಹಾತಿರಿಕ್ತೇ ಪವನೇ ರೂಕ್ಷೇ ಸರ್ವವಿಗರ್ಹಿತೇ ।
ವೈಕೃತೇ ವಾತಜೇ ವ್ಯಾಧೌ ವಾಯವೀ ಶಾಂತಿರಿಷ್ಯತೇ ॥೧೧॥

ಅನಾವೃಷ್ಟಿಭಯೇ ಜಾತೇ ಪ್ರಾಪ್ತೇ ವಿಕೃತಿವರ್ಷಣೇ ।
ಜಲಾಶಯವಿಕಾರೇಷು ವಾರುಣೀ ಶಾಂತಿರಿಷ್ಯತೇ ॥೧೨॥

---

೯. ವೇದಗಳಿಗೆ ಹಾನಿ ಸಂಭವಿಸಿದಾಗ, ಜನರು ನಾಸ್ತಿಕರಾದಾಗ, ಅಪೂಜ್ಯರಿಗೆ ಮನ್ನಣೆ ದೊರೆತಾಗ ಬ್ರಾಹ್ಮೀಶಾಂತಿಯನ್ನು ಮಾಡಬೇಕು.

೧೦. ಪಟ್ಟಾಭಿಷೇಕದ ಸಮಯದಲ್ಲಿ, ಶತ್ರುಸೈನ್ಯದಿಂದ ಭಯವೊದಗಿದ ಕಾಲದಲ್ಲಿ, ತನ್ನ ರಾಷ್ಟ್ರವು ಒಡೆದುಹೋಗುವ ವೇಳೆಯಲ್ಲಿ, ಶತ್ರುವಧೆಯ ಸಮಯದಲ್ಲಿ ರುದ್ರದೇವತಾಕವಾದ ಶಾಂತಿಯು ಬಹು ಶ್ರೇಯಸ್ಕರವಾದುದು.

೧೧. ಮೂರುದಿನವಾದರೂ ನಿಲ್ಲದೆ ಬಿರುಗಾಳಿಯು ಎಲ್ಲರಿಗೂ ತೊಂದರೆ ಕೊಡುತ್ತ ಬೀಸುತ್ತಿದ್ದರೆ, ವಾತವಿಕಾರದಿಂದ ಹುಟ್ಟಿದ ವ್ಯಾಧಿ ಪ್ರಬಲಿಸಿದರೆ ವಾಯುದೇವನ ಪ್ರೀತಿಗಾಗಿ ಶಾಂತಿಯನ್ನು ಮಾಡಬೇಕು. ಅದನ್ನು ವಾಯವೀ ಶಾಂತಿಯೆನ್ನುವರು.

೧೨. ಅನಾವೃಷ್ಟಿಯ ಭಯವು ತಲೆದೋರಿದಾಗ, ಮಳೆಬಂದರೂ ಸಹಜ ರೀತಿಯಲ್ಲಿ ಇಲ್ಲದಿರುವಾಗ, ಕೆರೆ, ಕಟ್ಟೆ ಮುಂತಾದ ಜಲಾಶಯಗಳಲ್ಲಿ ವಿಕಾರವು ತೋರಿಬಂದಾಗ ವರುಣನನ್ನು ಉದ್ದೇಶಿಸಿ ಶಾಂತಿಯನ್ನು ಮಾಡಬೇಕು. ಇದಕ್ಕೆ ವಾರುಣೀ ಶಾಂತಿಯೆಂದು ಹೆಸರು.

ಅಭಿಶಾಪಭಯೇ ಪ್ರಾಪ್ತೇ ಭಾರ್ಗವೀ ಚ ತಥೈವ ಚ ।
ಜಾತೇ ಪ್ರಸವವೈಕೃತ್ಯೇ ಪ್ರಾಜಾಪತ್ಯಾ ಮಹಾಭುಜ ||೧೩||

ಉಪಸ್ಕರಾಣಾಂ ವೈಕೃತ್ಯೇ ತ್ವಾಷ್ಟ್ರೀ ಪಾರ್ಥಿವನಂದನ ।
ಬಾಲಾನಾಂ ಶಾಂತಿಕಾಮಸ್ಯ ಕೌಮಾರೀ ಚ ತಥಾ ನೃಪ ||೧೪||

ಕುರ್ಯಾಚ್ಛಾಂತಿಮಥಾಗ್ನೇಯೀಂ ಸಂಪ್ರಾಪ್ತೇ ವಹ್ನಿವೈಕೃತೇ ।
ಆಜ್ಞಾಭಂಗೇ ತು ಸಂಜಾತೇ ತಥಾ ಭೃತ್ಯಾದಿಸಂಕ್ಷಯೇ ||೧೫||

ಅಶ್ವಾನಾಂ ಶಾಂತಿಕಾಮಸ್ಯ ತದ್ವಿಕಾರೇ ಸಮುತ್ಥಿತೇ ।
ಅಶ್ವಾನಾಂ ಕಾಮಯಾನಸ್ಯ ಗಾಂಧರ್ವೀ ಶಾಂತಿರಿಷ್ಯತೇ ||೧೬||

ಗಜಾನಾಂ ಶಾಂತಿಕಾಮಸ್ಯ ತದ್ವಿಕಾರೇ ಸಮುತ್ಥಿತೇ ।
ಗಜಾನಾಂ ಕಾಮಯಾನಸ್ಯ ಶಾಂತಿರಾಂಗಿರಸೀ ಭವೇತ್ ||೧೭||

---

೧೩. ಓ ರಾಜಾ, ಅಪವಾದಭಯವೊದಗಿದಾಗ ಭಾರ್ಗವೀ ಶಾಂತಿಯನ್ನು, ಸಂತಾನದಲ್ಲಿ ವಿಕಾರವುಂಟಾದಾಗ ಪ್ರಜಾಪತ್ಯ ಶಾಂತಿಯನ್ನೂ ಮಾಡಬೇಕು.

೧೪. ಉಪಕರಣಗಳಲ್ಲಿ ವೈರೂಪ್ಯ ಹುಟ್ಟಿದರೆ ವಿಶ್ವಕರ್ಮನ ಪ್ರೀತಿಗಾಗಿ ಶಾಂತಿಯನ್ನು ನೆರವೇರಿಸಬೇಕು. ಅದಕ್ಕೆ ತ್ವಾಷ್ಟ್ರೀ ಶಾಂತಿಯೆಂದು ಹೆಸರು. ಮಕ್ಕಳ ಕ್ಷೇಮವನ್ನು ಬಯಸುವಾತನು ಕೌಮಾರೀ ಶಾಂತಿಯನ್ನು ಆಚರಿಸಬೇಕು.

೧೫. ಅಗ್ನಿಭಯ, ಆಜ್ಞಾಭಂಗ, ಭೃತ್ಯಾದಿಪರಿವಾರದ ವಿನಾಶ ಇವು ಒದಗಿದಾಗ ಅಗ್ನಿಶಾಂತಿಯನ್ನು ನೆರವೇರಿಸಬೇಕು.

೧೬. ಕುದುರೆಗಳಿಗೆ ಬಂದ ಉಪದ್ರವವು ತೊಲಗಿ ಅವು ಕ್ಷೇಮವಿಂದಿರ ಬೇಕೆನ್ನುವವನೂ, ಕುದುರೆಗಳನ್ನು ಅಪೇಕ್ಷಿಸುವವನೂ ನಡೆಸಬೇಕಾದ ಶಾಂತಿ ಯನ್ನು ಗಾಂಧರ್ವೀಶಾಂತಿಯೆನ್ನುವರು.

೧೭. ಆನೆಗಳಿಗೆ ಬಂದ ಪೀಡೆ ತೊಲಗಿ ಅವು ಕ್ಷೇಮದಿಂದಿರಬೇಕೆನ್ನುವವನೂ ಆನೆಗಳನ್ನು ಅಪೇಕ್ಷಿಸುವವನೂ ಬೃಹಸ್ಪತಿಯ ಪ್ರೀತಿಗಾಗಿ ಶಾಂತಿಯನ್ನು ನೆರವೇರಿಸ ಬೇಕು. ಇದಕ್ಕೆ ಆಂಗಿರಸೀ ಶಾಂತಿಯೆಂದು ಹೆಸರು.

ಪಿಶಾಚಾದಿಭಯೇ ಜಾತೇ ಶಾಂತಿರ್ನೈ ನೈಋತೀ ಸ್ಮೃತಾ ।
ಅಪಮೃತ್ಯುಭಯೇ ಜಾತೇ ದುಃಸ್ವಪ್ನೇ ಚ ತಥಾ ಸ್ಥಿತೇ ॥೧೮॥

ಯಾಮ್ಯಾಂ ತು ಕಾರಯೇಚ್ಛಾಂತಿಂ ಪ್ರಾಪ್ತೇ ತು ನರಕೇ ತಥಾ ।
ಧನನಾಶೇ ಸಮುತ್ಪನ್ನೇ ಕೌಬೇರೀ ಶಾಂತಿರಿಷ್ಯತೇ ॥೧೯॥

ವೃಕ್ಷಾಣಾಂ ಚ ತಥಾರ್ಥಾನಾಂ ವೈಕೃತೇ ಸಮುಪಸ್ಥಿತೇ ।
ಭೂತಿಕಾಮಸ್ತಥಾ ಶಾಂತಿಂ ಪಾರ್ಥಿವೀಂ ಪ್ರತಿಯೋಜಯೇತ್ ॥೨೦॥

ಪ್ರಥಮೇ ದಿನಯಾಮೇ ಚ ರಾತ್ರೌ ವಾ ಮನುಜೋತ್ತಮ ।
ಹಸ್ತೇ ಸ್ವಾತೌ ಚ ಚಿತ್ರಾಯಾಮಾದಿತ್ಯೇ ಚಾಶ್ವಿನೇ ತಥಾ ॥೨೧॥

ಅರ್ಯಮ್ಣಿ ಸೌಮ್ಯಜಾತೇಷು ವಾಯವ್ಯಾಂ ತ್ವದ್ಭುತೇಷು ಚ ।
ದ್ವಿತೀಯೇ ದಿನಯಾಮೇ ತು ರಾತ್ರೌ ಚ ರವಿನಂದನ ॥೨೨॥

ಪುಷ್ಯಾಗ್ನೇಯವಿಶಾಖಾಸು ಪಿತ್ರ್ಯಾಸು ಭರಣೀಷು ಚ ।
ಉತ್ಪಾತೇಷು ತಥಾ ಭಾಗ್ಯೇ ಆಗ್ನೇಯೀಂ ತತ್ರ ಕಾರಯೇತ್ ॥೨೩॥

---

೧೮. ಪಿಶಾಚಾದಿಗಳಿಂದ ಭಯವುಂಟಾದಾಗ ನೈರ್ಋತಿಯೆಂಬ ಶಾಂತಿಯನ್ನು ನಡೆಸಬೇಕು. ಅಪಮೃತ್ಯುಭಯ, ದುಃಸ್ವಪ್ನ, ನರಕಪ್ರಾಪ್ತಿ ಇವುಗಳ ಪರಿಹಾರಾರ್ಥವಾಗಿ ಯಮದೇವನನ್ನುದ್ದೇಶಿಸಿ ಶಾಂತಿಯನ್ನು ಮಾಡಬೇಕು. ಇದಕ್ಕೆ ಯಾಮ್ಯಾ ಎಂದು ಹೆಸರು.

೧೯-೨೦. ಧನನಾಶವೊದಗಿದಾಗ ಕುಬೇರಶಾಂತಿಯನ್ನು ನಡೆಸಬೇಕು. ಮರಗಳಿಗೂ, ದ್ರವ್ಯಗಳಿಗೂ ಬಾಧೆ ಬಂದಾಗ ಸಂಪತ್ತನ್ನು ಕೋರುವವನು ಭೂಮಿ ಶಾಂತಿಯನ್ನು ಆಚರಿಸಬೇಕು.

೨೧-೨೩. ಓ ಮನುಚಕ್ರವರ್ತೀ, ದಿವಸದ ಮೊದಲನೆಯ ಜಾವದಲ್ಲಿ ಚಿತ್ತೆ, ಪುನರ್ವಸು, ಅಶ್ವಿನಿ, ಉತ್ತರೆ ಮತ್ತು ಮೃಗಶಿರೆಗಳೆಂಬ ನಕ್ಷತ್ರಗಳಲ್ಲಿ ಉತ್ಪಾತಗಳು ತಲೆದೋರಿದರೆ ವಾಯುದೇವತಾಕವಾದ ಶಾಂತಿಯನ್ನು ಮಾಡಬೇಕು. ದಿನದ ಎರಡನೆಯ ಜಾವದಲ್ಲಿ, ಇಲ್ಲವೇ ರಾತ್ರಿಯಲ್ಲಿ ಪುಷ್ಯ, ಕೃತ್ತಿಕೆ, ವಿಶಾಖೆ, ಮಖೆ, ಭರಣೀ ಮತ್ತು ಪುಬ್ಬಾ ನಕ್ಷತ್ರಗಳಲ್ಲಿ ಉತ್ಪಾತಗಳಾದರೆ ಆಗ್ನೇಯ ವ್ರತವನ್ನು ಆಚರಿಸಬೇಕು.

ತೃತೀಯೇ ದಿನಯಾಮೇ ಚ ರಾತ್ರೌ ಚ ರವಿನಂದನ ।
ರೋಹಿಣ್ಯಾಂ ವೈಷ್ಣವೇ ಬ್ರಾಹ್ಮೇ ವಾಸವೇ ವೈಶ್ವದೇವತೇ ॥೨೪॥

ಜ್ಯೇಷ್ಠಾಯಾಂ ಚ ತಥಾ ಮೈತ್ರೇ ಯೇ ಭವಂತ್ಯದ್ಭುತಾಃ ಕ್ವಚಿತ್ ।
ಐಂದ್ರೀ ತೇಷು ಪ್ರಯೋಕ್ತವ್ಯಾ ಶಾಂತೀ ರವಿಕುಲೋದ್ವಹ ॥೨೫॥

ಚತುರ್ಥೇ ದಿನಯಾಮೇ ಚ ರಾತ್ರೌ ವಾ ರವಿನಂದನ ।
ಸಾರ್ಪೇ ಪೌಷ್ಣೇ ತಥಾದ್ರಾರ್ಯಾಮಾಹಿರ್ಬುಧ್ನ್ಯೇ ಚ ದಾರುಣೇ ॥೨೬॥

ಮೂಲೇ ವರುಣದೈವತ್ಯೇ ಯೇ ಭವಂತ್ಯದ್ಭುತಾಸ್ತಥಾ ।
ವಾರುಣೀ ತೇಷು ಕರ್ತವ್ಯಾ ಮಹಾಶಾಂತಿರ್ಮಹೀಕ್ಷಿತಾ ॥೨೭॥

ಮಿತ್ರಮಂಡಲವೇಲಾಸು ಯೇ ಭವಂತ್ಯದ್ಭುತಾಃ ಕ್ವಚಿತ್ ।
ತತ್ರ ಶಾಂತಿದ್ವಯಂ ಕಾರ್ಯಂ ನಿಮಿತ್ತೇ ಸತಿ ನಾನ್ಯಥಾ ।
ನಿರ್ನಿಮಿತ್ತೇ ಕೃತಾ ಶಾಂತಿರ್ನಿಮಿತ್ತೇ ನೋಪಯುಜ್ಯತೇ ॥೨೮॥

---

೨೪-೨೫. ಎಲೈ ಸೂರ್ಯವಂಶತಿಲಕಾ, ದಿನದ ಮೂರನೆಯ ಜಾವದಲ್ಲಾಗಲಿ ರಾತ್ರಿಯಲ್ಲಾಗಲಿ, ರೋಹಿಣಿ, ಶ್ರವಣ, ಉತ್ತರಾಭಾದ್ರೆ, ಧನಿಷ್ಠೆ, ಉತ್ತರಾಷಾಢ, ಜ್ಯೇಷ್ಠೆ, ಪುಬ್ಬೆ ಈ ನಕ್ಷತ್ರಗಳಲ್ಲಾಗಲಿ ಉತ್ಪಾತಗಳುಂಟಾದರೆ ಇಂದ್ರಶಾಂತಿಯನ್ನು ನಡೆಸಬೇಕು.

೨೬-೨೭. ಓ ಸೂರ್ಯನಂದನಾ, ದಿವಸದ ನಾಲ್ಕನೆಯ ಜಾವದಲ್ಲಾಗಲಿ ರಾತ್ರಿಯಲ್ಲಾಗಲಿ, ಆಶ್ಲೇಷೆ, ರೇವತಿ, ಆರ್ದ್ರೆ, ಭಯಂಕರವಾದ ಉತ್ತರಾಭಾದ್ರೆ, ಮೂಲ, ಶತಭಿಷೆ ಈ ನಕ್ಷತ್ರಗಳಲ್ಲಾಗಲಿ ಉತ್ಪಾತಗಳು ಸಂಭವಿಸಿದರೆ ಆ ದೋಷ ಪರಿಹಾರಕ್ಕಾಗಿ ರಾಜನು ಅತಿ ಶ್ರೇಷ್ಠವಾದ ವರುಣಶಾಂತಿಯನ್ನು ನೆರವೇರಿಸಬೇಕು.

೨೮. ಸೂರ್ಯಮಂಡಲದ ಅಂಚಿನಲ್ಲಿ ಅದ್ಭುತಗಳೇನಾದರೂ ಆದರೆ ಆಗ ಎರಡು ಶಾಂತಿಗಳನ್ನು ಮಾಡಬೇಕು. ನಿಮಿತ್ತವಿದ್ದರೆ ಮಾತ್ರ ಶಾಂತಿಯನ್ನು ನಡೆಸಬೇಕು. ಇಲ್ಲದಿದ್ದರೆ ಇಲ್ಲ. ನಿಮಿತ್ತವಿಲ್ಲದಿರುವಾಗ ಮಾಡಿದ ಶಾಂತಿಯು ಅದು ಒದಗಿದಾಗ ಪ್ರಯೋಜನಕಾರಿಯಾಗಲಾರದು.

ಬಾಣಪ್ರಹಾರಾ ನ ಭವಂತಿ ಯದ್ವ ।
ದ್ರಾಜನ್ನೃಣಾಂ ಸಂನಹನೈರ್ಯುತಾನಾಂ ।
ದೈವೋಪಘಾತಾ ನ ಭವಂತಿ ತದ್ವ
ದ್ಧರ್ಮಾತ್ಮನಾಂ ಶಾಂತಿಪರಾಯಣಾನಾಂ ॥೨೯॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ
ಅದ್ಭುತಶಾಂತಿರ್ನಾಮಾಷ್ಟವಿಂಶತ್ಯಧಿಕಶತತಮೋಽಧ್ಯಾಯಃ

---

೨೯. ಓ ರಾಜಾ, ಕವಚಧಾರಿಗಳಾದ ಮನುಷ್ಯರಿಗೆ ಬಾಣಪ್ರಹಾರಗಳು ಹೇಗೆ ಆಗುವುದಿಲ್ಲವೋ ಹಾಗೆ ಶಾಂತಿಕರ್ಮಗಳನ್ನು ಮಾಡಿದ ಧರ್ಮಾತ್ಮರಿಗೆ ಉತ್ಪಾತಗಳಿಂದ ಬಾಧೆಯುಂಟಾಗುವುದಿಲ್ಲ.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಉತ್ಪಾತಗಳು ತಲೆದೋರಿದಾಗ ಮಾಡಬೇಕಾದ ಶಾಂತಿ ಭೇದಗಳನ್ನು ಹೇಳಿದೆ.

ಮನುಷ್ಯನಿಗೆ ಮುಂದೆ ಬರಲಿರುವ ಶುಭಾಶುಭಗಳ ಸೂಚಕಗಳೇ ಉತ್ಪಾತಗಳು. ಇವುಗಳಲ್ಲಿ ದಿವ್ಯೋತ್ಪಾತ, ಅಂತರಿಕ್ಷೋತ್ಪಾತ, ಮತ್ತು ಭೌಮೋತ್ಪಾತಗಳೆಂದು ಮೂರುವಿಧ. ಶ್ರೇಯಸ್ಸನ್ನು ಬಯಸುವವನು ಇವುಗಳ ದೋಷಪರಿಹಾರಕ್ಕಾಗಿ ಶಾಂತಿಯನ್ನು ಮಾಡಬೇಕು. ವೈಷ್ಣವಿ, ರೌದ್ರಿ, ಬ್ರಾಹ್ಮಿ, ವಾಯವಿ, ಆಗ್ನೇಯಿ ಮುಂತಾದ ನಾನಾಬಗೆಯ ಶಾಂತಿಗಳಿವೆ. ಉತ್ಪಾತಗಳು ಸಂಭವಿಸುವ ಕಾಲ ಮತ್ತು ನಕ್ಷತ್ರಗಳಿಗೆ ಅನುಗುಣವಾಗಿ ಬೇರೆಬೇರೆ ಶಾಂತಿಗಳನ್ನು ನಡೆಸಬೇಕು ಕವಚವನ್ನು ತೊಟ್ಟ ಮನುಷ್ಯನಿಗೆ ಬಾಣಪ್ರಹಾರವು ಹೇಗೆ ಆಗುವುದಿಲ್ಲವೋ ಹಾಗೆ ಶಾಂತಿಕರ್ಮಗಳನ್ನು ಮಾಡಿದ ಧರ್ಮನಿಷ್ಠನಿಗೆ ಉತ್ಪಾತಗಳಿಂದ ಬಾಧೆಯುಂಟಾಗುವುದಿಲ್ಲ.

ಶ್ರೀಮತ್ಸ್ಯಮಹಾಪುರಾಣದಲ್ಲಿ ಅದ್ಭುತಶಾಂತಿಯೆಂಬ
ಇನ್ನೂರ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು

## ಅಥ ಏಕೋನತ್ರಿಂಶದಧಿಕದ್ವಿಶತತಮೋಽಧ್ಯಾಯಃ

|| ಮನುರುವಾಚ ||

ಅದ್ಭುತಾನಾಂ ಫಲಂ ದೇವ ಶಮನಂ ಚ ತಥಾ ವದ ।
ತ್ವಂ ಹಿ ವೇತ್ಸಿ ವಿಶಾಲಾಕ್ಷ ಜ್ಞೇಯಂ ಸರ್ವಮಶೇಷತಃ || ೧ ||

|| ಮತ್ಸ್ಯ ಉವಾಚ ||

ಅತ್ರ ತೇ ವರ್ಣಯಿಷ್ಯಾಮಿ ಯದುವಾಚ ಮಹಾತಪಾಃ ।
ಅತ್ರಯೇ ವೃದ್ಧಗರ್ಗಸ್ತು ಸರ್ವಧರ್ಮಭೃತಾಂ ವರಃ || ೨ ||

ಸರಸ್ವತ್ಯಾಃ ಸುಖಾಸೀನಂ ಗರ್ಗಂ ಸ್ರೋತಸಿ ಪಾರ್ಥಿವ ।
ಪಪ್ರಚ್ಛಾಸೌ ಮಹಾತೇಜಾ ಅತ್ರಿರ್ಮುನಿಜನಪ್ರಿಯಂ || ೩ ||

|| ಅತ್ರಿರುವಾಚ ||

ನಶ್ಯತಾಂ ಪೂರ್ವರೂಪಾಣಿ ಜನಾನಾಂ ಕಥಯಸ್ವ ಮೇ ।
ನಗರಾಣಾಂ ತಥಾ ರಾಜ್ಞಾಂ ತ್ವಂ ಹಿ ಸರ್ವಂ ವದಸ್ವ ಮಾಂ । || ೪ ||

---

೧. ಮನುಚಕ್ರವರ್ತಿ ಹೇಳಿದನು.—ದೇವಾ, ಉತ್ಪಾತಗಳ ಫಲವನ್ನೂ ಅವುಗಳ ದೋಷಪರಿಹಾರವನ್ನೂ ತಿಳಿಸು. ಎಲೈ ವಿಶಾಲಾಕ್ಷಾ, ತಿಳಿಯಬೇಕಾದುದೆಲ್ಲವೂ ನಿನಗೆ ಸಂಪೂರ್ಣವಾಗಿ ಗೊತ್ತಿದೆ.

೨. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಈ ವಿಷಯವಾಗಿ ಧರ್ಮಜ್ಞರಲ್ಲೆಲ್ಲ ಅಗ್ರಗಣ್ಯನೂ ಮಹಾತಪಸ್ವಿಯೂ ಆದ ವೃದ್ಧ ಗರ್ಗನು ಅತ್ರಿಮುನಿಗೆ ಹೇಳಿದುದನ್ನೇ ನಿನಗೀಗ ಹೇಳುವೆನು.

೩. ರಾಜಾ, ಮಹಾತೇಜಸ್ವಿಯಾದ ಅತ್ರಿಮುನಿಯು ಋಷಿಗಳಿಗೆ ಪ್ರೀತಿಪಾತ್ರನಾದ ಗರ್ಗಮಹರ್ಷಿಯು ಸರಸ್ವತೀನದಿಯ ತೀರದಲ್ಲಿ ಕುಳಿತಿರಲು ಇಂತು ಪ್ರಶ್ನಿಸಿದನು.

೪. ಅತ್ರಿಮುನಿ ಹೇಳಿದನು.—ಜನರೂ, ನಗರಗಳೂ ಮತ್ತು ರಾಜರೂ ವಿನಾಶಕ್ಕೆ ಗುರಿಯಾಗುವರೆಂಬುದನ್ನು ಪೂರ್ವಭಾವಿಯಾಗಿ ತಿಳಿಸುವ ಲಕ್ಷಣಗಳನ್ನೆಲ್ಲ ನನಗೆ ಹೇಳು.

ಅಧ್ಯಾಯ ೨೯

|| ಗರ್ಗ ಉವಾಚ ||

ಪುರುಷಾಪಚಾರಾನ್ನಿಯತಮಪರಜ್ಯಂತಿ ದೇವತಾಃ |
ತತೋಽಪರಾಗಾದ್ದೇವಾನಾಮುಪಸರ್ಗಃ ಪ್ರವರ್ತತೇ || ೫ ||

ದಿವ್ಯಾಂತರಿಕ್ಷಭೌಮಂ ಚ ತ್ರಿವಿಧಂ ಸಂಪ್ರಕೀರ್ತಿತಂ |
ಗ್ರಹರ್ಕ್ಷವೈಕೃತಂ ದಿವ್ಯಮಾಂತರಿಕ್ಷಂ ನಿಬೋಧ ಮೇ || ೬ ||

ಉಲ್ಕಾಪಾತೋ ದಿಶಾಂ ದಾಹಃ ಪರಿವೇಷಸ್ತಥೈವ ಚ |
ಗಂಧರ್ವನಗರಂ ಚೈವ ವೃಷ್ಟಿಶ್ಚ ವಿಕೃತಾ ತು ಯಾ || ೭ ||

ಏವಮಾದೀನಿ ಲೋಕೇಽಸ್ಮಿನ್ನಾಂತರಿಕ್ಷಂ ವಿನಿರ್ದಿಶೇತ್ |
ಚರಸ್ಥಿರಭವೋ ಭೌಮೋ ಭೂಕಂಪಶ್ಚಾಪಿ ಭೂಮಿಜಃ || ೮ ||

ಜಲಾಶಯಾನಾಂ ವೈಕೃತ್ಯಂ ಭೌಮಂ ತದಪಿ ಕೀರ್ತಿತಂ |
ಭೌಮಂ ತ್ವಲ್ಪಫಲಂ ಜ್ಞೇಯಂ ಚಿರೇಣ ಚ ವಿಪಚ್ಯತೇ || ೯ ||

---

೫. ಗರ್ಗಮುನಿ ಹೇಳಿದನು.—ಮನುಷ್ಯರ ಅಪಚಾರದಿಂದ ದೇವತೆಗಳು ಅಸಮಾಧಾನಗೊಳ್ಳುತ್ತಾರೆ. ದೇವತೆಗಳ ಅಪ್ರೀತಿಯಿಂದ ಉತ್ಪಾತವು ಹುಟ್ಟುತ್ತದೆ.

೬. ದಿವ್ಯ, ಆಂತರಿಕ್ಷ ಮತ್ತು ಭೌಮವೆಂದು ಉತ್ಪಾತವು ಮೂರು ವಿಧವಾಗಿದೆ. ಗ್ರಹಗಳಲ್ಲೂ ನಕ್ಷತ್ರಗಳಲ್ಲೂ ತೋರಿಬರುವ ವಿಕಾರವು ದಿವ್ಯೋತ್ಪಾತವೆನಿಸುವುದು. ಇನ್ನು ಆಂತರಿಕ್ಷೋತ್ಪಾತವನ್ನು ಹೇಳುವೆನು. ಕೇಳು.

೭. ಉಲ್ಕಾಪಾತ, ದಿಕ್ಕುಗಳ ಉರಿ, ಪರಿವೇಷ, ಗಂಧರ್ವನಗರ, (ಆಕಾಶದಲ್ಲಿ ಚಿತ್ರವಿಚಿತ್ರವಾದ ನಗರವು ಕಾಣಿಸುವುದು) ಮತ್ತು ಸಹಜ ರೀತಿಯಲ್ಲಿಲ್ಲದ ಮಳೆ ಇವೇ ಮೊದಲಾದುವು ಆಂತರಿಕ್ಷೋತ್ಪಾತವೆನಿಸುವುವು.

೮. ಸ್ಥಾವರಜಂಗಮವಸ್ತುಗಳಲ್ಲಿ ತೋರಿಬರುವ ವಿಕಾರವೂ, ಭೂಕಂಪವೂ, ಕೆರೆಕೊಳಗಳಲ್ಲಿ ಕಾಣುವ ವ್ಯತ್ಯಾಸವೂ ಭೂಸಂಬಂಧವಾದ ಉತ್ಪಾತಗಳು.

೯. ಭೂಮಿಯ ಉತ್ಪಾತದ ಫಲವು ಅಲ್ಪ. ಅದೂ ಬಹುಕಾಲಾನಂತರ ಅನುಭವಕ್ಕೆ ಬರುತ್ತದೆ. ಅಂತರಿಕ್ಷದ ಉತ್ಪಾತವು ಮಧ್ಯಮಫಲವನ್ನು ಕೊಡುತ್ತದೆ. ಅದರ ಕಾಲಾವಕಾಶವು ದೀರ್ಘವೂ ಅಲ್ಲ ; ಅಲ್ಪವೂ ಅಲ್ಲ.

ಅಭ್ರಜಂ ಮಧ್ಯಫಲದಂ ಮಧ್ಯಕಾಲಫಲಪ್ರದಂ ।
ಅದ್ಭುತೇ ತು ಸಮುತ್ಪನ್ನೇ ಯದಿ ವೃಷ್ಟಿಃ ಶಿವಾ ಭವೇತ್ ॥೧೦॥

ಸಪ್ತಾಹಾಭ್ಯಂತರೇ ಜ್ಞೇಯಮದ್ಭುತಂ ನಿಷ್ಫಲಂ ಭವೇತ್ ।
ಅದ್ಭುತಸ್ಯ ವಿಕಾರಸ್ಯ ವಿನಾ ಶಾಂತ್ಯಾ ನ ದೃಶ್ಯತೇ ॥೧೧॥

ತ್ರಿಭಿರ್ವರ್ಷೈಸ್ತಥಾ ಜ್ಞೇಯಂ ಸುಮಹದ್ಭಯಕಾರಕಂ ।
ರಾಜ್ಞಃ ಶರೀರೇ ಲೋಕೇ ಚ ಪುರದ್ವಾರೇ ಪುರೋಹಿತೇ ॥೧೨॥

ಪಾಕಮಾಯಾತಿ ಪುತ್ರೇಷು ತಥಾ ವೈ ಕೋಶವಾಹನೇ ।
ಋತುಸ್ವಭಾವಾದ್ರಾಜೇಂದ್ರ ಭವಂತ್ಯದ್ಭುತಸಂಜ್ಞಿತಾಃ ॥೧೩॥

ಶುಭಾವಹಾಸ್ತೇ ವಿಜ್ಞೇಯಾಸ್ತಾಂಶ್ಚ ಮೇ ಗದತಃ ಶೃಣು ।
ವಜ್ರಾಶನಿಮಹೀಕಂಪಸಂಧ್ಯಾನಿರ್ಘಾತನಿಸ್ವನಾಃ ॥೧೪॥

---

೧೦. ದಿವ್ಯೋತ್ಪಾತವು ಸಂಭವಿಸಿದ ಏಳು ದಿನಗಳೊಳಗೆ ಸೌಮ್ಯವಾದ ರೀತಿಯಲ್ಲಿ ಮಳೆಯಾದರೆ ಅದರಿಂದ ಯಾವ ಫಲವೂ ಉಂಟಾಗುವುದಿಲ್ಲ ವೆಂದರಿಯಬೇಕು.

೧೧-೧೨. ದಿವ್ಯೋತ್ಪಾತದ ಭೀತಿಯು ಶಾಂತಿಯಿಲ್ಲದೆ ಪರಿಹಾರವಾಗು ವುದಿಲ್ಲ. ಮೂರು ವರ್ಷಗಳೊಳಗೆ ಅದು ಬಹು ಭಯಂಕರವಾದ ಫಲವನ್ನು ಕೊಡುವುದು. ರಾಜನ ಶರೀರದಲ್ಲಿ, ಪ್ರಜೆಗಳಲ್ಲಿ, ಪಟ್ಟಣದ ಹೆಬ್ಬಾಗಿಲಲ್ಲಿ, ಪುರೋಹಿತನಲ್ಲಿ, ರಾಜನ ಪುತ್ರರಲ್ಲಿ, ಭಂಡಾರದಲ್ಲಿ ಮತ್ತು ವಾಹನದಲ್ಲಿ ಅದು ತನ್ನ ಫಲವನ್ನು ತೋರಿಸುವುದು.

೧೩. ರಾಜೇಂದ್ರಾ, ಋತುಧರ್ಮಾನುಸಾರವಾಗಿ ಕೆಲವು ಉತ್ಪಾತಗಳು ಶುಭಫಲವನ್ನೇ ಕೊಡತಕ್ಕವುಗಳಾಗುವುವು. ಅವುಗಳನ್ನು ಹೇಳುವೆನು ಕೇಳು.

೧೪-೧೫. ಸಿಡಿಲು ಬೀಳುವುದು, ನೆಲ ನಡುಗುವುದು, ಸಂಧ್ಯಾಕಾಲದಲ್ಲಿ ಭಯಂಕರವಾಗಿ ಗುಡುಗುವುದು, ಪರಿವೇಷಹಾಕುವುದು, ಧೂಳೇಳುವುದು, ಹೊಗೆಯಾಡುವುದು, ಉದಯಾಸ್ತಮಯಗಳಲ್ಲಿ ಸೂರ್ಯನು ಕೆಂಪಗಿರುವುದು, ಮರ ಗಳಿಂದ ಜಿಡ್ಡು ಸೋರುವುದು. ಮರಗಳಲ್ಲಿ ಬಹಳವಾಗಿ ಹಣ್ಣು ಬಿಡುವುದು,

ಪರಿವೇಷರಜೋಧೂಮರಕ್ತಾರ್ಕಾಸ್ತಮಯೋದಯಾಃ ।
ದ್ರುಮೇಭ್ಯೋ ಭವತಿ ಸ್ನೇಹೋ ಬಹುಶಃ ಸಫಲದ್ರುಮಃ ॥೧೫॥

ಗೋಪಕ್ಷಿಮಧುವೃದ್ಧಿಶ್ಚ ಶುಭಾನಿ ಮಧುಮಾಧವೇ ।
ಋಕ್ಷೋಲ್ಕಾಪಾತಕಲುಷಂ ಕಪಿಲಾರ್ಕೇಂದುಮಂಡಲಂ ॥೧೬॥

ಕೃಷ್ಣಶ್ವೇತಂ ತಥಾ ಪೀತಂ ಧೂಸರಧ್ವಾಂತಲೋಹಿತೇ ।
ರಕ್ತಪುಷ್ಪಾರುಣಂ ಸಾಂಧ್ಯಂ ನಭಃ ಕ್ಷುಬ್ಧಾರ್ಣವೋಪಮಂ ॥೧೭॥

ಸರಿತಾಂ ಚಾಂಬುಸಂಶೋಷಂ ದೃಷ್ಟ್ವಾ ಗ್ರೀಷ್ಮೇ ಶುಭಂ ವದೇತ್ ।
ಶಕ್ರಾಯುಧಪರೀವೇಷಂ ವಿದ್ಯುದುಲ್ಕಾಧಿರೋಹಣಂ ॥೧೮॥

ಕಂಪೋದ್ವರ್ತನವೈಕೃತ್ಯಂ ಹಸನಂ ದಾರಣಂ ಕ್ಷಿತೇಃ ।
ನದ್ಯೋದಪಾನಸರಸಾಂ ವಿಧೂನತರಣಪ್ಲವಾಃ ॥೧೯॥

---

ಹಸುಗಳು, ಪಕ್ಷಿಗಳು, ಜೇನು ಇವು ವೃದ್ಧಿಯಾಗುವುದು ಇವೆಲ್ಲವೂ ವಸಂತರ್ತುವಿನಲ್ಲಿ ಶುಭವನ್ನುಂಟುಮಾಡುತ್ತವೆ.

೧೬-೧೭. ನಕ್ಷತ್ರಗಳು ಬೀಳುವುದು, ಉಲ್ಕಾಪಾತವಾಗುವುದು, ಸೂರ್ಯ ಚಂದ್ರರ ಮಂಡಲಗಳು ಕಪಿಲವರ್ಣವಾಗುವುದು, ಸಂಧ್ಯಾಸಮಯದಲ್ಲಿ ಆಕಾಶವು ಕಪ್ಪು, ಬಿಳುಪು, ಹಳದಿ, ಬೂದಿ, ಕತ್ತಲೆ ಕೆಂಪು, ಮತ್ತು ಮುತ್ತುಗದ ಹೂಗಳ ಬಣ್ಣದಿಂದ ಕೂಡಿ ಅಲ್ಲೋಲಕಲ್ಲೋಲವಾದ ಸಾಗರದಂತೆ ಕಾಣುವುದು, ಹೊಳೆಗಳಲ್ಲಿ ನೀರು ಬತ್ತುವುದು ಈ ಲಕ್ಷಣಗಳು ಗ್ರೀಷ್ಮರ್ತುವಿನಲ್ಲಿ ಕಾಣಬಂದರೆ ಶುಭವಾಗುವುವೆಂದು ಹೇಳಬೇಕು.

೧೮-೧೯. ಕಾಮನ ಬಿಲ್ಲು ಮೂಡುವುದು, ಚಂದ್ರಸೂರ್ಯರಿಗೆ ಪರಿವೇಷಹಾಕುವುದು, ಮಿಂಚುವುದು, ಉಲ್ಕಾಪಾತಗಳಾಗುವುದು, ಕೊಂಬುಳ್ಳ ಪ್ರಾಣಿಗಳು ಮತ್ತು ಹಂದಿಗಳು ಮೈಕೊಡಹುವುದು, ಉಜ್ಜುವುದು, ಉತ್ಸಾಹದಿಂದ ಧ್ವನಿಮಾಡುವುದು ನೆಲವನ್ನು ಬಗೆಯುವುದು, ನದಿಗಳಲ್ಲೂ ಕಟ್ಟೆಗಳಲ್ಲೂ ಸರೋವರಗಳಲ್ಲೂ, ನೀರಾಟವನ್ನೂ ಈಜುವುದನ್ನೂ ಬಿಡುವುದು ಇವೆಲ್ಲವೂ ವರ್ಷರ್ತುವಿನಲ್ಲಿ ಶುಭಫಲಸೂಚಕವಾದ ಚಿಹ್ನಗಳು.

**ಶೃಂಗಿಣಾಂ ಚ ವರಾಹಾಣಾಂ ವರ್ಷಾಸು ಶುಭಮಿಷ್ಯತೇ ।**
**ಶೀತಾನಿಲತುಷಾರತ್ವಂ ನರ್ದನಂ ಮೃಗಪಕ್ಷಿಣಾಂ ॥೨೦॥**

**ರಕ್ಷೋಭೂತಪಿಶಾಚಾನಾಂ ದರ್ಶನಂ ವಾಗಮಾನುಷೀ ।**
**ದಿಶೋಧೂಮಾಂಧಕಾರಶ್ಚ ಸನಭೋವನಪರ್ವತಾಃ ॥೨೧॥**

**ಉಚ್ಚೈಃಸೂರ್ಯೋದಯಾಸ್ತೌ ಚ ಹೇಮಂತೇ ಶೋಭನಾಃ ಸ್ಮೃತಾಃ ।**
**ದಿವ್ಯಸ್ತ್ರೀರೂಪಗಂಧರ್ವವಿಮಾನಾದ್ಭುತದರ್ಶನಂ ॥೨೨॥**

**ಗ್ರಹನಕ್ಷತ್ರತಾರಾಣಾಂ ದರ್ಶನಂ ವಾಗಮಾನುಷೀ ।**
**ಗೀತವಾದಿತ್ರನಿರ್ಘೋಷೋ ವನಪರ್ವತಸಾನುಷು ॥೨೩॥**

**ಸಸ್ಯವೃದ್ಧೀ ರಸೋತ್ಪತ್ತಿಃ ಶರತ್ಕಾಲೇ ಶುಭಾಃ ಸ್ಮೃತಾಃ ।**
**ಕೃಷ್ಣಾಂಜನಾಭಮಾಕಾಶಂ ತಾರೋಲ್ಕಾಪಾತಪಿಂಜರಂ ॥೨೪॥**

---

೨೦-೨೧. ತಣ್ಣಗೆ ಗಾಳಿ ಬೀಸುವುದು, ಮಂಜು ಸುರಿಯುವುದು, ಮೃಗ ಪಕ್ಷಿಗಳು ಕೂಗುವುದು, ರಾಕ್ಷಸರು, ಭೂತಗಳು ಮತ್ತು ಪಿಶಾಚಗಳು ಕಾಣಿಸಿಕೊಳ್ಳುವುದು, ಮನುಷ್ಯರಿಲ್ಲವೆ ಮಾತು ಕೇಳಿಸುವುದು, ದಿಕ್ಕುಗಳಲ್ಲಿ ಹೊಗೆಯೂ ಕತ್ತಲೆಯೂ ತುಂಬಿಕೊಳ್ಳುವುದು, ವನಗಳೂ ಪರ್ವತಗಳೂ ಆಕಾಶದೊಡನೆ ಕೂಡಿಕೊಂಡಂತೆ ಕಾಣುವುದು, ಸೂರ್ಯನ ಉದಯಾಸ್ತಕಾಲಗಳಲ್ಲಿ ವಿಶೇಷ ವ್ಯತ್ಯಾಸವು ಕಾಣುವುದು ಇವು ಹೇಮಂತರ್ತುವಿನಲ್ಲಿ ಶುಭಲಕ್ಷಣಗಳು.

೨೨-೨೩. ಅಮಾನುಷಸ್ತ್ರೀಯರೂ, ಗಂಧರ್ವರೂ, ವಿಮಾನಗಳೂ ಆಶ್ಚರ್ಯಕರವಾಗಿ ಗೋಚರವಾಗುವುದು, ಗ್ರಹಗಳೂ ನಕ್ಷತ್ರಗಳೂ ತಾರೆಗಳೂ ವಿಶೇಷ ರೂಪದಿಂದ ಕಾಣಿಸಿಕೊಳ್ಳುವುದು, ಆಕಾಶಭಾಷಿತವು ಕೇಳಿಸುವುದು, ವನಗಳಲ್ಲೂ ಪರ್ವತದ ತಪ್ಪಲುಗಳಲ್ಲೂ ಸಂಗೀತದ ಮತ್ತು ವಾದ್ಯಗಳ ಮಧುರಧ್ವನಿಯಾಗುವುದು, ಸಸ್ಯಗಳು ವೃದ್ಧಿಯಾಗುವುದು, ರಸವು ಉತ್ಪತ್ತಿಯಾಗುವುದು ಇವೆಲ್ಲವೂ ಶರತ್ಕಾಲದಲ್ಲಿ ಶುಭಫಲವನ್ನು ಸೂಚಿಸುವ ಚಿಹ್ನಗಳು.

೨೪-೨೫. ಆಕಾಶವು ಕರಿಯಕಾಡಿಗೆಯಂತಾಗುವುದು ಮತ್ತು ನಕ್ಷತ್ರಗಳಿಂದಲೂ ಉಲ್ಕಾಪಾತಗಳಿಂದಲೂ ಕೂಡಿ ಹೊಂಬಣ್ಣವನ್ನು ತಾಳುವುದು, ಸ್ತ್ರೀಯರಲ್ಲೂ ಹಸು, ಆಡು, ಕುದರೆ, ಜಿಂಕೆ ಮತ್ತು ಪಕ್ಷಿಗಳಲ್ಲೂ ವಿಚಿತ್ರವಾಗಿ

**ಚಿತ್ರಗರ್ಭೋದ್ಭವಃ ಸ್ತ್ರೀಷು ಗೋಽಜಾತ್ಶ್ವನೃಗಪಕ್ಷಿಷು ।**
**ಪತ್ರಾಂಕುರಲತಾನಾಂ ಚ ವಿಕಾರಃ ಶಿಶಿರೇ ಶುಭಾಃ ॥೨೫॥**

**ಋತುಸ್ವಭಾವೇನ ವಿನಾದ್ಭುತಸ್ಯ**
**ಜಾತಸ್ಯ ದೃಷ್ಟಸ್ಯ ತು ಶೀಘ್ರಮೇವ ।**
**ಯಥಾಗಮಂ ಶಾಂತಿರನಂತರಂ ತು**
**ಕಾರ್ಯಾ ಯಥೋಕ್ತಾ ವಸುಧಾಧಿಪೇನ ॥೨೬॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಅದ್ಭುತಶಾಂತಿಕೋತ್ಪತ್ತಿ ರ್ನಾಮೈಕೋನತ್ರಿಂಶದಧಿಕದ್ವಿಶತತಮೋಽಧ್ಯಾಯಃ**

---

ಗರ್ಭೋತ್ಪತ್ತಿಯಾಗುವುದು, ಎಲೆಗಳು, ಚಿಗುರುಗಳು ಮತ್ತು ಬಳ್ಳಿಗಳಲ್ಲಿ ರೂಪ ವ್ಯತ್ಯಾಸವಾಗುವುದು ಇವು ಶಿಶಿರರ್ತುವಿನಲ್ಲಿ ಶುಭಪ್ರದವಾದ ಲಕ್ಷಣಗಳು.

೨೬. ಋತುಸ್ವಭಾವವಲ್ಲದೆ ಉತ್ಪಾತವು ಸಂಭವಿಸಿ ಕಣ್ಣಿಗೆ ಕಾಣಿಸಿಕೊಂಡರೆ ಕೂಡಲೆ ರಾಜನು ಶಾಸ್ತ್ರದಲ್ಲಿ ಹೇಳಿರುವಂತೆ ಶಾಂತಿಯನ್ನು ಮಾಡಬೇಕು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಉತ್ಪಾತಗಳ ಲಕ್ಷಣವನ್ನೂ ಫಲವನ್ನೂ ವಿವರಿಸಿದೆ.

ಮನುಷ್ಯರ ದೋಷದಿಂದ ದೇವತೆಗಳು ಅಸಮಾಧಾನವನ್ನು ತಾಳುತ್ತಾರೆ. ಅದು ಉತ್ಪಾತಗಳ ಮೂಲಕ ಜನರಿಗೆ ಗೋಚರವಾಗುತ್ತದೆ. ಹಿಂದೆ ಹೇಳಿದಂತೆ ಇದರಲ್ಲಿ ಮೂರು ವಿಧ. ಉತ್ಪಾತವು ಸಂಭವಿಸಿದ ಮೂರು ವರ್ಷಗಳೊಳಗೆ ರಾಜ, ಪ್ರಜೆ, ಪುರೋಹಿತ, ರಾಜಪುತ್ರ ಮುಂತಾದವರಿಗೆ ಕೇಡು ಸಂಭವಿಸುವುದು. ಋತುಸ್ವಭಾವದಿಂದ ಆಗುವ ಪಾಂಚಭೌತಿಕ ವಿಕಾರಗಳು ಹಾನಿಕರವಾದುವಲ್ಲ; ಅಷ್ಟೇ ಅಲ್ಲ. ಅವು ಶುಭವನ್ನುಂಟುಮಾಡುವುವು. ಆದಕಾರಣ ಋತುಸ್ವಭಾವವಲ್ಲದ ಉತ್ಪಾತಗಳು ಗೋಚರವಾದ ಕೂಡಲೆ ಅವುಗಳ ದೋಷನಿವೃತ್ತಿಗಾಗಿ ಶಾಸ್ತ್ರದಲ್ಲಿ ಹೇಳಿರುವಂತೆ ಶಾಂತಿಯನ್ನೆಸಗಬೇಕು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಅದ್ಭುತಶಾಂತಿಕೋತ್ಪತ್ತಿಯೆಂಬ
ಇನ್ನೂರ ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು

## ಅಥ ತ್ರಿಂಶದಧಿಕದ್ವಿಶತತಮೋಽಧ್ಯಾಯಃ

|| ಗರ್ಗ ಉವಾಚ ||

ದೇವತಾರ್ಚಾಃ ಪ್ರನೃತ್ಯಂತಿ ವೇಪಂತೇ ಪ್ರಜ್ವಲಂತಿ ಚ ।
ವಮಂತ್ಯಗ್ನಿಂ ತಥಾ ಧೂಮಂ ಸ್ನೇಹಂ ರಕ್ತಂ ತಥಾ ವಸಾಂ || ೧ ||

ಆರಟಂತಿ ರುದಂತ್ಯೇತಾಃ ಪ್ರಸ್ವಿದ್ಯಂತಿ ಹಸಂತಿ ಚ ।
ಉತ್ತಿಷ್ಠಂತಿ ನಿಷೀದಂತಿ ಪ್ರಧಾವಂತಿ ಧಮಂತಿ ಚ || ೨ ||

ಭುಂಜತೇ ವಿಕ್ಷಿಪಂತೇ ವಾ ಕೋಶಪ್ರಹರಣಧ್ವಜಾ ।
ಅವಾಙ್ಮುಖಾ ವಾ ತಿಷ್ಠಂತಿ ಸ್ಥಾನಾತ್ಸ್ಥಾನಂ ಭ್ರಮಂತಿ ಚ || ೩ ||

ವಮಂತ್ಯಗ್ನಿಂ ತಥಾ ಧೂಮಂ ಸ್ನೇಹಂ ರಕ್ತಂ ತಥಾ ವಸಾಂ ।
ಏವಮಾದ್ಯಾ ಹಿ ದೃಶ್ಯಂತೇ ವಿಕಾರಾಃ ಸಹಸೋತ್ಥಿತಾಃ ।
ಲಿಂಗಾಯತನವಿಪ್ರೇಷು ತತ್ರ ವಾಸಂ ನ ರೋಚಯೇತ್ || ೪ ||

---

೧. ಗರ್ಗಮುನಿ ಹೇಳಿದನು.—ದೇವತಾಮೂರ್ತಿಗಳು ಕುಣಿಯುತ್ತವೆ; ನಡುಗುತ್ತವೆ, ಜ್ವಲಿಸುತ್ತವೆ, ಬೆಂಕಿಯನ್ನೂ, ಹೊಗೆಯನ್ನೂ, ಎಣ್ಣೆಯನ್ನೂ, ರಕ್ತವನ್ನೂ, ಕೊಬ್ಬನ್ನೂ ಕಾರುತ್ತವೆ.

೨. ಅಷ್ಟೇ ಅಲ್ಲ; ಅವು ಕೂಗಿಕೊಳ್ಳುತ್ತವೆ, ಅಳುತ್ತವೆ, ಬೆವರು ಸುರಿಸುತ್ತವೆ, ನಗುತ್ತವೆ, ಏಳುತ್ತವೆ, ಕಾರುತ್ತವೆ, ಓಡುತ್ತವೆ, ಊದುತ್ತವೆ.

೩. ಊಟಮಾಡುತ್ತವೆ; ಭಂಡಾರದ ದ್ರವ್ಯವನ್ನೂ, ಆಯುಧಗಳನ್ನೂ, ಧ್ವಜಗಳನ್ನೂ ಎಸೆಯುತ್ತವೆ. ಮುಖವನ್ನು ಕೆಳಕ್ಕೆಮಾಡಿ ನಿಲ್ಲುತ್ತವೆ. ಒಂದೆಡೆಯಿಂದ ಮತ್ತೊಂದೆಡೆಗೆ ಅಲೆದಾಡುತ್ತವೆ.

೪. ಬೆಂಕಿ, ಹೊಗೆ, ಎಣ್ಣೆ, ರಕ್ತ ಮತ್ತು ಕೊಬ್ಬುಗಳನ್ನು ಕಾರುತ್ತವೆ. ಈ ಬಗೆಯ ವಿಕಾರಗಳು ಇದ್ದಕ್ಕಿದ್ದಂತೆ ದೇವಸ್ಥಾನಗಳಲ್ಲಿಯೂ ಬ್ರಾಹ್ಮಣರ ಮನೆಗಳಲ್ಲೂ ಗೋಚರವಾಗುತ್ತವೆ. ಅಂತಹ ಕಡೆಗಳಲ್ಲಿ ವಾಸಮಾಡಬಾರದು.

ರಾಜ್ಞೋ ವಾ ವ್ಯಸನಂ ತತ್ರ ಸ ಚ ದೇಶೋ ವಿನಶ್ಯತಿ ।
ದೇವಯಾತ್ರಾಸು ಚೋತ್ಪಾತಾನ್ ದೃಷ್ಟ್ವಾ ದೇಶಭಯಂ ವದೇತ್ ॥ ೫ ॥

ಪಿತಾಮಹಸ್ಯ ಹರ್ಮ್ಯೇಷು ತತ್ರ ವಾಸಂ ನ ರೋಚಯೇತ್ ।
ಪಶೂನಾಂ ರುದ್ರಜಂ ಜ್ಞೇಯಂ ನೃಪಾಣಾಂ ಲೋಕಪಾಲಜಂ ॥ ೬ ॥

ಜ್ಞೇಯಂ ಸೇನಾಪತೀನಾಂ ತು ಯತ್ಸ್ಯಾತ್ಸ್ಕಂದವಿಶಾಖಜಂ ।
ಲೋಕಾನಾಂ ವಿಷ್ಣುವಸ್ವಿಂದ್ರ ವಿಶ್ವಕರ್ಮಸಮುದ್ಭವಂ ॥ ೭ ॥

ವಿನಾಯಕೋದ್ಭವಂ ಜ್ಞೇಯಂ ಗಣಾನಾಂ ಯೇತು ನಾಯಕಾಃ ।
ದೇವಪ್ರೇಷ್ಯಾನ್ನೃಪಪ್ರೇಷ್ಯಾ ದೇವಸ್ತ್ರೀಭಿರ್ನೃಪಸ್ತ್ರಿಯಃ ॥ ೮ ॥

ವಾಸುದೇವೋದ್ಭವಂ ಜ್ಞೇಯಂ ಗ್ರಹಣಾಮೇವ ನಾನ್ಯಥಾ ।
ದೇವತಾನಾಂ ವಿಕಾರೇಷು ಶ್ರುತವೇತ್ತಾ ಪುರೋಹಿತಃ ॥ ೯ ॥

---

೫. ಅಂತಹ ಸಂದರ್ಭಗಳಲ್ಲಿ ರಾಜನಿಗೆ ಹಾನಿಯೊದಗುತ್ತದೆ. ಆ ದೇಶವೂ ಕೂಡ ಹಾಳಾಗುತ್ತದೆ. ದೇವರ ಜಾತ್ರೆಗಳಲ್ಲಿ ಉತ್ಪಾತಗಳಾದರೆ ದೇಶಕ್ಕೇ ಭಯ ವೆಂದು ಅದರ ಫಲವನ್ನು ಹೇಳಬೇಕು.

೬. ಬ್ರಹ್ಮನ ದೇವಸ್ಥಾನಗಳಲ್ಲಿ ವಾಸಮಾಡಬಾರದು. ಈಶ್ವರನ ಅರ್ಚಾ ಮೂರ್ತಿಯಲ್ಲಿ ಹಿಂದೆ ಹೇಳಿದ ಉತ್ಪಾತಗಳು ಕಾಣಿಸಿಕೊಂಡರೆ ಪಶುಗಳಿಗೂ, ಲೋಕಪಾಲಕರ ಮೂರ್ತಿಗಳಲ್ಲಾದರೆ ರಾಜರಿಗೂ ವ್ಯಸನವುಂಟಾಗುವುದು.

೭. ಷಣ್ಮುಖನ ವಿಗ್ರಹಗಳಲ್ಲಿ ಆ ವಿಕಾರಗಳೊದಗಿದರೆ ಸೇನಾಪತಿಗಳಿಗೂ, ವಿಷ್ಣು, ವಸು, ಇಂದ್ರ ಮತ್ತು ವಿಶ್ವಕರ್ಮರ ಮೂರ್ತಿಗಳಲ್ಲಿ ಸಂಭವಿಸಿದರೆ ಲೋಕಗಳಿಗೂ ಹಾನಿ ಬರುವುದು.

೮ ಉತ್ಪಾತಗಳು ವಿನಾಯಕನ ವಿಗ್ರಹದಲ್ಲಿ ಗೋಚರವಾದರೆ ಜನರ ಪಂಗಡಗಳ ಮುಖಂಡರಿಗೂ, ದೇವದೂತರಲ್ಲಾದರೆ ರಾಜನ ಸೇವಕರಿಗೂ, ದೇವತಾಸ್ತ್ರೀಯರಲ್ಲಾದರೆ ರಾಜನ ಸ್ತ್ರೀಯರಿಗೂ ಕೇಡು ಸಂಭವಿಸುವುದು.

೯-೧೦. ಮಹಿಮಾಶಾಲಿಯಾದ ಓ ರಾಜಾ, ಗ್ರಹಗಳಲ್ಲಿ ಆಗುವ ಉತ್ಪಾತ ಗಳು ವಾಸುದೇವನ ಸಂಕಲ್ಪದಿಂದಲೇ ಆದುವು; ಬೇರೆಯಲ್ಲ. ದೇವತಾವಿಗ್ರಹ

ದೇವತಾರ್ಚಾಂ ತು ಗಂಧಾದ್ಯೈಃ ಸ್ನಾನಮಾಚ್ಛಾದ್ಯ ಭೂಷಯೇತ್ ।
ಪೂಜಯೇಚ್ಚ ಮಹಾಭಾಗ ಗಂಧಮಾಲ್ಯಾನ್ನಸಂಪದಾ ॥೧೦॥

ಮಧುಪರ್ಕೇಣ ವಿಧಿವದುಪತಿಷ್ಠೇದನಂತರಂ ।
ತಲ್ಲಿಂಗೇನ ಚ ಮಂತ್ರೇಣ ಸ್ಥಾಲೀಪಾಕಂ ಯಥಾವಿಧಿ ॥
ಪುರೋಧಾ ಜುಹುಯಾದಗ್ನೌ ಸಪ್ತರಾತ್ರಮತಂದ್ರಿತಃ ॥೧೧॥

ವಿಪ್ರಾಶ್ಚ ಪೂಜ್ಯಾ ಮಧುರಾನ್ನಪಾನೈಃ
ಸದಕ್ಷಿಣಂ ಸಪ್ತದಿನಂ ನರೇಂದ್ರ ।
ಪ್ರಾಪ್ತೇಽಷ್ಟಮೇಽಹ್ನಿ ಕ್ಷಿತಿಗೋಪ್ರದಾನೈಃ
ಸಕಾಂಚನೈಃ ಶಾಂತಿಮುಪೈತಿ ಪಾಪಂ ॥೧೨॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಅದ್ಭುತಶಾಂತಾವರ್ಚಾಧಿಕಾರೋ
ನಾಮ ತ್ರಿಂಶದಧಿಕದ್ವಿಶತತಮೋಽಧ್ಯಾಯಃ

---

ಗಳಲ್ಲಿ ವಿಕಾರಗಳು ಕಂಡುಬಂದಾಗ ವೇದಾರ್ಥವನ್ನು ಬಲ್ಲ ಪುರೋಹಿತನು ಆ ಮೂರ್ತಿಗಳಿಗೆ ಅಭಿಷೇಕಮಾಡಿ, ದಿವ್ಯವಾದ ವಸ್ತ್ರಾಲಂಕಾರಗಳನ್ನು ಧರಿಸಿ, ಗಂಧ ಪುಷ್ಪಾದಿಗಳಿಂದ ಪೂಜಿಸಿ ಉತ್ತಮವಾದ ಶಾಲ್ಯನ್ನವನ್ನು ನಿವೇದನಮಾಡಬೇಕು.

೧೧. ತರುವಾಯ ಶಾಸ್ತ್ರೋಕ್ತವಾಗಿ ಮಧುಪರ್ಕದಿಂದ ಸತ್ಕರಿಸಬೇಕು. ನಿಯಮಾನುಸಾರವಾಗಿ ಸ್ಥಾಲೀಪಾಕವನ್ನು ಮಾಡಿ, ಆಯಾ ದೇವತಾಮಂತ್ರದಿಂದ ಏಳುದಿನ ಶ್ರದ್ಧೆಯೊಡನೆ ಅಗ್ನಿಯಲ್ಲಿ ಹೋಮಮಾಡಬೇಕು.

೧೨. ರಾಜಾ, ಏಳು ದಿನಗಳೂ ಬ್ರಾಹ್ಮಣರನ್ನು ಮೃಷ್ಟಾನ್ನ ಭೋಜನ ಪಾನೀಯಗಳಿಂದ ತೃಪ್ತಿಪಡಿಸಿ ದಕ್ಷಿಣೆಯನ್ನು ಕೊಡಬೇಕು. ಎಂಟನೆಯ ದಿನ ಭೂದಾನ, ಗೋದಾನ, ಸುವರ್ಣದಾನಗಳನ್ನು ಮಾಡಬೇಕು. ಇದರಿಂದ ಉತ್ಪಾತದ ದೋಷವು ಪರಿಹಾರವಾಗುತ್ತದೆ.

## ಅಧ್ಯಾಯ ೨೩೦

## ಅಧ್ಯಾಯದ ಸಾರಾಂಶ

ದೇವತಾ ವಿಗ್ರಹಗಳಲ್ಲಿ ಕಂಡುಬರುವ ಉತ್ಪಾತದ ಚಿಹ್ನಗಳನ್ನು ಈ ಅಧ್ಯಾಯದಲ್ಲಿ ಹೇಳಿದೆ.

ದೇವಾಲಯಗಳಲ್ಲೂ ಮನೆಗಳಲ್ಲೂ ದೇವರ ಅರ್ಚಾಮೂರ್ತಿಗಳು ಒಂದೊಂದು ವೇಳೆ ನಡುಗುವುವು, ಕುಣಿಯುವುವು, ಬೆಂಕಿಯನ್ನು ಕಾರುವುವು. ಈ ಉತ್ಪಾತಗಳಿಂದ ರಾಜನಿಗೂ ದೇಶಕ್ಕೂ ಅನಿಷ್ಟವೊದಗುವುದು. ಶಾಸ್ತ್ರಜ್ಞನಾದ ಪುರೋಹಿತನು ಶಾಂತಿಕರ್ಮವನ್ನೆಸಗಿ ಈ ದೋಷವನ್ನು ಪರಿಹರಿಸಬೇಕು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಅದ್ಭುತಶಾಂತಿಯಲ್ಲಿ ಅರ್ಚಾಧಿಕಾರವೆಂಬ<br>ಇನ್ನೂರ ಮೂವತ್ತನೆಯ ಅಧ್ಯಾಯವು ಮುಗಿದುದು



## ಅಥೈಕತ್ರಿಂಶದಧಿಕದ್ವಿಶತತಮೋಽಧ್ಯಾಯಃ

|| ಗರ್ಗ ಉವಾಚ ||

ಅಗ್ನಿರಾದೀಪ್ಯತೇ ಯತ್ರ ರಾಷ್ಟ್ರೇ ಭೃಶಮನಿಂಧನಃ ।
ನ ದೀಪ್ಯತೇ ಚೇಂಧನವಾಂಸ್ತದ್ರಾಷ್ಟ್ರಂ ಪೀಡ್ಯತೇ ನೃಪೈಃ || ೧ ||

ಪ್ರಜ್ವಲೇಚ್ಚಾಂಬುನಾ ಸೇಕಾತ್ತದಾರ್ದ್ರಂ ವಾಪಿ ಕಿಂಚನ ।
ಪ್ರಾಕಾರಂ ತೋರಣಂ ದ್ವಾರಂ ನೃಪವೇಶ್ಮ ಸುರಾಲಯಂ || ೨ ||

ಏತಾನಿ ಯತ್ರ ದೀಪ್ಯಂತೇ ತತ್ರ ರಾಜ್ಞೋ ಭಯಂ ಭವೇತ್ ।
ವಿದ್ಯುತಾ ವಾ ಪ್ರದಹ್ಯಂತೇ ತದಾಪಿ ನೃಪತೇರ್ಭಯಂ || ೩ ||

ಅನ್ಯೈಶಾದಿ ತಮಾಂಸಿ ಸ್ಯುರ್ವಿನಾ ಪಾಂಶುರಜಾಂಸಿ ಚ ।
ಧೂಮಶ್ಚಾನಗ್ನಿಜೋ ಯತ್ರ ತತ್ರ ವಿದ್ಯಾನ್ಮಹಾಭಯಂ || ೪ ||

---

೧. ಗರ್ಗಮುನಿ ಹೇಳಿದನು.—ಯಾವರಾಷ್ಟ್ರದಲ್ಲಿ ಒಳ್ಳೆಯ ಸೌದೆ ಯಿಲ್ಲದೆಯೇ ಬೆಂಕಿ ಚೆನ್ನಾಗಿ ಉರಿಯುತ್ತದೆಯೋ, ಸೌದೆಯನ್ನು ಹಾಕಿದರೂ ಸರಿಯಾಗಿ ಉರಿಯುವುದಿಲ್ಲವೋ ಆ ರಾಷ್ಟ್ರಕ್ಕೆ ಶತ್ರುರಾಜರ ಪೀಡೆ ಬಹುವಾಗಿರುತ್ತದೆ.

೨-೩. ಹಸಿಯಬೆರಣಿ, ಸೌದೆ ಮುಂತಾದ ಯಾವ ಪದಾರ್ಥವಾಗಲಿ ನೀರನ್ನು ಚಿಮುಕಿಸಿದರೂ ಆರದೆ ಉರಿಯುವುದು, ಕೋಟೆ, ಹೆಬ್ಬಾಗಿಲು, ಬಾಗಿಲು, ಅರಮನೆ ದೇವಸ್ಥಾನ ಇವು ಬೆಂಕಿಗೆ ತುತ್ತಾಗುವುದು ಇಂತಹ ಲಕ್ಷಣಗಳು ತೋರಿಬಂದರೆ ಅಲ್ಲಿನ ರಾಜನಿಗೆ ಭಯವುಂಟಾಗುವುದು. ಇವು ಸಿಡಿಲಿಗೆ ಸಿಕ್ಕಿ ಉರಿದುಹೋದರೂ ಅರಸನಿಗೆ ಭಯವೆಂದೇ ತಿಳಿಯಬೇಕು.

೪. ಧೂಳು ಏಳದಿದ್ದರೂ ಹಗಲು ಹೊತ್ತಿನಲ್ಲೇ ಕತ್ತಲೆ ಕವಿದುಕೊಳ್ಳುವುದು, ಬೆಂಕಿಯಿಲ್ಲದೆ ಹೊಗೆಯೇಳುವುದು ಈ ಉತ್ಪಾತಗಳಾಗುವ ಕಡೆ ಮಹಾ ಭಯವುಂಟೆಂದು ತಿಳಿಯಬೇಕು.

ತಡಿತ್ತ್ವನಭ್ರೇ ಗಗನೇ ಭಯಂ ಸ್ಯಾದ್ವೃಕ್ಷವರ್ಜಿತೇ ।
ದಿವಾ ಸತಾರೇ ಗಗನೇ ತಥೈವ ಭಯಮಾದಿಶೇತ್ ॥ ೫ ॥

ಗ್ರಹನಕ್ಷತ್ರವೈಕೃತ್ಯೇ ತಾರಾವಿಷಮದರ್ಶನೇ ।
ಪುರವಾಹನಯಾನೇಷು ಚತುಷ್ಪಾನ್ಮೃಗಪಕ್ಷಿಷು ॥ ೬ ॥

ಆಯುಧೇಷು ಚ ದೀಪ್ತೇಷು ಧೂಮಾಯತ್ಸು ತಥೈವ ಚ ।
ನಿರ್ಗಮತ್ಸು ಚ ಕೋಶಾಚ್ಚ ಸಂಗ್ರಾಮಸ್ತುಮುಲೋ ಭವೇತ್ ॥ ೭ ॥

ವಿನಾಗ್ನಿಂ ವಿಸ್ಫುಲಿಂಗಾಶ್ಚ ದೃಶ್ಯಂತೇ ಯತ್ರ ಕುತ್ರಚಿತ್ ।
ಅನಾರೋಪ್ಯಾಭಿಪೂರ್ಯಂತೇ ಧನೂಂಷಿ ವಿಕೃತಾನಿ ಚ ॥ ೮ ॥

ವಿಕಾರಾಶ್ಚಾಯುಧಾನಾಂ ಸ್ಯಾತ್ತತ್ರ ಸಂಗ್ರಾಮಮಾದಿಶೇತ್ ।
ತ್ರಿರಾತ್ರೋಪೋಷಿತಶ್ಚಾತ್ರ ಪುರೋಧಾಃ ಸುಸಮಾಹಿತಃ ॥ ೯ ॥

---

೫. ಆಕಾಶದಲ್ಲಿ ಮೋಡವಿಲ್ಲದಿದ್ದರೂ ಮಿಂಚಲಿ; ರಾತ್ರಿಯಲ್ಲಿ ನಕ್ಷತ್ರಗಳು ಕಾಣದಿರಲಿ ಅಥವಾ ಹಗಲಿನಲ್ಲಿ ಅವು ಕಾಣಿಸಲಿ ರಾಷ್ಟ್ರಕ್ಕೆ ದೊಡ್ಡ ಭೀತಿಯೆಂದು ಹೇಳಬೇಕು.

೬-೭. ಗ್ರಹಗಳೂ, ನಕ್ಷತ್ರಗಳೂ ವಿಕಾರವಾಗಿ ಕಂಡರೆ, ನಕ್ಷತ್ರಗಳು ರಾತ್ರಿಯಲ್ಲಿ ಕಾಣದೆ ಹಗಲುಹೊತ್ತಿನಲ್ಲಿ ಗೋಚರವಾದರೆ, ಪಟ್ಟಣ, ವಾಹನ, ಯಾನ, ಎತ್ತು, ಹಸು, ಕುದುರೆಗಳು ಮತ್ತು ಮೃಗಪಕ್ಷಿಗಳು, ಉರಿಯುತ್ತಿದ್ದರೆ, ಆಯುಧಗಳು, ಉರಿಯುತ್ತ ಹೊಗೆಯಾಡುತ್ತ ಶಸ್ತ್ರಾಗಾರದಿಂದ ಹೊರಕ್ಕೆ ಹೊರಡುವಂತೆ ಕಂಡರೆ ಭಯಂಕರವಾದ ಯುದ್ಧವೊದಗುವುದು.

೮. ಬೆಂಕಿಯಿಲ್ಲದೆ ಕಿಡಿಗಳೇಳುವುದು, ಯಾರೂ ಹೆದೆಯೇರಿಸದೆಯೇ ಬಿಲ್ಲು ತಾನಾಗಿ ಹೆದೆಕಟ್ಟಿಕೊಳ್ಳುವುದು, ಆಯುಧಗಳಲ್ಲಿ ವಿಕಾರವು ತೋರಿಬರುವುದು ಇವೆಲ್ಲವೂ ಯುದ್ಧವೊದಗುವ ಸೂಚನೆಯೆಂದು ಹೇಳಬೇಕು.

೯-೧೦. ಅಗ್ನ್ಯುತ್ಪಾತವು ಸಂಭವಿಸಿದಾಗ ಪುರೋಹಿತನು ನಿಯಮದಿಂದ ಮೂರು ದಿನ ಉಪವಾಸಮಾಡಿ, ಅಗ್ನಿಮಂತ್ರಗಳನ್ನುಚ್ಚರಿಸುತ್ತ ಅರಳಿ, ಆಲ,

**ಸಮಿದ್ಭಿಃ ಕ್ಷೀರವೃಕ್ಷಾಣಾಂ ಸರ್ಷಪೈಶ್ಚ ಘೃತೇನ ಚ ।**
**ಹೋಮಂ ಕುರ್ಯಾದಗ್ನಿಮಂತ್ರೈರ್ಬ್ರಾಹ್ಮಣಾಂಶ್ಚೈವ ಭೋಜಯೇತ್ ॥೧೦॥**
**ದದ್ಯಾತ್ಸುವರ್ಣಂ ಚ ತಥಾ ದ್ವಿಜೇಭ್ಯೋ**
**ಗಾಶ್ಚೈವ ವಸ್ತ್ರಾಣಿ ತಥಾ ಭುವಂ ಚ ।**
**ಏವಂ ಕೃತೇ ಪಾಪಮುಪೈತಿ ನಾಶಂ**
**ಯದಗ್ನಿವೈಕೃತ್ಯಭವಂ ದ್ವಿಜೇಂದ್ರ ॥೧೧॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇಽದ್ಭುತಶಾಂತಾವಗ್ನಿವೈಕೃತ್ಯಂ ನಾಮೈಕತ್ರಿಂಶದಧಿಕದ್ವಿಶತತಮೋಽಧ್ಯಾಯಃ**

---

ಮುಂತಾದ ಹಾಲುಮರಗಳ ಸಮಿತ್ತುಗಳಿಂದಲೂ, ಸಾಸುವೆಯಿಂದಲೂ, ತುಪ್ಪದಿಂದಲೂ ಹೋಮಮಾಡಬೇಕು. ಅನಂತರ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು.

೧೧. ದ್ವಿಜರಿಗೆ ಬಂಗಾರ, ಹಸುಗಳು, ವಸ್ತ್ರಗಳು ಮತ್ತು ಭೂಮಿ ಇವುಗಳನ್ನು ದಾನವಾಗಿ ಕೊಡಬೇಕು. ಎಲೈ ಅತ್ರಿಮಹರ್ಷೀ, ಹೀಗೆ ಮಾಡಿದರೆ ಅಗ್ನ್ಯುತ್ಪಾತದಿಂದ ಬರುವ ದೋಷವು ಪರಿಹಾರವಾಗುವುದು.

### ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಅಗ್ನ್ಯುತ್ಪಾತದ ಲಕ್ಷಣವನ್ನೂ ಅದರ ಪರಿಹಾರವನ್ನೂ ಹೇಳಿದೆ.

ಸೌದೆಯಿಲ್ಲದೆಯೆ ಬೆಂಕಿ ಉರಿಯುವುದು, ಪ್ರಾಕಾರ, ತೋರಣ, ಅರಮನೆ ಮುಂತಾದುವು ಹತ್ತಿ ಉರಿಯುವುದು, ಆಯುಧಗಳಲ್ಲಿ ಉರಿಯೂ ಹೊಗೆಯೂ ಕಾಣಿಸುವುದು ಮುಂತಾದುವು ಈ ಉತ್ಪಾತದ ಲಕ್ಷಣಗಳು. ಇವು ಯುದ್ಧ ಭೀತಿಯನ್ನು ಸೂಚಿಸುತ್ತವೆ. ಪುರೋಹಿತನು ನಿಯಮದಿಂದ ಮೂರುದಿನಗಳ ಉಪವಾಸಮಾಡಿ ಶಾಂತಿಯನ್ನು ನೆರವೇರಿಸಿದರೆ ಇದರ ದೋಷವು ಪರಿಹಾರವಾಗುತ್ತದೆ.

ಶ್ರೀಮತ್ಸ್ಯಮಹಾಪುರಾಣದಲ್ಲಿ ಅದ್ಭುತಶಾಂತಿಯಲ್ಲಿ ಅಗ್ನಿವೈಕೃತ್ಯವೆಂಬ ಇನ್ನೂರ ಮೂವತ್ತೊಂದನೆಯ ಅಧ್ಯಾಯವು ಮುಗಿದುದು

## ಅಥ ದ್ವಾತ್ರಿಂಶದಧಿಕದ್ವಿಶತತಮೋಽಧ್ಯಾಯಃ

|| ಗರ್ಗ ಉವಾಚ ||

ಪುರೇಷು ಯೇಷು ದೃಶ್ಯಂತೇ ಪಾದಪಾ ದೇವಚೋದಿತಾಃ ।
ರುದಂತೋ ವಾ ಹಸಂತೋ ವಾ ಸ್ರವಂತೋ ವಾ ರಸಾನ್ ಬಹೂನ್ || ೧ ||

ಅರೋಗಾ ವಾ ವಿನಾ ವಾತಂ ಶಾಖಾಂ ಮುಂಚಂತ್ಯಥ ದ್ರುಮಾಃ ।
ಫಲಂ ಪುಷ್ಪಂ ತಥಾಽಕಾಲೇ ದರ್ಶಯಂತಿ ತ್ರಿಹಾಯನಾಃ || ೨ ||

ಪೂರ್ವವತ್ಸ್ವಂ ದರ್ಶಯಂತಿ ಫಲಂ ಪುಷ್ಪಂ ತಥಾಂತರೇ ।
ಕ್ಷೀರಂ ಸ್ನೇಹಂ ತಥಾ ರಕ್ತಂ ಮಧು ತೋಯಂ ಸ್ರವಂತಿ ಚ || ೩ ||

ಶುಷ್ಯಂತ್ಯರೋಗಾಃ ಸಹಸಾ ಶುಷ್ಕಾ ರೋಹಂತಿ ವಾ ಪುನಃ ।
ಉತ್ತಿಷ್ಠಂತೀಹ ಪತಿತಾಃ ಪತಂತಿ ಚ ತಥೋತ್ಥಿತಾಃ || ೪ ||

---

೧-೪. ಗರ್ಗಮುನಿ ಹೇಳಿದನು.—ಕೆಲವು ವೇಳೆ ಪಟ್ಟಣಗಳಲ್ಲಿ ಮರಗಳು ದೈವಪ್ರೇರಣೆಯಿಂದ ಅಳುತ್ತವೆ, ನಗುತ್ತವೆ, ಬಗೆಬಗೆಯ ರಸಗಳನ್ನು ಸುರಿಸುತ್ತವೆ; ಯಾವರೋಗವೂ ಇಲ್ಲದಿರುವಾಗ, ಗಾಳಿಯೂ ಸಹ ಬೀಸದಿರುವಾಗ ಅವುಗಳ ಕೊಂಬೆಗಳು ಮುರಿದು ಬೀಳುತ್ತವೆ. ಇನ್ನೂ ಮೂರು ವರ್ಷದ ಸಸಿಗಳು ಅಕಾಲ ದಲ್ಲಿ ಹೂಹಣ್ಣುಗಳನ್ನು ಬಿಡುತ್ತವೆ. ಅಸ್ಥಾನಗಳಲ್ಲಿ ಎಂದರೆ ನಡುಗೊಂಬೆಗಳಲ್ಲಿ ಫಲಪುಷ್ಪಗಳು ಕಾಣುತ್ತವೆ. ಹಾಲು, ಜಿಡ್ಡು, ರಕ್ತ, ಜೇನುತುಪ್ಪ ಮತ್ತು ನೀರು ಅವುಗಳಲ್ಲಿ ಸ್ರವಿಸುತ್ತವೆ. ಆರೋಗ್ಯವಾಗಿರುವಾಗಲೇ ಥಟ್ಟನೆ ಒಣಗುತ್ತವೆ. ಒಣಗಿದ ಮೇಲೆ ಮತ್ತೆ ಚಿಗುರುತ್ತವೆ. ನೆಲದಲ್ಲಿ ಬಿದ್ದಮೇಲೆ ಎದ್ದುನಿಲ್ಲುತ್ತವೆ. ನಿಂತಮೇಲೆ ಮತ್ತೆ ಬೀಳುತ್ತವೆ. ಇವೆಲ್ಲ ವೃಕ್ಷೋತ್ಪಾತದ ಲಕ್ಷಣಗಳು. ಎಲೈ ಅತ್ರಿಮುನಿಯೇ, ಇದರ ಪರಿಣಾಮವನ್ನೂ ಫಲವನ್ನೂ ಹೇಳುತ್ತೇನೆ ಕೇಳು.

ತತ್ರ ವಕ್ಷ್ಯಾಮಿ ತೇ ಬ್ರಹ್ಮನ್ ವಿಪಾಕಂ ಫಲಮೇವ ಚ ।
ರೋದನೇ ವ್ಯಾಧಿಮಭ್ಯೇತಿ ಹಸನೇ ದೇಶವಿಭ್ರಮಂ ॥ ೫ ॥

ಶಾಖಾಪ್ರಪತನಂ ಕುರ್ಯಾತ್ಸಂಗ್ರಾಮೇ ಯೋಧಪಾತನಂ ।
ಬಾಲಾನಾಂ ಮರಣಂ ಕುರ್ಯುರಕಾಲೇ ಪುಷ್ಪಿತಾ ದ್ರುಮಾಃ ॥ ೬ ॥

ಸ್ವರಾಷ್ಟ್ರಭೇದಂ ಕುರುತೇ ಫಲಪುಷ್ಪಮಥಾಂತರೇ ।
ಕ್ಷಯಃ ಸರ್ವತ್ರ ಗೋಕ್ಷೀರೇ ಸ್ನೇಹೇ ದುರ್ಭಿಕ್ಷಲಕ್ಷಣಂ ॥ ೭ ॥

ವಾಹನಾಪಚಯಂ ಮದ್ಯೇ ರಕ್ತೇ ಸಂಗ್ರಾಮಮಾದಿಶೇತ್ ।
ಮಧುಸ್ರಾವೇ ಭವೇದ್ವ್ಯಾಧಿರ್ಜಲಸ್ರಾವೇ ನ ವರ್ಷತಿ ॥ ೮ ॥

ಅರೋಗಶೋಷಣಂ ಜ್ಞೇಯಂ ಬ್ರಹ್ಮನ್ ದುರ್ಭಿಕ್ಷಲಕ್ಷಣಂ ।
ಶುಷ್ಕೇಷು ಸಂಪ್ರರೋಹಸ್ತು ವೀರ್ಯಮನ್ನಂ ಚ ಹೀಯತೇ ॥ ೯ ॥

---

೫-೬. ಮರಗಳು ಅತ್ತರೆ ಪ್ರಜೆಗಳಿಗೆ ರೋಗ ಬರುತ್ತದೆ. ನಕ್ಕರೆ ದೇಶದಲ್ಲಿ ಅಲೆದಾಟ ಹೆಚ್ಚುವುದು. ಕೊಂಬೆಗಳು ಮುರಿದು ಬಿದ್ದರೆ ಯುದ್ಧದಲ್ಲಿ ಯೋಧರು ಮಡಿದು ಬೀಳುವರು. ಅಕಾಲದಲ್ಲಿ ಹೂಬಿಟ್ಟರೆ ಬಾಲಕರಿಗೆ ಮರಣ ಸಂಭವಿಸುವುದು.

೭. ನಡುಗೊಂಬೆಗಳಲ್ಲೂ ಅಸ್ಥಾನಗಳಲ್ಲೂ ಹೂಹಣ್ಣುಗಳು ಬಿಟ್ಟರೆ ಸ್ವದೇಶಕ್ಕೆ ಹಾನಿ ಬರುತ್ತದೆ. ಹಸುವಿನ ಹಾಲನ್ನು ಸುರಿದರೆ ಸರ್ವತ್ರನಾಶವೂ, ಜಿಡ್ಡು ಸೋರಿದರೆ ಕ್ಷಾಮಭೀತಿಯೂ ಸೂಚಿತವಾಗುತ್ತವೆ.

೮. ಮದ್ಯವು ಸ್ರವಿಸಿದರೆ ವಾಹನಗಳಿಗೆ ಉಪದ್ರವವೂ, ರಕ್ತಸುರಿದರೆ ಯುದ್ಧವೂ, ಜೇನುತುಪ್ಪ ಸೋರುತ್ತಿದ್ದರೆ ವ್ಯಾಧಿಯೂ, ನೀರು ಜಿನಗುತ್ತಿದ್ದರೆ ಅನಾವೃಷ್ಟಿಯೂ ಸಂಭವಿಸುವುವೆಂದು ತಿಳಿಯಬೇಕು.

೯. ಎಲೈ ಅತ್ರಿಮುನಿಯೇ, ರೋಗವಿಲ್ಲದೆ ಮರಗಿಡಗಳು ಒಣಗುವುದು ಕ್ಷಾಮದ ಸೂಚನೆ. ಒಣಗಿದ ಮೇಲೆ ಚಿಗುರಿದರೆ ದೇಶದಲ್ಲಿ ವೀರ್ಯವೂ ಅನ್ನವೂ ಕ್ಷಯಿಸುವುವು.

ಉತ್ಥಾನೇ ಪತಿತಾನಾಂ ಚ ಭಯಂ ಭೇದಕರಂ ಭವೇತ್ ।
ಸ್ಥಾನಾತ್ಸ್ಥಾನಂ ತು ಗಮನೇ ದೇಶಭಂಗಸ್ತಥಾ ಭವೇತ್ ॥೧೦॥

ಜ್ವಲತ್ಸ್ವಪಿ ಚ ವೃಕ್ಷೇಷು ರುದತ್ಸ್ವಪಿ ಧನಕ್ಷಯಂ ।
ಏತತ್ಪೂಜಿತವೃಕ್ಷೇಷು ಸರ್ವಂ ರಾಜ್ಞೋ ವಿಪದ್ಯತೇ ॥೧೧॥

ಪುಷ್ಪೇ ಫಲೇ ವಾ ವಿಕೃತೇ ರಾಜ್ಞೋ ಮೃತ್ಯುಂ ತಥಾದಿಶೇತ್ ।
ಅನ್ಯೇಷು ಚೈವ ವೃಕ್ಷೇಷು ವೃಕ್ಷೋತ್ಪಾತೇಷ್ವತಂದ್ರಿತಃ ॥೧೨॥

ಆಚ್ಛಾದಯಿತ್ವಾ ತಂ ವೃಕ್ಷಂ ಗಂಧಮಾಲ್ಯೈರ್ವಿಭೂಷಯೇತ್ ।
ವೃಕ್ಷೋಪರಿ ತಥಾ ಛತ್ರಂ ಕುರ್ಯಾತ್ಪಾಪಪ್ರಶಾಂತಯೇ ॥೧೩॥

ಶಿವಮಭ್ಯರ್ಚಯೇದ್ದೇವಂ ಪಶುಂ ಚಾಸ್ಮೈ ನಿವೇದಯೇತ್ ।
ರುದ್ರೇಭ್ಯ ಇತಿ ಷಡ್ಢೋಮಾನ್ ಹುತ್ವಾ ರುದ್ರಂ ಜಪೇತ್ತತಃ ॥೧೪॥

---

೧೦. ಬಿದ್ದ ಮರಗಳು ಎದ್ದರೆ ದೇಶದಲ್ಲಿ ಪರಸ್ಪರ ಭೇದದ ಭೀತಿಯೂ, ಒಂದುಕಡೆಯಿಂದ ಮತ್ತೊಂದು ಕಡೆಗೆ ಸಂಚರಿಸಿದಂತೆ ಕಂಡರೆ ದೇಶಭಂಗವೂ ಆಗುವುವು.

೧೧. ಮರಗಳು ಉರಿಯಲಿ, ಅಳಲಿ ಧನಕ್ಷಯವಾಗುವುದು; ಈ ಮರಗಳನ್ನು ಶತ್ರುಗಳು ಪೂಜಿಸಿದರೆ ರಾಜನ ಸರ್ವಸ್ವವೂ ನಾಶವಾಗುತ್ತದೆ.

೧೨. ಹೂವಾಗಲಿ ಹಣ್ಣಾಗಲಿ, ಸ್ವಭಾವವಾಗಿಲ್ಲದೆ ವಿಕೃತರೂಪದಿಂದಿದ್ದರೆ ರಾಜನಿಗೆ ಮೃತ್ಯು ಒದಗುವುದು. ಹೀಗೆಯೇ ವೃಕ್ಷಗಳಲ್ಲಿ ಇತರ ವಿಧವಾದ ಉತ್ಪಾತಗಳಾದರೆ ಜಾಗರೂಕನಾಗಿರಬೇಕು.

೧೩. ಆ ಮರವನ್ನು ವಸ್ತ್ರದಿಂದ ಮರೆಮಾಡಿ ಗಂಧಪುಷ್ಪಗಳಿಂದ ಅಲಂಕರಿಸಬೇಕು. ಪಾಪಶಾಂತಿಗೋಸ್ಕರ ಅದರ ಮೇಲೆ ಛತ್ರವನ್ನು ಇಡಬೇಕು.

೧೪. ಮಹಾದೇವನನ್ನು ಪೂಜಿಸಿ ಅವನಿಗೆ ಪಶುವನ್ನು ಸಮರ್ಪಿಸಬೇಕು. "ರುದ್ರೇಭ್ಯ" ಎಂಬ ಮಂತ್ರದಿಂದ ಆರುಸಾರಿ ಹೋಮಮಾಡಿ ತರುವಾಯ ರುದ್ರಮಂತ್ರಗಳನ್ನು ಜಪಿಸಬೇಕು.

ಮಧ್ವಾಜ್ಯಯುಕ್ತೇನ ತು ಪಾಯಸೇನ
ಸಂಪೂಜ್ಯ ವಿಪ್ರಾಂಶ್ಚ ಭುವಂ ಚ ದದ್ಯಾತ್ ।
ಗೀತೇನ ನೃತ್ಯೇನ ತಥಾರ್ಚಯೇತ್ತು
ದೇವಂ ಹರಂ ಪಾಪವಿನಾಶಹೇತೋಃ ॥೧೫॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇಽದ್ಭುತಶಾಂತೌ ವೃಕ್ಷೋತ್ಪಾತ ಪ್ರಶಮನಂ ನಾಮ ದ್ವಾತ್ರಿಂಶದುತ್ತರ ದ್ವಿಶತತಮೋಽಧ್ಯಾಯಃ

---

೧೫. ಜೇನುತುಪ್ಪವನ್ನೂ ತುಪ್ಪವನ್ನೂ ಸೇರಿಸಿದ ಪಾಯಸವನ್ನು ಬ್ರಾಹ್ಮಣರಿಗೆ ಕೊಟ್ಟು ಸತ್ಕರಿಸಿ ಭೂದಾನವನ್ನು ಮಾಡಬೇಕು. ಪಾಪಪರಿಹಾರಕ್ಕೋಸ್ಕರ ಗಾನದಿಂದಲೂ ನೃತ್ಯದಿಂದಲೂ ಮಹಾದೇವನನ್ನು ಪೂಜಿಸಬೇಕು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ವೃಕ್ಷೋತ್ಪಾತದ ಲಕ್ಷಣವನ್ನೂ ಅದರ ಪರಿಹಾರವನ್ನೂ ಹೇಳಿದೆ.

ದೈವಪ್ರೇರಣೆಯಿಂದ ಮರಗಳು ಕೆಲವು ವೇಳೆ ಅಳುತ್ತವೆ. ನಗುತ್ತವೆ, ಬಗೆ ಬಗೆಯ ರಸಗಳನ್ನು ಸುರಿಸುತ್ತವೆ. ಇದರಿಂದ ರಾಜನಿಗೂ ರಾಷ್ಟ್ರಕ್ಕೂ ಅನಿಷ್ಟವಾದಗುವುದು. ಆದಕಾರಣ ರಾಜನು ಶಾಸ್ತ್ರೋಕ್ತವಾಗಿ ಶಾಂತಿಯನ್ನು ಮಾಡಿಸಿ ಇದರ ದೋಷವನ್ನು ಪರಿಹರಿಸಿಕೊಳ್ಳಬೇಕು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಅದ್ಭುತಶಾಂತಿಯಲ್ಲಿ ವೃಕ್ಷೋತ್ಪಾತದ ಪ್ರಶಮನವೆಂಬ ಇನ್ನೂರ ಮೂವತ್ತೆರಡನೆಯ ಅಧ್ಯಾಯವು ಮುಗಿದುದು

## ಅಥ ತ್ರಯಸ್ತ್ರಿಂಶದಧಿಕದ್ವಿಶತತಮೋಽಧ್ಯಾಯಃ

॥ ಗರ್ಗ ಉವಾಚ ॥

ಅತಿವೃಷ್ಟಿರನಾವೃಷ್ಟಿರ್ದುರ್ಭಿಕ್ಷಾಯೋಽಭಯಂ ಸ್ಮೃತಂ ।
ಅನೃತೌ ತು ದಿವಾಽನಂತಾ ವೃಷ್ಟಿರ್ಜ್ಞೇಯಾ ಭಯಾನಕಾ ॥ ೧ ॥

ಅನಭ್ರೇ ವೈಕೃತಾ ಚೈವ ವಿಜ್ಞೇಯಾ ರಾಜಮೃತ್ಯವೇ ।
ಶೀತೋಷ್ಣಾನಾಂ ವಿಪರ್ಯಾಸೇ ನೃಪಾಣಾಂ ರಿಪುಜಂ ಭಯಂ ॥ ೨ ॥

ಶೋಣಿತಂ ವರ್ಷತೇ ಯತ್ರ ತತ್ರ ಶಸ್ತ್ರಭಯಂ ಭವೇತ್ ।
ಅಂಗಾರಪಾಂಸುವರ್ಷೇಷು ನಗರಂ ತದ್ವಿನಶ್ಯತಿ ॥ ೩ ॥

ಮಜ್ಜಾಸ್ಥಿಸ್ನೇಹಮಾಂಸಾನಾಂ ಜನಮಾರಭಯಂ ಭವೇತ್ ।
ಫಲಂ ಪುಷ್ಪಂ ತಥಾ ಧಾನ್ಯಂ ಪರೇಣಾತಿಭಯಾಯ ತು ॥ ೪ ॥

---

೧. ಗರ್ಗಮುನಿ ಹೇಳಿದನು.—ಮಳೆ ಅತಿಯಾಗಿ ಬೀಳುವುದು ಇಲ್ಲವೇ ಬೀಳದೆಯೇ ಹೋಗುವುದು ಇವೆರಡೂ ಕ್ಷಾಮಕ್ಕೆ ಕಾರಣ. ಅಕಾಲದಲ್ಲಿ ಹಗಲು ಹೊತ್ತು ಬಿಡುವಿಲ್ಲದೆ ಮಳೆ ಸುರಿದರೆ ಅದರಿಂದ ದೇಶಕ್ಕೆ ಭಯವುಂಟು.

೨. ಮೋಡವಿಲ್ಲದಿರುವಾಗ ಗುಡುಗು, ಮಿಂಚು, ಸಿಡಿಲುಗಳು ಆದರೆ ಅದು ರಾಜನಿಗೆ ಮೃತ್ಯು ಒದಗುವ ಸೂಚನೆಯೆಂದರಿಯಬೇಕು. ಶೀತೋಷ್ಣಗಳು ಋತುಧರ್ಮಕ್ಕೆ ತಕ್ಕಂತಿರದೆ ವಿಪರೀತವಾದರೆ ರಾಜರಿಗೆ ಶತ್ರುಗಳಿಂದ ಭಯವು ಬರುವುದು.

೩. ರಕ್ತದ ಮಳೆಯಾದರೆ ಆ ದೇಶದಲ್ಲಿ ಶಸ್ತ್ರದಿಂದ ಭಯವುಂಟಾಗುವುದು. ಇದ್ದಿಲೂ ಧೂಳೂ ಸುರಿದರೆ ಆ ನಗರವು ಹಾಳಾಗುವುದು.

೪. ಮಾಂಸಸಾರ, ಮೂಳೆ, ಎಣ್ಣೆ, ಮಾಂಸ ಇವು ವರ್ಷಿಸಿದರೆ ಜನಗಳ ಕೊಲೆ ನಡೆಯುವುದೆಂಬ ಭೀತಿಯುಂಟು. ಹೂ, ಹಣ್ಣು ಮತ್ತು ಧಾನ್ಯಗಳ ಮಳೆಯಾದರೆ ಶತ್ರುಗಳಿಂದ ಪ್ರಬಲವಾದ ಭಯವುಂಟಾಗುವುದು.

**ಪಾಂಸುಜಂತೂಪಲಾನಾಂ ಚ ವರ್ಷತೋ ರೋಗಜಂ ಭಯಂ।**
**ಛಿದ್ರಮನ್ನಪ್ರವರ್ಷೇಣ ಸಸ್ಯಾನಾಂ ಭೀತಿವರ್ಧನಂ ॥ ೫ ॥**

**ವಿರಜಸ್ಕೇ ರವೌ ವ್ಯಭ್ರೇ ಯದಾ ಛಾಯಾ ನ ದೃಶ್ಯತೇ।**
**ದೃಶ್ಯತೇ ತು ಪ್ರತೀಪಾ ವಾ ತತ್ರ ದೇಶಭಯಂ ಭವೇತ್ ॥ ೬ ॥**

**ನಿರಭ್ರೇ ವಾಥ ರಾತ್ರೌ ವಾ ಶ್ವೇತಂ ಯಾಮ್ಯೋತ್ತರೇಣ ತು।**
**ಇಂದ್ರಾಯುಧಂ ತದಾ ದೃಷ್ಟ್ವಾ ಉಲ್ಕಾಪಾತಂ ತಥೈವ ಚ ॥ ೭ ॥**

**ದಿಗ್ದಾಹಪರಿವೇಷೌ ಚ ಗಂಧರ್ವನಗರಂ ತಥಾ।**
**ಪರಚಕ್ರಭಯಂ ಬ್ರೂಯಾದ್ದೇಶೋಪದ್ರವಮೇವ ಚ ॥ ೮ ॥**

**ಸೂರ್ಯೇಂದುಪರ್ಜನ್ಯಸಮೀರಣಾನಾಂ**
**ಯಾಗಸ್ತು ಕಾರ್ಯೋ ವಿಧಿವದ್ದ್ವಿಜೇಂದ್ರ।**
**ಧನಾನಿ ಗಾವಃ ಕಾಂಚನದಕ್ಷಿಣಾ ಚ**
**ದೇಯಾ ದ್ವಿಜಾನಾಮಘನಾಶಹೇತೋಃ ॥ ೯ ॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇಽದ್ಭುತಶಾಂತೌ ವೃಷ್ಟಿವೈಕೃತಿ ಪ್ರಶಮನಂ ನಾಮ ತ್ರಯಸ್ತ್ರಿಂಶದಧಿಕದ್ವಿಶತತಮೋಽಧ್ಯಾಯಃ**

---

೫. ಧೂಳು, ಪ್ರಾಣಿಗಳು ಮತ್ತು ಕಲ್ಲುಗಳು ಸುರಿದರೆ ರೋಗಭೀತಿಯುಂಟಾಗುವುದು. ಅನ್ನದ ಮಳೆಯಾದರೆ ದೇಶದಲ್ಲಿ ಛಿದ್ರಗಳು ಹುಟ್ಟುವುವು. ಸಸ್ಯಗಳಿಗೆ ಬಾಧೆ ಹೆಚ್ಚಾಗುವುದು.

೬. ಧೂಳೇಳದೆ ಮೋಡಗಳಿಲ್ಲದೆ ಸೂರ್ಯನು ಪ್ರಕಾಶಿಸುತ್ತಿರುವಾಗ ನೆರಳು ಕಾಣದೆ ಹೋದರೂ, ತಲೆಕೆಳಕಾಗಿ ಕಂಡರೂ ದೇಶಕ್ಕೆ ಭಯವುಂಟಾಗುವುದು.

೭-೮. ಮೋಡಗಳಿಲ್ಲದ ವೇಳೆಯಲ್ಲಿ ಅಥವಾ ರಾತ್ರಿಯ ಹೊತ್ತಿನಲ್ಲಿ ದಕ್ಷಿಣ ದಿಕ್ಕಿನ ಮೇಲ್ಗಡೆಯಲ್ಲಿ ಕಾಮನಬಿಲ್ಲು, ಉಲ್ಕಾಪಾತ, ದಿಕ್ಕಿನ ಉರಿ, ಪರಿವೇಷ, ಚಿತ್ರವಿಚಿತ್ರವಾಗಿ ಕಂಗೊಳಿಸುವ ಪಟ್ಟಣ ಇವು ಗೋಚರವಾದರೆ ಶತ್ರುಸೈನ್ಯದ ಭಯವೂ ದೇಶೋಪದ್ರವವೂ ಉಂಟಾಗುವುವೆಂದು ಹೇಳಬೇಕು.

೯. ಮುನಿವರ್ಯಾ, ಈ ಪಾಪಪರಿಹಾರಕ್ಕೋಸ್ಕರ ಸೂರ್ಯ, ಚಂದ್ರ, ಇಂದ್ರ ಮತ್ತು ವಾಯುಗಳನ್ನುದ್ದೇಶಿಸಿ ಯಾಗವನ್ನು ಮಾಡಬೇಕು. ಬ್ರಾಹ್ಮಣರಿಗೆ ಹಸು, ಚಿನ್ನ ಮತ್ತು ದಕ್ಷಿಣೆಗಳನ್ನು ಕೊಡಬೇಕು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಅತಿವೃಷ್ಟಿ ಅನಾವೃಷ್ಟಿ ಮೊದಲಾದ ಉತ್ಪಾತಗಳ ಲಕ್ಷಣವನ್ನೂ ಅವುಗಳ ಶಾಂತಿಯನ್ನೂ ಹೇಳಿದೆ.

ಅತಿವೃಷ್ಟಿ, ಅನಾವೃಷ್ಟಿ, ಇವೆರಡರಿಂದಲೂ ದುರ್ಭಿಕ್ಷ ಬರುತ್ತದೆ. ಆಕಾಶದಿಂದ ರಕ್ತ, ಧೂಳಿ, ಮಾಂಸ ಇವುಗಳ ಮಳೆಯಾದರೆ ದೇಶಕ್ಕೆ ಹಾನಿಯಾಗುತ್ತದೆ. ಇಂತಹ ಅನಿಷ್ಟಸೂಚಕವಾದ ಲಕ್ಷಣಗಳು ಇನ್ನೂ ಎಷ್ಟೋ ಇವೆ. ಈ ದೋಷ ಪರಿಹಾರಕ್ಕಾಗಿ ಶಾಸ್ತ್ರೋಕ್ತವಾದ ಶಾಂತಿಯನ್ನು ನಡೆಸಬೇಕು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಅದ್ಭುತಶಾಂತಿಯಲ್ಲಿ ವೃಷ್ಟಿವೈಕೃತಿಪ್ರಶಮನವೆಂಬ ಇನ್ನೂರಮೂವತ್ತಮೂರನೆಯ ಅಧ್ಯಾಯವು ಮುಗಿದುದು



## ಅಥ ಚತುಸ್ತ್ರಿಂಶದಧಿಕದ್ವಿಶತತಮೋಽಧ್ಯಾಯಃ

॥ ಗರ್ಗ ಉವಾಚ ॥

ನಗರಾದಪಸರ್ಪಂತೇ ಸಮೀಪಮುಪಯಾಂತಿ ಚ ।
ನದ್ಯೋ ಹ್ರದಪ್ರಸ್ರವಾಣಿ ವಿರಸಾಶ್ಚ ಭವಂತಿ ಚ ॥ ೧ ॥

ವಿವರ್ಣಂ ಕಲುಷಂ ತಪ್ತಂ ಫೇನವಜ್ಜಂತುಸಂಕುಲಂ ।
ಸ್ನೇಹಂ ಕ್ಷೀರಂ ಸುರಾಂ ರಕ್ತಂ ವಹಂತೇ ವಾಽಽಕುಲೋದಕಾಃ ॥ ೨ ॥

ಷಣ್ಮಾಸಾಭ್ಯಂತರೇ ತತ್ರ ಪರಚಕ್ರಭಯಂ ಭವೇತ್ ।
ಜಲಾಶಯಾ ನದಂತೇ ವಾ ಪ್ರಜ್ವಲಂತಿ ಕಥಂಚನ ॥ ೩ ॥

ವಿಮುಂಚಂತಿ ತಥಾ ಬಹ್ವೀರ್ಜ್ವಾಲಾಧೂಮರಜಾಂಸಿ ಚ ।
ಅಖಾತೇ ವಾ ಜಲೋತ್ಪತ್ತಿಃ ಸುಸತ್ತ್ವಾ ವಾ ಜಲಾಶಯಾಃ ॥ ೪ ॥

---

೧. ಗರ್ಗಮುನಿ ಹೇಳಿದನು.—ಅನಿಷ್ಟಸೂಚಕವಾಗಿ ನದಿಗಳು, ಮಡುಗಳು ಮತ್ತು ತೊರೆಗಳು ಪಟ್ಟಣದಿಂದ ದೂರಕ್ಕೆ ಸರಿಯುತ್ತವೆ; ಮತ್ತು ತೊರೆಗಳು ಹತ್ತಿರಕ್ಕೂ ಬರುತ್ತವೆ. ಅವುಗಳ ನೀರು ರುಚಿಗೆಡುತ್ತದೆ.

೨. ಅಷ್ಟೇ ಅಲ್ಲ; ಅದು ಬಣ್ಣಗೆಡುತ್ತದೆ, ಬಗ್ಗಡವಾಗುತ್ತದೆ, ಸುಡುತ್ತದೆ. ನೊರೆಯಿಂದಲೂ ಜಂತುಗಳಿಂದಲೂ ತುಂಬಿರುತ್ತದೆ. ಎಣ್ಣೆ, ಹಾಲು, ಮದ್ಯ, ರಕ್ತ ಇವು ಮೇಲೆ ತೇಲುತ್ತವೆ.

೩. ಕೆರೆಕಟ್ಟೆಗಳು ಧ್ವನಿಮಾಡುತ್ತವೆ, ಉರಿಯುತ್ತವೆ. ಇಂತಹ ಲಕ್ಷಣಗಳು ಕಂಡರೆ ಆರು ತಿಂಗಳೊಳಗೆ ಆ ದೇಶದಲ್ಲಿ ಶತ್ರುಸೈನ್ಯದಿಂದ ಭಯವೊದಗುವುದು.

೪. ಎಲೈ ಮಹರ್ಷೀ, ಜಲಾಶಯಗಳಿಂದ ಉರಿಯೂ, ಹೊಗೆಯೂ, ಏಳುವುವು. ಜಲಜಂತುಗಳು ಬಹಳವಾಗುವುವು. ಅಗೆಯದೆ ತಾನಾಗಿಯೇ ನೆಲದಲ್ಲಿ ನೀರು ಬರುವುದು.

ಸಂಗೀತಶಬ್ದಾಃ ಶ್ರೂಯಂತೇ ಜನಮಾರಭಯಂ ಭವೇತ್ ।
ದಿವ್ಯಮಂಭೋಮಯಂ ಸರ್ಪಿರ್ಮಧುತೈಲಾವಸೇಚನಮ್ || ೫ ||
ಜಪ್ತ್ವಾ ವಾರುಣಾ ಮಂತ್ರಾಸ್ತೈಶ್ಚ ಹೋಮೋ ಜಲೇ ಭವೇತ್ || ೬ ||
ಮಧ್ವಾಜ್ಯಯುಕ್ತಂ ಪರಮಾನ್ನಮತ್ರ
ದೇಯಂ ದ್ವಿಜಾನಾಂ ದ್ವಿಜಭೋಜನಾರ್ಥಂ ।
ಗಾವಶ್ಚ ದೇಯಾಃ ಸಿತವಸ್ತ್ರಯುಕ್ತಾ
ಸ್ತಥೋದಕುಂಭಾಃ ಸಲಿಲಾಘಶಾಂತ್ಯೈ || ೭ ||

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇಽದ್ಭುತಶಾಂತೌ ಸಲಿಲಾಶಯವೈಕೃತಂ
ನಾಮ ಚತುಸ್ತ್ರಿಂಶದಧಿಕದ್ವಿಶತತಮೋಽಧ್ಯಾಯಃ

---

೫-೬. ಸಂಗೀತಧ್ವನಿಗಳು ಕೇಳಬರುತ್ತವೆ. ನೀರು, ತುಪ್ಪ, ಜೇನು ಮತ್ತು ಎಣ್ಣೆಗಳು ಅಂತರಿಕ್ಷದಿಂದ ತೊಟ್ಟಿಕ್ಕುತ್ತವೆ. ಇದರಿಂದ ಪ್ರಜೆಗಳಿಗೆ ಕೊಲೆಯ ಭೀತಿಯುಂಟಾಗುವುದು. ಇದರ ಪರಿಹಾರಕ್ಕಾಗಿ ವರುಣಮಂತ್ರಗಳನ್ನು ಜಪಿಸಿ ನೀರಿನಲ್ಲಿ ಅದೇ ಮಂತ್ರಗಳಿಂದ ಹೋಮವನ್ನು ಮಾಡಬೇಕು.

೭. ಎಲ್ಲೈ ಬ್ರಾಹ್ಮಣೋತ್ತಮಾ, ಜೇನುತುಪ್ಪವೂ ತುಪ್ಪವೂ ಬೆರೆತ ಪರಮಾನ್ನದಿಂದ ಬ್ರಾಹ್ಮಣರಿಗೆ ಭೋಜನಮಾಡಿಸಬೇಕು. ಈ ಉತ್ಪಾತದೋಷದ ಪರಿಹಾರಾರ್ಥವಾಗಿ ಶುಭ್ರವಸ್ತ್ರಗಳನ್ನು ಹೊದಿಸಿದ ಹಸುಗಳನ್ನೂ, ಜಲಕುಂಭಗಳನ್ನೂ ದಾನವಾಗಿ ಕೊಡಬೇಕು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಜಲೋತ್ಪಾತಲಕ್ಷಣವನ್ನು ಹೇಳಿದೆ.

ಜಲಾಶಯಗಳಲ್ಲಿ ಉತ್ಪಾತವು ಗೋಚರಿಸಿದರೆ ದೇಶದಲ್ಲಿ ಶತ್ರು ಸೈನ್ಯದ ಭಯವೂ, ಪ್ರಜಾಸಂಹಾರವೂ ಸಂಭವಿಸುವುವು. ಆ ದೋಷದ ಪರಿಹಾರಕ್ಕಾಗಿ ವರುಣ ಮಂತ್ರಗಳಿಂದ ಜಪವನ್ನೂ ಹೋಮವನ್ನೂ ಮಾಡಿ, ಬ್ರಾಹ್ಮಣರನ್ನು ಭೋಜನದಿಂದಲೂ ದಾನಗಳಿಂದಲೂ ತೃಪ್ತಿಪಡಿಸಬೇಕು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಅದ್ಭುತಶಾಂತಿಯಲ್ಲಿ ಸಲಿಲಾಶಯ
ವೈಕೃತ್ಯವೆಂಬ ಇನ್ನೂರ ಮೂವತ್ತನಾಲ್ಕನೆಯ ಅಧ್ಯಾಯವು ಮುಗಿದುದು

## ಅಥ ಪಂಚತ್ರಿಂಶದಧಿಕದ್ವಿಶತತಮೋಽಧ್ಯಾಯಃ

॥ ಗರ್ಗ ಉವಾಚ ॥

ಅಕಾಲಪ್ರಸವಾ ನಾರ್ಯಃ ಕಾಲಾತೀತಪ್ರಜಾಸ್ತಥಾ ।
ವಿಕೃತಪ್ರಸವಾಶ್ಚೈವ ಯುಗ್ಮಸಂಪ್ರಸವಾಸ್ತಥಾ ॥ ೧ ॥

ಅಮಾನುಷಾ ಹ್ಯತುಂಡಾಶ್ಚ ಸಂಜಾತವ್ಯಸನಾಸ್ತಥಾ ।
ಹೀನಾಂಗಾ ಅಧಿಕಾಂಗಾಶ್ಚ ಜಾಯಂತೇ ಯದಿ ವಾ ಸ್ತ್ರಿಯಃ ॥ ೨ ॥

ಪಶವಃ ಪಕ್ಷಿಣಶ್ಚೈವ ತಥೈವ ಚ ಸರೀಸೃಪಾಃ ।
ವಿನಾಶಂ ತಸ್ಯ ದೇಶಸ್ಯ ಕುಲಸ್ಯ ಚ ವಿನಿರ್ದಿಶೇತ್ ॥ ೩ ॥

ವಿವಾಸಯೇತ್ತಾನ್ನೃಪತಿಃ ಸ್ವರಾಷ್ಟ್ರಾತ್
ಸ್ತ್ರಿಯಶ್ಚ ಪೂಜ್ಯಾಶ್ಚ ತತೋ ದ್ವಿಜೇಂದ್ರಾಃ ।
ಕಾಮೈಶ್ಚ ಕೈರ್ಬ್ರಾಹ್ಮಣತರ್ಪಣೈಶ್ಚ
ಲೋಕೇ ತತಃ ಶಾಂತಿಮುಪೈತಿ ಪಾಪಂ ॥ ೪ ॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇಽದ್ಭುತಶಾಂತೌ ಸ್ತ್ರೀಪ್ರಸವವೈಕೃತ್ಯಂ ನಾಮ ಪಂಚತ್ರಿಂಶದಧಿಕದ್ವಿಶತತಮೋಽಧ್ಯಾಯಃ

---

೧-೩. ಗರ್ಗಮುನಿ ಹೇಳಿದನು.—ಒಂದು ದೇಶದಲ್ಲಿ ಹೆಂಗಸರು ಕಾಲಕ್ಕೆ ಮುಂಚೆ ಅಥವಾ ಬಹಳ ತಡವಾಗಿ ಪ್ರಸವಿಸಬಹುದು. ಹುಟ್ಟಿದ ಮಕ್ಕಳು ವಿಕಾರವಾಗಿಯೋ, ಅವಳಿಯಾಗಿಯೋ, ಮನುಷ್ಯರಲ್ಲದೆಯೋ, ಬಾಯಿಲ್ಲದೆಯೋ, ಕಷ್ಟಕ್ಕೆ ಸಿಕ್ಕಿಯೋ ಇರಬಹುದು. ಅವುಗಳ ಅಂಗಗಳು ಹೀನವಾಗಿಯೋ ಅಧಿಕವಾಗಿಯೋ ಇರಬಹುದು. ಪಶು, ಪಕ್ಷಿ ಮತ್ತು ಹಾವುಗಳ ರೂಪದಿಂದಿರಬಹುದು. ಇದರಿಂದ ಆ ದೇಶಕ್ಕೂ ಕುಲಕ್ಕೂ ವಿನಾಶವೊದಗುವುದೆಂದು ತಿಳಿಯಬೇಕು.

೪. ರಾಜನು ಆ ಮಕ್ಕಳನ್ನೂ ಸ್ತ್ರೀಯರನ್ನೂ ತನ್ನ ರಾಷ್ಟ್ರದಿಂದ ಹೊರಕ್ಕೆ ಕಳುಹಿಸಬೇಕು. ತರುವಾಯ ಅಪೇಕ್ಷೆಪಟ್ಟುದೆಲ್ಲವನ್ನೂ ಕೊಟ್ಟು ಬ್ರಾಹ್ಮಣರನ್ನು ತೃಪ್ತಿಪಡಿಸಬೇಕು. ಆದರಿಂದ ಆ ದೋಷವು ಶಾಂತವಾಗುವುದು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಸ್ತ್ರೀಪ್ರಸವದ ವಿಕಾರಗಳು ವರ್ಣಿತವಾಗಿವೆ.

ಸ್ತ್ರೀಯರು ಕಾಲಕ್ಕೆ ಮುಂಚೆಯೋ ಅಥವಾ ಕಾಲಕಳೆದ ಮೇಲೆಯೋ ಪ್ರಸವಿಸಿದರೂ, ಹುಟ್ಟುವ ಮಕ್ಕಳು ಸಹಜವಾದ ಸ್ಥಿತಿಯಲ್ಲಿಲ್ಲದಿದ್ದರೂ ದೇಶಕ್ಕೆ ಕೇಡುಂಟಾಗುವುದು. ರಾಜನು ಅಂತಹ ಸ್ತ್ರೀಯರನ್ನು ಮಕ್ಕಳೊಡನೆ ರಾಷ್ಟ್ರದಿಂದ ಹೊರಡಿಸಬೇಕು. ಉತ್ಪಾತದೋಷದ ಪರಿಹಾರಕ್ಕಾಗಿ ಬ್ರಾಹ್ಮಣರನ್ನು ಪೂಜಿಸಿ ಸತ್ಕರಿಸಬೇಕು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಅದ್ಭುತಶಾಂತಿಯಲ್ಲಿ ಸ್ತ್ರೀಪ್ರಸವ
ವೈಕೃತ್ಯವೆಂಬ ಇನ್ನೂರ ಮೂವತ್ತ್ಮೂರನೆಯ ಅಧ್ಯಾಯವು ಮುಗಿದುದು

---

## ಅಥ ಷಟ್ತ್ರಿಂಶದಧಿಕದ್ವಿಶತತಮೋಽಧ್ಯಾಯಃ

|| ಗರ್ಗ ಉವಾಚ ||

ಯಾಂತಿ ಯಾನಾನ್ಯಯುಕ್ತಾನಿ ಯುಕ್ತಾನ್ಯಪಿ ನ ಯಾಂತಿ ಚ |
ಚೋದ್ಯಮಾನಾನಿ ತತ್ರ ಸ್ಯಾನ್ಮಹದ್ಭಯಮುಪಸ್ಥಿತಂ || ೧ ||

ವಾದ್ಯಮಾನಾ ನ ವಾದ್ಯಂತೇ ವಾದ್ಯಂತೇ ಚಾಪ್ಯನಾಹತಾಃ |
ಅಚಲಾಶ್ಚ ಚಲಂತ್ಯೇವ ನ ಚಲಂತಿ ಚಲಾನಿ ಚ || ೨ ||

ಆಕಾಶೇ ತೂರ್ಯನಾದಾಶ್ಚ ಗೀತಗಂಧರ್ವನಿಸ್ವನಾಃ |
ಕಾಷ್ಠದರ್ವೀಕುಠಾರಾದಿವಿಕಾರಂ ಕುರುತೇ ಯದಿ || ೩ ||

ಗಾವೋ ಲಾಂಗೂಲಸಂಸ್ಪೃಶ್ಚ ಸ್ತ್ರಿಯಃ ಸ್ತ್ರೀ ಚ ವಿಘಾತಯೇತ್ |
ಉಪಸ್ಕಾರಾದಿವಿಕೃತೌ ಘೋರಂ ಶಸ್ತ್ರಭಯಂ ಭವೇತ್ || ೪ ||

---

೧. ಗರ್ಗಮುನಿ ಹೇಳಿದನು.—ಎತ್ತು ಮತ್ತು ಕುದುರೆಗಳನ್ನು ಹೂಡದಿದ್ದರೂ ಗಾಡಿಗಳು ಚಲಿಸುತ್ತವೆ. ಅವುಗಳನ್ನು ಹೂಡಿ ಕಟ್ಟಿದರೂ ಚಲಿಸುವುದಿಲ್ಲ. ಅಂತಹ ಸಂದರ್ಭಗಳಲ್ಲಿ ದೇಶಕ್ಕೆ ದೊಡ್ಡ ಭಯವು ಒದಗುವುದೆಂದು ತಿಳಿಯಬೇಕು.

೨. ಬಾಜಿಸಿದರೆ ವಾದ್ಯಗಳು ಧ್ವನಿಮಾಡುವುದಿಲ್ಲ. ಬಾಜಿಸದಿದ್ದಾಗ ಧ್ವನಿಮಾಡುತ್ತವೆ. ಸ್ಥಿರವಾದ ವಸ್ತುಗಳು ಚಲಿಸುತ್ತವೆ. ಚಲಿಸಬೇಕಾದುವು ಅಲುಗಾಡದೆ ನಿಲ್ಲುತ್ತವೆ.

೩-೪. ಆಕಾಶದಲ್ಲಿ ಮಂಗಳವಾದ್ಯಗಳ ಮತ್ತು ಗಂಧರ್ವರ ಮಧುರಗಾನದ ಧ್ವನಿ ಕೇಳಿಸುವುದು. ಸೌದೆ, ಸೌಟು, ಕೊಡಲಿ ಮುಂತಾದುವು ಅಲುಗಾಡುವುದು, ಧ್ವನಿಮಾಡುವುದು ಮುಂತಾದ ವಿಕಾರವನ್ನು ತಳೆಯುವುವು. ಹಸುಗಳು ಬಾಲಗಳಿಂದ ಹೊಡೆಯುವುವು. ಹೆಂಗಸರು ಹೆಂಗಸರನ್ನು ಪ್ರಹರಿಸುವರು. ಹಿಂಗು, ಸಾಸುವೆ ಮುಂತಾದ ವಸ್ತುಗಳು ರುಚಿಯಲ್ಲೂ ವಾಸನೆಯಲ್ಲೂ ವ್ಯತ್ಯಾಸವಾಗುವುವು. ಈ ಸೂಚನೆಗಳಿಂದ ಘೋರವಾದ ಶಸ್ತ್ರಭಯವು ದೇಶಕ್ಕೆ ಒದಗುವುದೆಂದು ತಿಳಿಯಬೇಕು.

ವಾಯೋಸ್ತು ಪೂಜಾಂ ದ್ವಿಜ ಸಕ್ತುಭಿಶ್ಚ
  ಕೃತ್ವಾ ನಿಯುಕ್ತಾಂಶ್ಚ ಜಪೇಚ್ಚ ಮಂತ್ರಾನ್ ।
ದದ್ಯಾತ್ಪ್ರಭೂತಂ ಪರಮಾನ್ನಮತ್ರ
  ಸದಕ್ಷಿಣಂ ತೇನ ಶಮೋಽಸ್ಯ ಭೂಯಾತ್ ॥ ೫ ॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇಽದ್ಭುತಶಾಂತಾವುಪಸ್ಕರವೈಕೃತ್ಯಂ
ನಾಮ ಷಟ್ತ್ರಿಂಶದಧಿಕದ್ವಿಶತತಮೋಽಧ್ಯಾಯಃ

---

೫. ಓ ಮುನಿವರ್ಯಾ, ವಾಯುದೇವನನ್ನು ಪೂಜಿಸಿ, ಹುರಿಹಿಟ್ಟನ್ನು ನಿವೇದನಮಾಡಿ, ವಾಯುಮಂತ್ರಗಳನ್ನು ಜಪಿಸಬೇಕು. ಬ್ರಾಹ್ಮಣರಿಗೆ ತೃಪ್ತಿಯಾಗುವಂತೆ ಪರಮಾನ್ನವನ್ನು ಬಡಿಸಿ ದಕ್ಷಿಣೆಯನ್ನು ಕೊಡಬೇಕು. ಅದರಿಂದ ಈ ಉತ್ಪಾತದ ದೋಷವು ಪರಿಹಾರವಾಗುವುದು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಇತರ ವಿಧವಾದ ಉತ್ಪಾತಗಳನ್ನು ಹೇಳಿದೆ.

ರಥಗಳು, ವಾದ್ಯಗಳು, ಸೌಟು, ಕೊಡಲಿ ಮುಂತಾದ ಉಪಕರಣಗಳು ತಮ್ಮ ಸಹಜಸ್ಥಿತಿಯನ್ನು ಬಿಟ್ಟು ವೈಕೃತಿಯನ್ನು ತಾಳುವುದುಂಟು. ಈ ಉತ್ಪಾತದ ದೋಷಪರಿಹಾರಕ್ಕಾಗಿ ವಾಯುದೇವನನ್ನು ಪೂಜಿಸಬೇಕು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಅದ್ಭುತಶಾಂತಿಯಲ್ಲಿ ಉಪಸ್ಕರ
ವೈಕೃತವೆಂಬ ಇನ್ನೂರಮೂವತ್ತಾರನೆಯ ಅಧ್ಯಾಯವು ಮುಗಿದುದು

## ಅಥ ಸಪ್ತತ್ರಿಂಶದಧಿಕದ್ವಿಶತತಮೋಽಧ್ಯಾಯಃ

|| ಗರ್ಗ ಉವಾಚ ||

ಪ್ರವಿಶಂತಿ ಯದಾ ಗ್ರಾಮಮಾರಣ್ಯಾ ಮೃಗಪಕ್ಷಿಣಃ ।
ಅರಣ್ಯಂ ಯಾಂತಿ ವಾ ಗ್ರಾಮ್ಯಾಃ ಸ್ಥಲಂ ಯಾಂತಿ ಜಲೋದ್ಭವಾಃ || ೧ ||

ಸ್ಥಲಜಾಶ್ಚ ಜಲಂ ಯಾಂತಿ ಘೋರಂ ವಾಶಂತಿ ನಿರ್ಭಯಾಃ ।
ರಾಜದ್ವಾರೇ ಪುರದ್ವಾರೇ ಶಿವಾ ಚಾಪ್ಯಶಿವಪ್ರದಾ || ೨ ||

ದಿವಾ ರಾತ್ರಿಂಚರಾ ವಾಪಿ ರಾತ್ರಾವಪಿ ದಿವಾಚರಾಃ ।
ಗ್ರಾಮ್ಯಾಸ್ತ್ಯಜಂತಿ ಗ್ರಾಮಂ ಚ ಶೂನ್ಯತಾಂ ತಸ್ಯ ನಿರ್ದಿಶೇತ್ || ೩ ||

ದೀಪ್ತಾ ವಾಶಂತಿ ಸಂಧ್ಯಾಸು ಮಂಡಲಾನಿ ಚ ಕುರ್ವತೇ ।
ವಾಶಂತಿ ವಿಸ್ವರಂ ಯತ್ರ ತದಾಪ್ಯೇತತ್ಫಲಂ ಲಭೇತ್ || ೪ ||

---

೧-೩. ಗರ್ಗಮುನಿ ಹೇಳಿದನು.—ಅರಣ್ಯದ ಮೃಗಪಕ್ಷಿಗಳು ಊರೊಳಗೆ ನುಗ್ಗುವುವು. ಊರಿನವು ಕಾಡಿಗೆ ಹೋಗುವುವು. ನೀರಿನ ಜಂತುಗಳು ನೆಲಕ್ಕೂ ನೆಲದ ಪ್ರಾಣಿಗಳು ನೀರಿಗೂ ಪ್ರವೇಶಿಸುವುವು. ಅಷ್ಟೇ ಅಲ್ಲ; ಅವು ಭಯವಿಲ್ಲದೆ ಘೋರವಾಗಿ ಕೂಗುವುವು. ಅರಮನೆಯ ಬಾಗಿಲಲ್ಲೂ ಊರಬಾಗಿಲಲ್ಲೂ ನರಿಯು ಗೋಳಿಡುವುದು. ರಾತ್ರಿಯಲ್ಲಿ ಸಂಚರಿಸುವ ಮೃಗಪಕ್ಷಿಗಳು ಹಗಲಿನಲ್ಲೂ, ಹಗಲಿನಲ್ಲಿ ಸಂಚರಿಸತಕ್ಕುವು ರಾತ್ರಿಯಲ್ಲೂ ಸುಳಿದಾಡುವುವು. ಗ್ರಾಮದ ಜಂತುಗಳು ಗ್ರಾಮವನ್ನು ಬಿಟ್ಟು ಹೋಗುವುವು. ಹೀಗಾದರೆ ಎಲ್ಲವೂ ಶೂನ್ಯವಾಗುವುವೆಂದು ತಿಳಿಯಬೇಕು.

೪. ಸಂಧ್ಯಾಕಾಲಗಳಲ್ಲಿ ಗುಳ್ಳೆನರಿಗಳು ಬಾಯಲ್ಲಿ ಉರಿಗೊಳ್ಳಿ ಉರಿಯುತ್ತಿರಲು, ಗುಂಡಾಗಿ ಗುಂಪುಕಟ್ಟಿಕೊಂಡು ನಿಂತು ಭಯಂಕರವಾಗಿ ಕೂಗುತ್ತವೆ. ಆಗಲೂ ಇದೇ ಫಲವುಂಟಾಗುತ್ತದೆ.

ಪ್ರದೋಷೇ ಕುಕ್ಕುಟೋ ನಾಶೇದ್ಧೇಮಂತೇ ವಾಪಿ ಕೋಕಿಲಃ ।
ಅರ್ಕೋದಯೇಽರ್ಕಾಭಿಮುಖೀ ಶಿವಾ ರೌತಿ ಭಯಂ ವದೇತ್ ॥ ೫ ॥

ಗೃಹಂ ಕಪೋತಃ ಪ್ರವಿಶೇತ್ಕ್ರವ್ಯಾದೋ ಮೂರ್ಧ್ನಿ ಲೀಯತೇ ।
ಮಧು ವಾ ಮಕ್ಷಿಕಾಃ ಕುರ್ಯುರ್ಮೃತ್ಯುರ್ಗೃಹಪತೇರ್ಭವೇತ್ ॥ ೬ ॥

ಪ್ರಾಕಾರದ್ವಾರಗೇಹೇಷು ತೋರಣಾಪಣವೀಥಿಷು ।
ಕೇತುಚ್ಛತ್ರಾಯುಧಾದ್ಯೇಷು ಕ್ರವ್ಯಾದಃ ಪ್ರಪತೇದ್ಯದಿ ॥ ೭ ॥

ಜಾಯಂತೇ ವಾಥ ವಲ್ಮೀಕಾ ಮಧು ವಾ ಸ್ಯಂದತೇ ಯದಿ ।
ಸ ದೇಶೋ ನಾಶಮಾಯಾತಿ ರಾಜಾ ವಾ ಮ್ರಿಯತೇ ತಥಾ ॥ ೮ ॥

---

೫. ಸಂಜೆಯಲ್ಲಿ ಕೋಳಿ ಕೂಗುವುದು ಅಥವಾ ಹೇಮಂತರುತುವಿನಲ್ಲಿ ಕೋಗಿಲೆ ಹಾಡುವುದು, ಸೂರ್ಯನು ಹುಟ್ಟುವಾಗ ಅವನಿಗೆದುರಾಗಿ ನರಿ ಗೋಳಿಡುವುದು, ಈ ಚಿಹ್ನಗಳು ತೋರಿಬಂದರೆ ದೇಶಕ್ಕೆ ಭಯವೆಂದು ಹೇಳಬೇಕು.

೬. ಪಾರಿವಾಳವು ಮನೆಯೊಳಕ್ಕೆ ನುಗ್ಗಿದರೂ, ಹದ್ದು, ಗಿಡಗ ಮುಂತಾದ ಮಾಂಸಾಹಾರಿ ಪಕ್ಷಿಗಳು ಮನೆಯ ಮೇಲ್ಗಡೆ ಮಂಡಲಾಕಾರವಾಗಿ ತಿರುಗಿದರೂ, ಜೇನುಹುಳು ಗೂಡನ್ನು ಕಟ್ಟಿ ಜೇನನ್ನು ತಯಾರಿಸಿದರೂ ಮನೆಯ ಯಜಮಾನನಿಗೆ ಮೃತ್ಯು ಸಂಭವಿಸುವುದು.

೭-೮. ಕೋಟೆಯ ಬಾಗಿಲು, ಮನೆಯ ಹೊರಬಾಗಿಲು, ಪೇಟೆಯ ಬೀದಿ, ಧ್ವಜ, ಛತ್ರ, ಆಯುಧ ಮುಂತಾದುವುಗಳ ಮೇಲೆ ಹದ್ದು ಅಥವಾ ಗಿಡಗನು ಕುಳಿತುಕೊಳ್ಳಲಿ, ಹುತ್ತಗಳು ಹುಟ್ಟಿಕೊಳ್ಳಲಿ, ಜೇನುಗೂಡಿನಿಂದ ಜೇನು ಸೋರುತ್ತಿರಲಿ ಆ ದೇಶವು ನಾಶವಾಗುವುದು; ಇಲ್ಲವೇ ರಾಜನಾದರೂ ಸಾಯುತ್ತಾನೆ.

ಮೂಷಕಾಃ ಶಲಭಾಃ ದೃಷ್ಟ್ವಾ ಪ್ರಭೂತಂ ಕ್ಷುದ್ಭಯಂ ಭವೇತ್ ।
ಕಾಷ್ಠೋಲ್ಮುಕಾಸ್ಥಿಶೃಂಗಾಢ್ಯಾಃ ಶ್ವಾನೋ ಮಾರಕವೇದಕಾಃ ॥ ೯ ॥

ದುರ್ಭಿಕ್ಷವೇದನಾ ಜ್ಞೇಯಾಃ ಕಾಕಾ ಧಾನ್ಯಮುಖಾ ಯದಿ ।
ಜನಾನಭಿಭವಂತೀಹ ನಿರ್ಭಯಾ ರಣವೇದಿನಃ ॥೧೦॥

ಕಾಕೋ ಮೈಥುನಸಕ್ತಶ್ಚ ಶ್ವೇತಸ್ತು ಯದಿ ದೃಶ್ಯತೇ ।
ರಾಜಾ ವಾ ಮ್ರಿಯತೇ ತತ್ರ ಸ ಚ ದೇಶೋ ವಿನಶ್ಯತಿ ॥೧೧॥

ಉಲೂಕೋ ವಾಶತೇ ಯತ್ರ ನೃಪದ್ವಾರೇ ತಥಾ ಗೃಹೇ ।
ಜ್ಞೇಯೋ ಗೃಹಪತೇರ್ಮೃತ್ಯುರ್ಧನನಾಶಸ್ತಥೈವ ಚ ॥೧೨॥

ಮೃಗಪಕ್ಷಿವಿಕಾರೇಷು ಕುರ್ಯಾದ್ಧೋಮಂ ಸದಕ್ಷಿಣಂ ।
ದೇವಾಃ ಕಪೋತಾ ಇತಿ ವಾ ಜಪ್ತವ್ಯಾಃ ಪಂಚಭಿರ್ದ್ವಿಜೈಃ ॥೧೩॥

---

೯. ಇಲಿಗಳೂ ಮಿಡಿತೆಗಳೂ ಪ್ರಬಲವಾದುದನ್ನು ಕಂಡರೆ ದೇಶದಲ್ಲಿ ಹಸಿವಿನ ಬಾಧೆ ಹೆಚ್ಚಾಗುವುದೆಂದು ತಿಳಿಯಬೇಕು ಕಟ್ಟಿಗೆ, ಉರಿಗೊಳ್ಳಿ, ಮೂಳೆ, ಮತ್ತು ಕೊಂಬುಗಳನ್ನು ಕಚ್ಚಿಕೊಂಡು ನಾಯಿಗಳು ಓಡಾಡಿದರೆ ಪ್ರಜೆಗಳಿಗೆ ಮರಣಭಯವೆಂದು ಸೂಚಿತವಾಗುವುದು.

೧೦. ಕಾಗೆಗಳು ಬಾಯಿಯಲ್ಲಿ ಧಾನ್ಯವನ್ನು ಕಚ್ಚಿಕೊಂಡು ಓಡಾಡಿದರೆ ದುರ್ಭಿಕ್ಷ ಬರುವುದೆಂದೂ, ಅವು ಭೀತಿಯಿಲ್ಲದೆ ಜನರನ್ನು ಅಲಕ್ಷ್ಯವಾಗಿ ಕಂಡರೆ ಯುದ್ಧವೊದಗುವುದೆಂದೂ ತಿಳಿಯಬೇಕು.

೧೧. ಬಿಳಿಯಕಾಗೆ ಮೈಥುನಕ್ರಿಯೆಯಲ್ಲಿರುವುದು ಗೋಚರವಾದರೆ ರಾಜನು ಸಾಯುತ್ತಾನೆ; ಅಥವಾ ಆ ದೇಶವು ಹಾಳಾಗುತ್ತದೆ.

೧೨. ಅರಮನೆಯ ಮುಂದೆಯೋ ಬೇರೆ ಮನೆಯ ಮೇಲೆಯೋ ಕುಳಿತು ಗೂಬೆ ಕೂಗಿದರೆ, ಮನೆಯ ಯಜಮಾನನಿಗೆ ಮರಣವೊದಗುವುದೆಂದೂ ಧನವು ನಷ್ಟವಾಗುವುದೆಂದೂ ತಿಳಿಯಬೇಕು.

೧೩. ಹಿಂದೆ ಹೇಳಿದಂತೆ ಮೃಗಗಳೂ ಪಕ್ಷಿಗಳೂ ಅನಿಷ್ಟಸೂಚಕವಾದ ರೀತಿಯಲ್ಲಿ ವರ್ತಿಸಿದರೆ ಹೋಮವನ್ನು ಮಾಡಿ ದಕ್ಷಿಣೆಯನ್ನು ಕೊಡಬೇಕು. ಐವರು ಬ್ರಾಹ್ಮಣರು " ದೇವಾಃ ಕಪೋತಾ " ಎಂಬ ಮಂತ್ರವನ್ನು ಜಪಿಸಬೇಕು.

**ಗಾವಶ್ಚ ದೇಯಾ ವಿಧಿವದ್ದ್ವಿಜೇಭ್ಯಃ**
**ಸಕಾಂಚನಾ ವಸ್ತ್ರಯುಗೋತ್ತರೀಯಾಃ ।**
**ಏವಂ ಕೃತೇ ಶಾಂತಿಮುಪೈತಿ ಪಾಪಂ**
**ಮೃಗೈರ್ದ್ವಿಜೈರ್ವಾ ವಿನಿವೇದಿತಂ ಯತ್ ॥೧೪॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇಽದ್ಭುತಶಾಂತೌ ಮೃಗಪಕ್ಷಿ ವೈಕೃತ್ಯಂ ನಾಮ ಸಪ್ತತ್ರಿಂಶದಧಿಕದ್ವಿಶತತಮೋಽಧ್ಯಾಯಃ**

---

೧೪. ಬ್ರಾಹ್ಮಣರಿಗೆ ಸುವರ್ಣದಾನವನ್ನೂ, ವಸ್ತ್ರಯುಗ್ಮದಾನವನ್ನೂ, ಗೋದಾನವನ್ನೂ ಕೊಡಬೇಕು. ಹೀಗೆ ಮಾಡಿದರೆ ಮೃಗಪಕ್ಷಿಗಳಿಂದ ಸೂಚಿತವಾದ ಅನಿಷ್ಟವು ಪರಿಹಾರವಾಗುವುದು.

### ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಮೃಗಪಕ್ಷಿಗಳಿಂದ ಸೂಚಿತವಾಗುವ ಉತ್ಪಾತಗಳ ಲಕ್ಷಣವನ್ನು ಹೇಳಿದೆ.

ಮೃಗಪಕ್ಷಿಗಳು ತಮ್ಮ ವರ್ತನದಿಂದ ಮುಂದೆ ಒದಗಲಿರುವ ವಿಪತ್ತನ್ನು ಸೂಚಿಸುವುವು. ಊರ ಹೆಬ್ಬಾಗಿಲಲ್ಲಿ ನರಿಗಳು ಗುಂಪುಕೂಡಿ ಗೋಳಿಡುವುದು, ಸಂಜೆಯಲ್ಲಿ ಕೋಳಿ ಕೂಗುವುದು, ಹೇಮಂತಕಾಲದಲ್ಲಿ ಕೋಗಿಲೆ ಹಾಡುವುದು ಇವೆಲ್ಲ ಅಶುಭಸೂಚನೆಗಳು. ಇವುಗಳ ಪರಿಹಾರಕ್ಕಾಗಿ ಜಪಹೋಮಗಳನ್ನು ನಡೆಸಿ ದಾನದಕ್ಷಿಣೆಗಳನ್ನು ಕೊಡಬೇಕು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಅದ್ಭುತಶಾಂತಿಯಲ್ಲಿ ಮೃಗಪಕ್ಷಿ ವೈಕೃತ್ಯವೆಂಬ ಇನ್ನೂರ ಮೂವತ್ತೇಳನೆಯ ಅಧ್ಯಾಯವು ಮುಗಿದುದು

# ಅಥಾಷ್ಟತ್ರಿಂಶದಧಿಕದ್ವಿಶತತಮೋಽಧ್ಯಾಯಃ

|| ಗರ್ಗ ಉವಾಚ ||

ಪ್ರಾಸಾದತೋರಣಾಟ್ಟಾಲದ್ವಾರಪ್ರಾಕಾರವೇಶ್ಮನಾಂ |
ನಿರ್ನಿಮಿತ್ತಂ ತು ಪತನಂ ದೃಢಾನಾಂ ರಾಜಮೃತ್ಯವೇ || ೧ ||

ರಜಸಾವಾಽಥ ಧೂಮೇನ ದಿಶೋ ಯತ್ರ ಸಮಾಕುಲಾಃ |
ಆದಿತ್ಯಚಂದ್ರತಾರಾಶ್ಚ ವಿವರ್ಣಾ ಭಯವೃದ್ಧಯೇ || ೨ ||

ರಾಕ್ಷಸಾ ಯತ್ರ ದೃಶ್ಯಂತೇ ಬ್ರಾಹ್ಮಣಾಶ್ಚ ವಿಧರ್ಮಿಣಃ |
ಋತುವಶ್ಚ ವಿಪರ್ಯಸ್ತಾ ಅಪೂಜ್ಯಃ ಪೂಜ್ಯತೇ ಜನೈಃ || ೩ ||

ನಕ್ಷತ್ರಾಣಿ ವಿಯೋಗೀನಿ ತನ್ಮಹದ್ಭಯಲಕ್ಷಣಂ |
ಕೇತೂದಯೋಪರಾಗೌ ಚ ಛಿದ್ರಂ ವಾ ಶಶಿಸೂರ್ಯಯೋಃ || ೪ ||

---

೧. ಗರ್ಗಮುನಿ ಹೇಳಿದನು.—ದೃಢವಾಗಿರುವ ಅರಮನೆ, ಹೆಬ್ಬಾಗಿಲು, ಅಟ್ಟಳೆ, ಬಾಗಿಲು, ಕೋಟೆ, ಮನೆ ಇವು ಕಾರಣವಿಲ್ಲದೆ ಕುಸಿದುಬಿದ್ದರೆ ಅರಸನಿಗೆ ಮೃತ್ಯುವೆಂದು ತಿಳಿಯಬೇಕು.

೨. ಧೂಳಿನಿಂದ ಅಥವಾ ಹೊಗೆಯಿಂದ ದಿಕ್ಕುಗಳು ತುಂಬುವುದು, ಚಂದ್ರ, ಸೂರ್ಯ ಮತ್ತು ನಕ್ಷತ್ರಗಳು ಕಾಂತಿಹೀನವಾಗುವುದು. ಇವು ಮಹಾ ಭೀತಿಯ ಸೂಚನೆಗಳು.

೩. ರಾಕ್ಷಸರು ಕಣ್ಣಿಗೆ ಕಾಣಿಸಿಕೊಳ್ಳುವುದು, ಬ್ರಾಹ್ಮಣರು ಅನ್ಯಧರ್ಮ ವನ್ನಾಚರಿಸುವುದು, ಋತುಧರ್ಮಗಳಲ್ಲಿ ವ್ಯತ್ಯಾಸವೇರ್ಪಡುವುದು, ಅಪೂಜ್ಯನಿಗೆ ಜನರು ಗೌರವವನ್ನು ಕೊಡುವುದು, ನಕ್ಷತ್ರಗಳು ಅತಿ ವಿರಳವಾಗಿ ಕಾಣಿಸುವುದು ಇವೆಲ್ಲವೂ ಮಹಾಭೀತಿಯ ಲಕ್ಷಣಗಳು.

೪. ಧೂಮಕೇತು ಮೂಡುವುದು, ಚಂದ್ರಸೂರ್ಯರ ಗ್ರಹಣವಾಗುವುದು, ಅವರ ಬಿಂಬದಲ್ಲಿ ರಂಧ್ರವು ಗೋಚರವಾಗುವುದು ಇವೂ ಸಹ ಭಯದ ಸೂಚನೆಗಳೇ.

ಸ್ತ್ರಿಯಶ್ಚ ಕಲಹಾಯಂತೇ ಬಾಲಾ ನಿಘ್ನಂತಿ ಬಾಲಕಾನ್ ॥ ೫ ॥

ಕ್ರಿಯಾಣಾಮುಚಿತಾನಾಂ ಚ ವಿಚ್ಛಿತ್ತಿರ್ಯತ್ರ ಜಾಯತೇ ।
ಹೂಯಮಾನಸ್ತು ಯತ್ರಾಗ್ನಿರ್ದೀಪ್ಯತೇ ನ ಚ ಶಾಂತಿಷು ॥ ೬ ॥

ಪಿಪೀಲಿಕಾಶ್ಚ ಕ್ರವ್ಯಾದಾ ಯಾಂತಿ ಚೋತ್ತರತಸ್ತಥಾ ।
ಪೂರ್ಣಕುಂಭಾಃ ಸ್ರವಂತೇ ಚ ಹವಿರ್ವಾ ವಿಪ್ರಲುಪ್ಯತೇ ॥ ೭ ॥

ಮಂಗಲ್ಯಾಶ್ಚ ಗಿರೋ ಯತ್ರ ನ ಶ್ರೂಯಂತೇ ಸಮಂತತಃ ।
ಕ್ಷವಥುರ್ಬಾಧತೇ ವಾಽಥ ಪ್ರಹಸಂತಿ ನದಂತಿ ಚ ॥ ೮ ॥

ನ ಚ ದೇವೇಷು ವರ್ತಂತೇ ಯಥಾವದ್ಬ್ರಾಹ್ಮಣೇಷು ಚ ।
ಮಂದಘೋಷಾಣಿ ವಾದ್ಯಾನಿ ವಾದ್ಯಂತೇ ವಿಸ್ತರಾಣಿ ಚ ॥ ೯ ॥

ಗುರುಮಿತ್ರದ್ವಿಷೋ ಯತ್ರ ಶತ್ರುಪೂಜಾರತಾ ನರಾಃ ।
ಬ್ರಾಹ್ಮಣಾಃ ಸುಹೃದೋ ಮಾನ್ಯಾಞ್ಜನೋ ಯತ್ರಾವಮನ್ಯತೇ ॥೧೦॥

---

೫-೧೧. ಈ ಮುಂದೆ ಹೇಳುವ ಲಕ್ಷಣಗಳು ಕಾಣಬರುವ ದೇಶದಲ್ಲಿ ಅರಸನು ಸಾಯುತ್ತಾನೆ. ಇಲ್ಲವೇ ಆ ದೇಶವೇ ಹಾಳಾಗುವುದು. ಹೆಂಗಸರು ಕಾದಾಡುತ್ತಾರೆ. ಮಕ್ಕಳು ಒಬ್ಬರನ್ನೊಬ್ಬರು ಹೊಡೆಯುತ್ತಾರೆ. ಉಚಿತವಾದ ಕಾರ್ಯಗಳು ನಿಂತುಹೋಗುತ್ತವೆ. ಶಾಂತಿಕರ್ಮಗಳಲ್ಲಿ ಹೋಮಮಾಡುತ್ತಿರುವಾಗ ಅಗ್ನಿ ಜ್ವಲಿಸುವುದಿಲ್ಲ. ಇರುವೆಗಳೂ ಮಾಂಸಾಹಾರಿಗಳಾದ ಪ್ರಾಣಿಗಳೂ ಉತ್ತರ ದಿಕ್ಕಿನ ಕಡೆಗೆ ಹೋಗುವುವು. ಪೂರ್ಣಕುಂಭಗಳಲ್ಲಿ ನೀರು ಸೋರುತ್ತದೆ. ಹೋಮಕ್ಕಾಗಿ ಇರಿಸಿದ ಹವಿಸ್ಸು ಕಳೆದುಹೋಗುತ್ತದೆ. ಸುತ್ತಲೂ ಮಂಗಲಧ್ವನಿಯಾಗುತ್ತಿದ್ದರೂ ಕಿವಿಗೆ ಕೇಳಿಸುವುದಿಲ್ಲ. ಕೆಮ್ಮಲಿನ ಬಾಧೆ ಹೆಚ್ಚುತ್ತದೆ. ಕಾರಣವಿಲ್ಲದೆ ಜನರು ನಗುತ್ತಾರೆ ಮತ್ತು ಕೂಗುತ್ತಾರೆ. ದೇವಬ್ರಾಹ್ಮಣರಲ್ಲಿ ಉಚಿತರೀತಿಯಿಂದ ನಡೆಯುವುದಿಲ್ಲ. ಕಿವಿಗೆ ಅಷ್ಟೊಂದು ಇಂಪಾಗಿಲ್ಲದ ವಾದ್ಯಗಳನ್ನು ವಿಶೇಷವಾಗಿ ಬಾಜಿಸುತ್ತಾರೆ. ಜನರು ಗುರುಗಳನ್ನೂ ಸ್ನೇಹಿತರನ್ನೂ ದ್ವೇಷಿಸುತ್ತಾರೆ. ಶತ್ರುಪಕ್ಷದವರಿಗೆ ಗೌರವವನ್ನು ಕೊಡುತ್ತಾರೆ. ಬ್ರಾಹ್ಮಣರನ್ನೂ, ಮಿತ್ರರನ್ನೂ, ಪೂಜ್ಯ

**ಶಾಂತಿಮಂಗಲಹೋಮೇಷು ನಾಸ್ತಿಕ್ಯಂ ಯತ್ರ ಜಾಯತೇ ।**
**ರಾಜಾ ವಾ ಮ್ರಿಯತೇ ತತ್ರ ಸ ದೇಶೋ ವಾ ವಿನಶ್ಯತಿ ॥೧೧॥**

**ರಾಜ್ಞೋ ವಿನಾಶೇ ಸಂಪ್ರಾಪ್ತೇ ನಿಮಿತ್ತಾನಿ ನಿಬೋಧ ಮೇ ।**
**ಬ್ರಾಹ್ಮಣಾನ್ ಪ್ರಥಮಂ ದ್ವೇಷ್ಟಿ ಬ್ರಾಹ್ಮಣೈಶ್ಚ ವಿರುಧ್ಯತೇ ॥೧೨॥**

**ಬ್ರಾಹ್ಮಣಸ್ವಾನಿ ಚಾದತ್ತೇ ಬ್ರಾಹ್ಮಣಾಂಶ್ಚ ಜಿಘಾಂಸತಿ ।**
**ನ ಚ ಸ್ಮರತಿ ಕೃತ್ಯೇಷು ಯಾಚಿತಶ್ಚ ಪ್ರಕುಪ್ಯತಿ ॥೧೩॥**

**ರಮತೇ ನಿಂದಯಾ ತೇಷಾಂ ಪ್ರಶಂಸಾಂ ನಾಭಿನಂದತಿ ।**
**ಅಪೂರ್ವಂ ತು ಕರಂ ಲೋಭಾತ್ತಥಾ ಪಾತಯತೇ ಜನೇ ॥೧೪॥**

**ಭೋಜ್ಯಾನಿ ಚೈವ ಕಾರ್ಯಾಣಿ ಸುರಾಣಾಂ ಬಲಯಸ್ತಥಾ ।**
**ಸಂತೋ ವಿಪ್ರಾಶ್ಚ ಪೂಜ್ಯಾಃ ಸ್ಯುಸ್ತೇಭ್ಯೋ ದಾನಂ ಚ ದೀಯತಾಂ ॥೧೫॥**

---

ರನ್ನೂ ತಿರಸ್ಕಾರವಾಗಿ ಕಾಣುತ್ತಾರೆ. ಶಾಂತಿಗಾಗಿಯೂ ಮಂಗಲಕ್ಕಾಗಿಯೂ ಮಾಡಬೇಕಾದ ಹೋಮಗಳ ವಿಷಯದಲ್ಲಿ ನಾಸ್ತಿಕ್ಯಬುದ್ಧಿಯನ್ನು ತೋರಿಸುತ್ತಾರೆ.

೧೨. ರಾಜನಿಗೆ ಕೇಡುಗಾಲ ಬಂದಿದೆಯೆಂಬುದಕ್ಕೆ ಸೂಚನೆಗಳನ್ನು ಹೇಳು ವೆನು ಕೇಳು. ಅವನು ಮೊತ್ತಮೊದಲು ಬ್ರಾಹ್ಮಣರನ್ನು ದ್ವೇಷಿಸುತ್ತಾನೆ. ಅವರ ದ್ವೇಷವನ್ನೂ ಕಟ್ಟಿಕೊಳ್ಳುತ್ತಾನೆ.

೧೩. ಬ್ರಾಹ್ಮಣರ ಸ್ವತ್ತುಗಳನ್ನು ಕಿತ್ತುಕೊಳ್ಳುತ್ತಾನೆ. ಅವರನ್ನು ಹಿಂಸಿಸ ಲಿಚ್ಛಿಸುತ್ತಾನೆ. ತನ್ನ ಕರ್ತವ್ಯಗಳ ಮೇಲೆ ನೆನಪೇ ಇರುವುದಿಲ್ಲ. ಯಾರಾದರೂ ಯಾಚಿಸಿದರೆ ಕೋಪಿಸಿಕೊಳ್ಳುತ್ತಾನೆ.

೧೪. ಅವರ ನಿಂದೆಯಿಂದ ಸಂತೋಷಪಡುತ್ತಾನೆ. ಶ್ಲಾಘನೆಯನ್ನು ಮೆಚ್ಚುವುದಿಲ್ಲ. ದುರಾಸೆಯಿಂದ ಜನರ ಮೇಲೆ ಹೊಸಹೊಸ ತೆರಿಗೆಯನ್ನು ಹೊರಿಸುತ್ತಾನೆ.

೧೫. ಇಂತಹ ಸಂದರ್ಭಗಳಲ್ಲಿ ಪತ್ನೀಸಹಿತನಾದ ದೇವೇಂದ್ರನನ್ನು ಪೂಜಿಸಬೇಕು. ಓ ಬ್ರಾಹ್ಮಣೋತ್ತಮಾ, ದೇವತೆಗಳಿಗೆ ಬಗೆಬಗೆಯ ಭಕ್ಷ್ಯಗಳನ್ನೂ ಬಲಿಗಳನ್ನೂ ಅರ್ಪಿಸಬೇಕು. ಸಾಧುಗಳನ್ನೂ ಬ್ರಾಹ್ಮಣರನ್ನೂ ಪೂಜಿಸಿ ಅವರಿಗೆ ದಾನಗಳನ್ನು ಕೊಡಬೇಕು.

ಗಾವಶ್ಚ ದೇಯಾ ದ್ವಿಜಪುಂಗವೇಭ್ಯೋ
ಭುವಸ್ತಥಾ ಕಾಂಚನಮಂಬರಾಣಿ ।
ಹೋಮಶ್ಚ ಕಾರ್ಯೋಽಮರಪೂಜನಂ ಚ
ಏವಂ ಕೃತೇ ಪಾಪಮುಪೈತಿ ಶಾಂತಿಂ ॥೧೬॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇಽದ್ಭುತಶಾಂತೌ ಉತ್ಪಾತಪ್ರಶಮನಂ ನಾಮಾಷ್ಟತ್ರಿಂಶದಧಿಕದ್ವಿಶತತಮೋಽಧ್ಯಾಯಃ

---

೧೬. ಬ್ರಾಹ್ಮಣೋತ್ತಮರಿಗೆ ಗೋದಾನ, ಭೂದಾನ, ಸುವರ್ಣದಾನ, ವಸ್ತ್ರದಾನಗಳನ್ನು ಮಾಡಬೇಕು. ಹೋಮವನ್ನೂ ದೇವತಾಪೂಜೆಯನ್ನೂ ನಡೆಸಬೇಕು. ಹೀಗೆ ಮಾಡಿದರೆ ಪಾಪವು ಪರಿಹಾರವಾಗುವುದು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಇತರ ಉತ್ಪಾತಗಳ ಶಾಂತಿಕ್ರಮವನ್ನು ಹೇಳಿದೆ.

ದೃಢವಾಗಿದ್ದ ಅರಮನೆ, ಕೋಟೆಕೊತ್ತಲುಗಳು ಇದ್ದಕ್ಕಿದ್ದಂತೆ ಕುಸಿದು ಬೀಳುವುದು, ಚಂದ್ರ ಸೂರ್ಯರ ಮಂಡಲಗಳಲ್ಲಿ ರಂಧ್ರವು ಕಾಣಿಸುವುದು, ಋತು ಧರ್ಮಗಳಲ್ಲಿ ವ್ಯತ್ಯಾಸವಾಗುವುದು ಮುಂತಾದ ಲಕ್ಷಣಗಳು ರಾಜನಿಗೆ ಅನಿಷ್ಟವೊದಗುತ್ತವೆಂದು ಸೂಚಿಸುತ್ತವೆ. ಈ ದೋಷಪರಿಹಾರಕ್ಕಾಗಿ ಹೋಮ, ದೇವತಾಪೂಜೆ, ದಾನ ಮತ್ತು ಜಪಗಳನ್ನು ನಡೆಸಬೇಕು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಅದ್ಭುತಶಾಂತಿಯಲ್ಲಿ ಉತ್ಪಾತಪ್ರಶಮನವೆಂಬ
ಇನ್ನೂರ ಮೂವತ್ತೆಂಟನೆಯ ಅಧ್ಯಾಯವು ಮುಗಿದುದು

## ಅಥೈಕೋನಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಃ

॥ ಮನುರುವಾಚ ॥

ಗ್ರಹಯಜ್ಞಃ ಕಥಂ ಕಾರ್ಯೋ ಲಕ್ಷಹೋಮಃ ಕಥಂ ನೃಪೈಃ ।
ಕೋಟಿಹೋಮೋಽಪಿ ವಾ ದೇವ ಸರ್ವಪಾಪಪ್ರಣಾಶನಃ ॥ ೧ ॥

ಕ್ರಿಯತೇ ವಿಧಿನಾ ಯೇನ ಯದ್ದೃಷ್ಟಂ ಶಾಂತಿಚಿಂತಕೈಃ ।
ತತ್ಸರ್ವಂ ವಿಸ್ತರಾದ್ದೇವ ಕಥಯಸ್ವ ಜನಾರ್ದನ ॥ ೨ ॥

॥ ಮತ್ಸ್ಯ ಉವಾಚ ॥

ಇದಾನೀಂ ಕಥಯಿಷ್ಯಾಮಿ ಪ್ರಸಂಗಾದೇವ ತೇ ನೃಪ ।
ರಾಜ್ಞಾ ಧರ್ಮಪ್ರಸಕ್ತೇನ ಪ್ರಜಾನಾಂ ಚ ಹಿತೇಪ್ಸುನಾ ॥ ೩ ॥

ಗ್ರಹಯಜ್ಞಃ ಸದಾ ಕಾರ್ಯೋ ಲಕ್ಷಹೋಮಸಮನ್ವಿತಃ ।
ನದೀನಾಂ ಸಂಗಮೇ ಚೈವ ಸುರಾಣಾಮಗ್ರತಸ್ತಥಾ ॥ ೪ ॥

---

೧. ಮನುಚಕ್ರವರ್ತಿ ಹೇಳಿದನು.—ದೇವಾ, ಸಕಲಪಾಪಗಳನ್ನೂ ಪರಿಹರಿಸುವ ಗ್ರಹಯಜ್ಞ, ಲಕ್ಷಹೋಮ, ಮತ್ತು ಕೋಟಿಹೋಮಗಳನ್ನು ರಾಜರು ಮಾಡಬೇಕಾದ ವಿಧಾನವೆಂತು ?

೨. ಸ್ವಾಮೀ, ಜನಾರ್ದನಾ, ಇವುಗಳನ್ನು ಯಾವ ವಿಧಿಯಿಂದ ನಡೆಸುತ್ತಾರೆ? ಶಾಂತಿಕರ್ಮವನ್ನು ಬಲ್ಲವರು ಈ ವಿಷಯವಾಗಿ ಹೇಳುವುದೇನು ? ಅದೆಲ್ಲವನ್ನೂ ವಿಸ್ತಾರವಾಗಿ ತಿಳಿಸು.

೩. ಮತ್ಸ್ಯರೂಪನಾದ ಭಗವಂತನು ಹೇಳಿದನು.—ರಾಜಾ, ಪ್ರಸಂಗವಶದಿಂದ ಈಗ ನಿನಗೆ ಹೇಳುತ್ತೇನೆ. ಪ್ರಜಾಹಿತೈಷಿಯೂ ಧರ್ಮನಿರತನೂ ಆದ ರಾಜನು ಲಕ್ಷಹೋಮಸಹಿತವಾದ ಗ್ರಹಯಜ್ಞವನ್ನು ಸದಾ ಮಾಡಬೇಕು.

೪-೫. ನದಿಗಳ ಸಂಗಮಕ್ಷೇತ್ರದಲ್ಲಿ ದೇವತಾಮೂರ್ತಿಗಳ ಎದುರಿಗೆ ಮಟ್ಟವಾದ ಭೂಭಾಗವನ್ನು ನೋಡಿ, ರಾಜನು ಜ್ಯೋತಿಷ್ಯ, ಆಚಾರ್ಯ ಮತ್ತು ಋತ್ವಿಕ್ಕುಗಳೊಡಗೂಡಿ ಭೂಮಿಯನ್ನು ಪರೀಕ್ಷಿಸಬೇಕು.

ಸುಷಮೇ ಭೂಮಿಭಾಗೇ ಚ ದೈವಜ್ಞಾಧಿಷ್ಠಿತೋ ನೃಪಃ ।
ಗುರುಣಾ ಚೈವ ಋತ್ವಿಗ್ಭಿಃ ಸಾರ್ಧಂ ಭೂಮಿಂ ಪರೀಕ್ಷಯೇತ್ ॥ ೫ ॥

ಖನೇತ್ಕುಂಡಂ ಚ ತತ್ರೈವ ಸುಸಮಂ ಹಸ್ತಮಾತ್ರಕಂ ।
ದ್ವಿಗುಣಂ ಲಕ್ಷಹೋಮೇ ತು ಕೋಟಿಹೋಮೇ ಚತುರ್ಗುಣಂ ॥ ೬ ॥

ಯುಗ್ಮಾಸ್ತು ಋತ್ವಿಜಃ ಪ್ರೋಕ್ತಾ ಅಷ್ಟೌ ವೈ ವೇದಪಾರಗಾಃ ।
ಕಂದಮೂಲಫಲಾಹಾರಾ ದಧಿಕ್ಷೀರಾಶಿನೋಽಪಿ ವಾ ॥ ೭ ॥

ವೇದ್ಯಾಂ ನಿಧಾಪಯೇಚ್ಚೈವ ರತ್ನಾನಿ ವಿವಿಧಾನಿ ಚ ।
ಸಿಕತಾಪರಿವೇಷಾಚ್ಚ ತತೋಽಗ್ನಿಂ ಚ ಸಮಿಂಧಯೇತ್ ॥ ೮ ॥

ಗಾಯತ್ರ್ಯಾ ದಶಸಾಹಸ್ರಂ ಮಾನಸ್ತೋಕೇನ ಷಡ್ಗುಣಃ ।
ತ್ರಿಂಶದ್ಗ್ರಹಾದಿಮಂತ್ರೈಶ್ಚ ಚತ್ವಾರೋ ವಿಷ್ಣುದೈವತೈಃ ॥ ೯ ॥

---

೬. ಅಲ್ಲಿ ಚಚ್ಚೌಕವಾದ ಒಂದುಮೊಳ ಆಳದ ಕುಂಡವನ್ನು ಅಗೆಯಬೇಕು. ಅದರ ಉದ್ದ ಅಗಲಗಳು ಲಕ್ಷಹೋಮಕ್ಕೆ ಎರಡುಮೊಳವೂ, ಕೋಟಿಹೋಮಕ್ಕೆ ನಾಲ್ಕು ಮೊಳವೂ ಇರಬೇಕು.

೭. ಋತ್ವಿಜರು ಯುಗ್ಮಸಂಖ್ಯೆಯವರಾಗಿರಬೇಕು. ವೇದಪಾರಂಗತರಾದ ಎಂಟುಜೋಡಿ ಋತ್ವಿಜರನ್ನು ವರಿಸಬೇಕು. ಗೆಡ್ಡೆ, ಗೆಣಸು, ಹಣ್ಣು ಅಥವಾ ಹಾಲು ಮೊಸರು ಇವೇ ಅವರ ಆಹಾರ.

೮. ವೇದಿಕೆಯಲ್ಲಿ ಬಗೆಬಗೆಯ ರತ್ನಗಳನ್ನು ಹರಡಿ, ಮರಳಿನಿಂದ ಸುತ್ತು ಗಟ್ಟಬೇಕು. ತರುವಾಯ ಅಗ್ನಿಯನ್ನು ಪ್ರಜ್ವಲಿಸಬೇಕು.

೯-೧೧. ಗಾಯತ್ರೀ ಮಂತ್ರದಿಂದ ಹತ್ತುಸಾವಿರ ಹೋಮಗಳನ್ನೂ, ಮಾನಸ್ತೋಕೇ ಎಂಬ ಮಂತ್ರದಿಂದ ಆರು ಸಾವಿರ ಹೋಮಗಳನ್ನೂ ಆದಿತ್ಯಾದಿ ನವಗ್ರಹ ಮಂತ್ರಗಳಿಂದ ಮೂವತ್ತುಸಾವಿರ ಹೋಮಗಳನ್ನೂ, ವಿಷ್ಣುದೇವತಾಕವಾದ ಮಂತ್ರಗಳಿಂದ ನಾಲ್ಕುಸಾವಿರ ಹೋಮಗಳನ್ನೂ ಮಾಡಬೇಕು. ಬಳಿಕ

**ಕೂಷ್ಮಾಂಡೈರ್ಜುಹುಯಾತ್ಪಂಚ ಕುಸುಮಾದ್ಯೈಸ್ತು ಷೋಡಶ ।**
**ಹೋತವ್ಯಾ ದಶಸಾಹಸ್ರಂ ಬಾದಿರೈರ್ಜಾತವೇದಸಿ ॥೧೦॥**

**ಶ್ರಿಯೋ ಮಂತ್ರೇಣ ಹೋತವ್ಯಾಃ ಸಹಸ್ರಾಣಿ ಚತುರ್ದಶ ।**
**ಶೇಷಾಃ ಪಂಚಸಹಸ್ರಾಸ್ತು ಹೋತವ್ಯಾಸ್ತ್ವಿಂದ್ರದೈವತೈಃ ॥೧೧॥**

**ಹುತ್ವಾ ಶತಸಹಸ್ರಂ ತು ಪುಣ್ಯಸ್ನಾನಂ ಸಮಾಚರೇತ್ ।**
**ಕುಂಭೈಃ ಷೋಡಶಸಂಖ್ಯೈಶ್ಚ ಸಹಿರಣ್ಯೈಃ ಸುಮಂಗಲೈಃ ॥೧೨॥**

**ಸ್ನಾಪಯೇದ್ಯಜಮಾನಂ ತು ತತಃ ಶಾಂತಿರ್ಭವಿಷ್ಯತಿ ।**
**ಏವಂ ಕೃತೇ ತು ಯತ್ಕಿಂಚಿದ್ಗ್ರಹಪೀಡಾಸಮುದ್ಭವಂ ॥೧೩॥**

**ತತ್ಸರ್ವಂ ನಾಶಮಾಯಾತಿ ದತ್ವಾ ವೈ ದಕ್ಷಿಣಾಂ ನೃಪ ।**
**ತಸ್ಮಾತ್ಸರ್ವಪ್ರಯತ್ನೇನ ಪ್ರಧಾನಾ ದಕ್ಷಿಣಾ ಸ್ಮೃತಾ ॥೧೪॥**

---

ಕೂಷ್ಮಾಂಡ ಮಂತ್ರಗಳಿಂದ ಐದು ಸಾವಿರ, ಕುಸುಮಾದಿ ಮಂತ್ರಗಳಿಂದ ಹದಿನಾರು ಸಾವಿರ, ಬಾದರ ಮಂತ್ರಗಳಿಂದ ಹತ್ತು ಸಾವಿರ ಹೋಮಗಳು ಆಗಬೇಕು. ಶ್ರೀಮಂತ್ರಗಳಿಂದ ಹದಿನಾಲ್ಕು ಸಾವಿರ ಹೋಮಗಳೂ, ಇಂದ್ರ ದೇವತಾಕವಾದ ಮಂತ್ರಗಳಿಂದ ಉಳಿದ ಐದು ಸಾವಿರ ಹೋಮಗಳೂ ನಡೆಯಬೇಕು.

೧೨. ಲಕ್ಷಹೋಮಗಳನ್ನು ಮಾಡಿದ ತರುವಾಯ ಪುಣ್ಯಸ್ನಾನವನ್ನು ಮಾಡಬೇಕು. ಹಿರಣ್ಯಸಹಿತವಾದ ಹದಿನಾರು ಮಂಗಳ ಕುಂಭಗಳ ಉದಕಗಳಿಂದ ಋತ್ವಿಜರು ಯಜಮಾನನಿಗೆ ಸ್ನಾನವನ್ನು ಮಾಡಿಸುವರು. ಅದರಿಂದ ಶಾಂತಿ ಯುಂಟಾಗುವುದು.

೧೩-೧೪. ಓ ರಾಜಾ, ಹೀಗೆ ಮಾಡಿ ದಕ್ಷಿಣೆಯನ್ನು ಕೊಟ್ಟರೆ ಗ್ರಹ ಪೀಡೆಯಿಂದ ಉಂಟಾದ ಯಾವ ಅನಿಷ್ಟವಿದ್ದರೂ ಎಲ್ಲವೂ ಪರಿಹಾರವಾಗುವುದು. ಆದಕಾರಣ ಎಲ್ಲ ಪ್ರಯತ್ನವನ್ನೂ ಮಾಡಿ ದಕ್ಷಿಣೆಯನ್ನು ಕೊಡಬೇಕು. ಅದು ಅತಿ ಮುಖ್ಯವಾದುದು.

ಹಸ್ತ್ಯಶ್ವರಥಯಾನಾನಿ ಭೂಮಿವಸ್ತ್ರಯುಗಾನಿ ಚ ।
ಅನಡುದ್ಗೋಶತಂ ದದ್ಯಾದೃತ್ವಿಜಾಂ ಚೈವ ದಕ್ಷಿಣಾಂ ॥೧೫॥

ಯಥಾವಿಭವಸಾರಂ ತು ವಿತ್ತಶಾಠ್ಯಂ ನ ಕಾರಯೇತ್ ।
ಮಾಸೇ ಪೂರ್ಣೇ ಸಮಾಪ್ತಸ್ತು ಲಕ್ಷಹೋಮೋ ನರಾಧಿಪ ॥೧೬॥

ಲಕ್ಷಹೋಮಸ್ಯ ರಾಜೇಂದ್ರ ವಿಧಾನಂ ಪರಿಕೀರ್ತಿತಂ ।
ಇದಾನೀಂ ಕೋಟಿಹೋಮಸ್ಯ ಶೃಣು ತ್ವಂ ಕಥಯಾಮ್ಯಹಂ ॥೧೭॥

ಗಂಗಾತಟೇಽಥ ಯಮುನಾಸರಸ್ವತ್ಯೋರ್ನರೇಶ್ವರ ।
ನರ್ಮದಾದೇವಿಕಾಯಾಸ್ತು ತಟೇ ಹೋಮೋ ವಿಧೀಯತೇ ॥೧೮॥

ತತ್ರಾಪಿ ಋತ್ವಿಜಃ ಕಾರ್ಯಾ ರವಿನಂದನ ಷೋಡಶ ।
ಸರ್ವಹೋಮೇ ತು ರಾಜರ್ಷೇ ದದ್ಯಾದ್ವಿಪ್ರೇಽಥವಾ ಧನಂ ॥೧೯॥

---

೧೫-೧೬. ಋತ್ವಿಕ್ಕುಗಳಿಗೆ ಆನೆ, ಕುದುರೆ, ರಥ, ಯಾನ, ಭೂಮಿ, ವಸ್ತ್ರ ಯುಗ್ಮ, ಎತ್ತು ಮತ್ತು ನೂರು ಹಸುಗಳನ್ನೂ, ದಕ್ಷಿಣೆಯನ್ನೂ ತನ್ನ ಐಶ್ವರಕ್ಕೆ ಅನುಸಾರವಾಗಿ ಕೊಡಬೇಕು. ಜಿಪುಣತನವನ್ನು ಮಾಡಬಾರದು. ರಾಜಾ, ಲಕ್ಷಹೋಮವು ಸಮಾಪ್ತವಾಗಬೇಕಾದರೆ ಪೂರ್ಣವಾಗಿ ಒಂದು ತಿಂಗಳು ಬೇಕಾಗುವುದು.

೧೭. ರಾಜೇಂದ್ರಾ, ಲಕ್ಷಹೋಮದ ವಿಧಾನವನ್ನು ತಿಳಿದುದಾಯಿತು. ಈಗ ಕೋಟಿಹೋಮದ ವಿಧಿಯನ್ನು ಹೇಳುವೆನು ಕೇಳು.

೧೮. ಓ ರಾಜಾ, ಗಂಗೆ, ಯಮುನೆ, ಸರಸ್ವತಿ, ನರ್ಮದೆ ಅಥವಾ ದೇವಿಕೆ ಈ ನದಿಗಳ ದಡದಲ್ಲಿ ಕೋಟಿಹೋಮವನ್ನು ನಡೆಸಬೇಕು.

೧೯. ಸೂರ್ಯ ಪುತ್ರನಾದ ಎಲೈ ಮನುಚಕ್ರವರ್ತೀ, ಅದಕ್ಕೂ ಕೂಡ ಹದಿನಾರು ಮಂದಿ ಋತ್ವಿಕ್ಕುಗಳನ್ನು ವರಿಸಬೇಕು. ಎಲ್ಲ ಹೋಮಕಾರ್ಯದಲ್ಲಿಯೂ ಬ್ರಾಹ್ಮಣರಿಗೆ ದಾನದಕ್ಷಿಣೆಗಳನ್ನು ಕೊಡಬೇಕು.

ಋತ್ವಿಗಾಚಾರ್ಯಸಹಿತೋ ದೀಕ್ಷಾಂ ಸಾಂವತ್ಸರೀಂ ಸ್ಥಿತಃ ।
ಚೈತ್ರೇ ಮಾಸೇ ತು ಸಂಪ್ರಾಪ್ತೇ ಕಾರ್ತಿಕೇ ವಾ ವಿಶೇಷತಃ ॥೨೦॥

ಪ್ರಾರಂಭಃ ಕರಣೀಯೋ ವಾ ವತ್ಸರಂ ವತ್ಸರಂ ನೃಪ ।
ಯಜಮಾನಃ ಪಯೋಭಕ್ಷೀ ಫಲಾಶೀ ಚ ತಥಾऽನಘ ॥೨೧॥

ಯವಾದಿವ್ರೀಹಯೋ ಮಾಷಾಸ್ತಿಲಾಶ್ಚ ಸಹ ಸರ್ಷಪೈಃ ।
ಪಾಲಾಶಾಃ ಸಮಿಧಃ ಶಸ್ತಾ ವಸೋರ್ಧಾರಾ ತಥೋಪರಿ ॥೨೨॥

ಮಾಸೇऽಥ ಪ್ರಥಮೇ ದದ್ಯಾದೃತ್ವಿಗ್ಭ್ಯಃ ಕ್ಷೀರಭೋಜನಂ ।
ದ್ವಿತೀಯೇ ಕೃಸರಾಂ ದದ್ಯಾದ್ಧರ್ಮಕಾಮಾರ್ಥಸಾಧನೀಂ ॥೨೩॥

ತೃತೀಯೇ ಮಾಸಿ ಸಂಯಾವೋ ದೇಯೋ ವೈ ರವಿನಂದನ ।
ಚತುರ್ಥೇ ಮೋದಕಾ ದೇಯಾ ವಿಪ್ರಾಣಾಂ ಪ್ರೀತಿಮಾವಹ ॥೨೪॥

---

೨೦. ಋತ್ವಿಕ್ಕುಗಳ ಮತ್ತು ಆಚಾರ್ಯನ ಸಹಿತವಾಗಿ ಒಂದು ವರ್ಷಕಾಲದ ದೀಕ್ಷೆಯನ್ನು ತಾಳಬೇಕು. ಪ್ರತಿವರ್ಷದಲ್ಲೂ ಚೈತ್ರಮಾಸದಲ್ಲಿ ಅಥವಾ ಮುಖ್ಯವಾಗಿ ಕಾರ್ತಿಕದಲ್ಲಿ ಪ್ರಾರಂಭಮಾಡಬೇಕು.

೨೧-೨೨. ಯಜಮಾನನು ಹಾಲು ಹಣ್ಣುಗಳನ್ನೇ ಆಹಾರವಾಗಿ ತೆಗೆದುಕೊಳ್ಳಬೇಕು. ಗೋಧಿ ಮೊದಲಾದ ಬತ್ತದ ಜಾತಿಯ ಧಾನ್ಯಗಳೂ, ಉದ್ದು, ಎಳ್ಳು ಮತ್ತು ಸಾಸವೆಗಳೂ, ಮುತ್ತುಗದ ಸಮಿತ್ತುಗಳೂ ಹೋಮಕ್ಕೆ ಪ್ರಶಸ್ತವಾದುವು. ಹೋಮದ ತರುವಾಯ ಕೊನೆಗೆ ವಸುಧಾರೆಯನ್ನು ಎಂದರೆ ಸಂಸ್ರಾವ ಹೋಮವನ್ನು ಮಾಡಬೇಕು.

೨೩. ಋತ್ವಿಕ್ಕುಗಳಿಗೆ ಮೊದಲನೆಯ ತಿಂಗಳು ಕ್ಷೀರಭೋಜನವನ್ನೂ, ಎರಡನೆಯ ತಿಂಗಳು ಧರ್ಮ, ಕಾಮ ಮತ್ತು ಅರ್ಥಗಳೆಂಬ ಪುರುಷಾರ್ಥಗಳನ್ನು ಕೊಡುವ ಕೃಸರಾನ್ನವನ್ನೂ ಕೊಡಬೇಕು.

೨೪. ಎಲೈ ಮನುಚಕ್ರವರ್ತೀ, ಮೂರನೆಯ ತಿಂಗಳು ಗೋಧಿಯ ರೊಟ್ಟಿಯನ್ನೂ, ನಾಲ್ಕನೆಯದರಲ್ಲಿ ಹೋಳಿಗೆಯನ್ನೂ ಬಡಿಸಿ ಬ್ರಾಹ್ಮಣರಿಗೆ ತೃಪ್ತಿಯನ್ನುಂಟುಮಾಡಬೇಕು.

ಪಂಚಮೇ ದಧಿಭಕ್ತಂ ತು ಷಷ್ಠೇ ವೈ ಸಕ್ತುಭೋಜನಂ ।
ಪೂಪಾಶ್ಚ ಸಪ್ತಮೇ ದೇಯಾ ಹ್ಯಷ್ಟಮೇ ಘೃತಪೂಪಕಾಃ ॥೨೫॥

ಷಷ್ಠ್ಯೋದನಂ ಚ ನವಮೇ ದಶಮೇ ಯುವಷಷ್ಟಿಕಾ ।
ಏಕಾದಶೇ ಸಮಾಷಂ ತು ಭೋಜನಂ ರವಿನಂದನ ॥೨೬॥

ದ್ವಾದಶೇ ತ್ವಥ ಸಂಪ್ರಾಪ್ತೇ ಮಾಸೇ ರವಿಕುಲೋದ್ವಹ ।
ಷಡ್ರಸೈಃ ಸಹ ಭಕ್ಷ್ಯೈಶ್ಚ ಭೋಜನಂ ಸಾರ್ವಕಾಮಿಕಂ ॥೨೭॥

ದೇಯಾ ದ್ವಿಜಾನಾಂ ರಾಜೇಂದ್ರ ಮಾಸಿ ಮಾಸಿ ಚ ದಕ್ಷಿಣಾಃ ।
ಅಹತವಾಸಃಸಂವೀತೋ ದಿನಾರ್ಧಂ ಹೋಮಯೇಚ್ಛುಚಿಃ ॥೨೮॥

ತಸ್ಮಾತ್ಸದೋತ್ಥಿತೈರ್ಭಾವ್ಯಂ ಯಜಮಾನೈಃ ಸಹ ದ್ವಿಜೈಃ ।
ಇಂದ್ರಾದೀನಾಂ ಸುರಾಣಾಂ ಚ ಪ್ರೀಣನಂ ಸಾರ್ವಕಾಮಿಕಂ ॥೨೯॥

---

೨೫. ಐದನೆಯ ತಿಂಗಳು ಮೊಸರನ್ನವನ್ನೂ, ಆರನೆಯುದರಲ್ಲಿ ಹುರಿಟ್ಟನ್ನೂ, ಏಳನೆಯುದರಲ್ಲಿ ರೊಟ್ಟಿಯನ್ನೂ, ಎಂಟನೆಯ ತಿಂಗಳು ತುಪ್ಪದಲ್ಲಿ ಕರಿದ ರೊಟ್ಟಿಯನ್ನೂ ಕೊಡಬೇಕು.

೨೬. ಒಂಬತ್ತನೆಯ ತಿಂಗಳಲ್ಲಿ ಷಷ್ಟಿಎಂಬ ಒಂದು ಜಾತಿಯ ಅಕ್ಕಿಯ ಅನ್ನವನ್ನೂ, ಹತ್ತನೆಯುದರಲ್ಲಿ ಯವಾನ್ನವನ್ನೂ, ಹನ್ನೊಂದನೆಯ ತಿಂಗಳು ಉದ್ದಿನಿಂದ ಮಾಡಿದ ಪದಾರ್ಥಗಳನ್ನೂ ಬಡಿಸಬೇಕು.

೨೭. ಎಲೈ ಸೂರ್ಯವಂಶತಿಲಕಾ, ಹನ್ನೆರಡನೆಯ ತಿಂಗಳಿನಲ್ಲಿ ಸಕಲ ಭಕ್ಷ್ಯ ಭೋಜ್ಯ ಸಹಿತವಾದ, ಷಡ್ರಸೋಪೇತವಾದ ಭೋಜನವನ್ನು ನೀಡಿ ಅವರ ಇಷ್ಟಾರ್ಥಗಳನ್ನೆಲ್ಲ ಪೂರ್ಣಮಾಡಬೇಕು.

೨೮. ರಾಜೋತ್ತಮಾ, ಪ್ರತಿಯೊಂದು ತಿಂಗಳಿನಲ್ಲೂ ಬ್ರಾಹ್ಮಣರಿಗೆ ದಕ್ಷಿಣೆಗಳನ್ನು ಕೊಡಬೇಕು. ಒಗೆಯದ ಹೊಸಬಟ್ಟೆಯನ್ನು ಉಟ್ಟುಕೊಂಡು ಶುಚಿಯಾಗಿ ಮಧ್ಯಾಹ್ನದವರೆಗೆ ಹೋಮಮಾಡಬೇಕು.

೨೯-೩೦. ಆದುದರಿಂದ ಯಜಮಾನನೂ ಋತ್ವಿಕ್ಕುಗಳೂ ಯಾವಾಗಲೂ ಜಾಗರೂಕರಾಗಿರಬೇಕು. ಇಂದ್ರಾದಿ ದೇವತೆಗಳನ್ನು ಎಲ್ಲ ಬಗೆಗಳಿಂದಲೂ ತೃಪ್ತಿ

ಕೃತ್ವಾ ಸುರಾಣಾಂ ರಾಜೇಂದ್ರ ಪಶುಘಾತಸಮನ್ವಿತಂ ।
ಸರ್ವದಾನಾನಿ ದೇವಾನಾಮಗ್ನಿಷ್ಟೋಮಂ ಚ ಕಾರಯೇತ್ ॥೩೦॥

ಏವಂ ಕೃತ್ವಾ ವಿಧಾನೇನ ಪೂರ್ಣಾಹುತಿಃ ಶತೇ ಶತೇ ।
ಸಹಸ್ರೇ ದ್ವಿಗುಣಾ ದೇಯಾ ಯಾವಚ್ಛತಸಹಸ್ರಕಂ ॥೩೧॥

ಪುರೋಡಾಶಸ್ತತಃ ಸಾಧ್ಯೋ ದೇವತಾರ್ಥೇ ಚ ಋತ್ವಿಜೈಃ ।
ಯುಕ್ತೋ ವರ್ಣ ಮಾನವೈಶ್ಚ ಪುನಃ ಪ್ರಾಪ್ತಾರ್ಚನಾ ದ್ವಿಜಾ ॥೩೨॥

ಪ್ರೀಣಯಿತ್ವಾ ಸುರಾ ಸರ್ವಾ ಪಿತೄನೇವ ತತಃ ಕ್ರಮಾತ್ ।
ಕೃತ್ವಾ ಶಾಸ್ತ್ರವಿಧಾನೇನ ಪಿಂಡಾನಾಂ ಚ ಸಮರ್ಪಣಂ ॥೩೩॥

ಸಮಾಪ್ತೌ ತಸ್ಯ ಹೋಮಸ್ಯ ವಿಪ್ರಾಣಾಮಥ ದಕ್ಷಿಣಾಂ ।
ಸಮಾಂ ಚೈವ ತುಲಾಂ ಕೃತ್ವಾ ಬಧ್ವಾ ಶಿಕ್ಯದ್ವಯಂ ಪುನಃ ॥೩೪॥

---

ಪಡಿಸಬೇಕು. ರಾಜೇಂದ್ರಾ, ಸಕಲ ದಾನಗಳನ್ನೂ ಮಾಡಿ ಪಶುಬಲಿಸಮೇತ ವಾಗಿ ಅಗ್ನಿಷ್ಟೋಮಯಾಗವನ್ನೂ ಸಹ ನಡೆಸಬೇಕು.

೩೧. ಹೀಗೆ ಶಾಸ್ತ್ರೋಕ್ತವಾಗಿ ಹೋಮಮಾಡುತ್ತ ನೂರು ಹೋಮಗಳಿಗೊಂದು ಸಾರಿ ಪೂರ್ಣಾಹುತಿಯನ್ನು ಕೊಡಬೇಕು. ಸಾವಿರ ಹೋಮಗಳು ಪೂರ್ಣವಾದಾಗ ದಾನದಕ್ಷಿಣೆಗಳನ್ನು ಇಮ್ಮಡಿಯಾಗಿ ಕೊಡಬೇಕು. ಲಕ್ಷ ಸಂಖ್ಯೆಯವರೆಗೂ ಹೀಗೆಯೇ ನಡೆಸಬೇಕು.

೩೨-೩೩. ತರುವಾಯ ಋತ್ವಿಕ್ಕುಗಳು ಪುರೋಡಾಶವನ್ನು (ಅಕ್ಕಿಯ ಹಿಟ್ಟಿನಿಂದ ಮಾಡಿದ ಭಕ್ಷ್ಯವಿಶೇಷ) ಮಾಡಿ ದೇವತೆಗಳಿಗೆ ನಿವೇದನ ಮಾಡಬೇಕು. ಯಜಮಾನನು ಜಿತೇಂದ್ರಿಯನಾಗಿದ್ದು ಬ್ರಾಹ್ಮಣರನ್ನೂ ಉಳಿದ ಜನರನ್ನೂ ಸತ್ಕರಿಸಿ, ದೇವತೆಗಳೆಲ್ಲರನ್ನೂ ಸಂತೋಷಪಡಿಸಿ, ಅನಂತರ ಪಿತೃಪೂಜೆಯನ್ನು ಮಾಡಿ ಉಕ್ತರೀತಿಯಿಂದ ಪಿಂಡಗಳನ್ನು ಸಮರ್ಪಿಸಬೇಕು.

೩೪-೩೫. ಆ ಹೋಮವು ಸಮಾಪ್ತವಾದ ಬಳಿಕ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಡಬೇಕು ಸಮತೂಕವಾದ ತಕ್ಕಡಿಗೆ ಎರಡು ತಟ್ಟೆಯನ್ನು ತೂಗು

ಆತ್ಮಾನಂ ತೋಲಯೇತ್ತತ್ರ ಪತ್ನೀಂ ಚೈವ ದ್ವಿತೀಯಕಾಂ ।
ಸುವರ್ಣೇನ ತಥಾತ್ಮಾನಂ ರಜತೇನ ತಥಾ ಪ್ರಿಯಾಂ ॥೩೫॥

ತೋಲಯಿತ್ವಾ ದದೇದ್ರಾಜಾ ವಿತ್ತಶಾಠ್ಯವಿವರ್ಜಿತಃ ।
ದದೇಚ್ಛತಸಹಸ್ರಂ ತು ರೂಪ್ಯಸ್ಯ ಕನಕಸ್ಯ ಚ ॥೩೬॥

ಸರ್ವಸ್ವಂ ವಾ ದದೇತ್ತತ್ರ ರಾಜಸೂಯಫಲಂ ಲಭೇತ್ ।
ಏವಂ ಕೃತ್ವಾ ವಿಧಾನೇನ ವಿಪ್ರಾಂಸ್ತಾಂಶ್ಚ ವಿಸರ್ಜಯೇತ್ ॥೩೭॥

ಪ್ರೀಯತಾಂ ಪುಂಡರೀಕಾಕ್ಷಃ ಸರ್ವಯಜ್ಞೇಶ್ವರೋ ಹರಿಃ ।
ತಸ್ಮಿಂಸ್ತುಷ್ಟೇ ಜಗತ್ತುಷ್ಟಂ ಪ್ರೀಣಿತೇ ಪ್ರೀಣಿತಂ ಭವೇತ್ ॥೩೮॥

ಏವಂ ಸರ್ವೋಪಘಾತೇ ತು ದೇವಮಾನುಷಕಾರಿತೇ ।
ಇಯಂ ಶಾಂತಿಸ್ತವಾಖ್ಯಾತಾ ಯಾಂ ಕೃತ್ವಾ ಸುಕೃತೀ ಭವೇತ್ ॥೩೯॥

---

ಹಾಕಿ ತನ್ನ ತೂಕದಷ್ಟು ಚಿನ್ನವನ್ನೂ, ತನ್ನ ಪತ್ನಿಯ ತೂಕದಷ್ಟು ಬೆಳ್ಳಿಯನ್ನೂ ತೂಗಬೇಕು.

೩೬. ರಾಜನು ಜಿಪುಣತನವನ್ನು ತೋರಿಸದೆ ತೂಕಮಾಡಿದುದನ್ನೆಲ್ಲ ದಾನ ಮಾಡಬೇಕು. ಬೆಳ್ಳಿಯ ಮತ್ತು ಚಿನ್ನದ ಲಕ್ಷ ನಾಣ್ಯಗಳನ್ನೂ ದಾನವಾಗಿ ಕೊಡಬೇಕು. ತನ್ನ ಸರ್ವಸ್ವವನ್ನು ಕೊಟ್ಟರೂ ಕೊಡಬಹುದು. ಇದರಿಂದ ರಾಜಸೂಯಯಾಗ ಮಾಡಿದಷ್ಟು ಫಲ ಬರುತ್ತದೆ.

೩೭-೩೮. ಶಾಸ್ತ್ರವಿಧಾನದಿಂದ ಹೀಗೆ ಕರ್ಮವನ್ನು ಸಮಾಪ್ತಮಾಡಿ ಋತ್ವಿಕ್ಕು ಗಳನ್ನು ಬೀಳ್ಕೊಡಬೇಕು. "ಸಕಲ ಯಜ್ಞಗಳ ಅಧಿಪತಿಯೂ, ಪಾಪಪರಿ ಹಾರಕನೂ ಆದ ಪುಂಡರೀಕಾಕ್ಷನು ಪ್ರೀತನಾಗಲಿ. ಅವನು ತೃಪ್ತನಾದರೆ ಲೋಕವೆಲ್ಲ ತೃಪ್ತಿಗೊಳ್ಳುವುದು. ಅವನನ್ನು ಸಂತೋಷಗೊಳಿಸಿದರೆ ಜಗತ್ತನ್ನು ಸಂತೋಷಗೊಳಿಸಿದಂತೆ ಆಗುತ್ತದೆ" ಎಂದು ಅನುಸಂಧಾನಮಾಡಬೇಕು.

೩೯. ದೇವತೆಗಳಿಂದ ಅಥವಾ ಮನುಷ್ಯರಿಂದ ಪ್ರಾಪ್ತವಾದ ಎಲ್ಲಬಗೆಯ ಪೀಡೆಯನ್ನೂ ಕಳೆಯುವ ಈ ಶಾಂತಿಯನ್ನು ನಿನಗೆ ಹೇಳಿದೆನು. ಇದನ್ನು ಮಾಡಿದವನು ಪುಣ್ಯಭಾಗಿಯಾಗುವನು.

**ನ ಶೋಚೇಜ್ಜನ್ಮಮರಣೇ ಕೃತಾಕೃತವಿಚಾರಣೇ ।**
**ಸರ್ವತೀರ್ಥೇಷು ಯತ್ಸ್ನಾನಂ ಸರ್ವಯಜ್ಞೇಷು ಯತ್ಫಲಂ ।**
**ತತ್ಫಲಂ ಸಮವಾಪ್ನೋತಿ ಕೃತ್ವಾ ಯಜ್ಞತ್ರಯಂ ನೃಪ ॥೪೦॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಗ್ರಹಯಜ್ಞವಿಧಾನಂ**
**ನಾಮೈಕೋನಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಃ**

---

೪೦. ರಾಜಾ, ಗ್ರಹಯಜ್ಞ, ಲಕ್ಷಹೋಮ ಮತ್ತು ಕೋಟಿಹೋಮಗಳೆಂಬ ಈ ಮೂರು ಯಜ್ಞಗಳನ್ನೂ ಮಾಡಿದವನಿಗೆ ಜನ್ಮಮರಣಗಳ ದುಃಖವಿಲ್ಲ; ಕಾರ್ಯಾಕಾರ್ಯಗಳ ಚಿಂತೆಯಿಲ್ಲ. ಸಕಲ ಪುಣ್ಯತೀರ್ಥಗಳಲ್ಲಿ ಸ್ನಾನಮಾಡಿದ ಫಲವೂ, ಎಲ್ಲ ಯಜ್ಞಗಳನ್ನು ನಡೆಸಿದ ಫಲವೂ ಆತನಿಗೆ ಬರುತ್ತವೆ.

**ಅಧ್ಯಾಯದ ಸಾರಾಂಶ**

ಈ ಅಧ್ಯಾಯದಲ್ಲಿ ಗ್ರಹಯಜ್ಞ, ಲಕ್ಷಹೋಮ ಮತ್ತು ಕೋಟಿಹೋಮಗಳ ವಿಧಾನವನ್ನು ಹೇಳಿದೆ.

ಈ ಮೂರು ಯಜ್ಞಗಳೂ ಸಕಲ ಪಾಪಪರಿಹಾರಕವಾದುವು. ಎಲ್ಲಬಗೆಯ ಅನಿಷ್ಟಗಳನ್ನೂ ಕಳೆಯತಕ್ಕುವು. ಲಕ್ಷಹೋಮವು ಒಂದು ತಿಂಗಳಲ್ಲೂ, ಕೋಟಿಹೋಮವು ಒಂದು ವರ್ಷದಲ್ಲೂ ಮುಗಿಯುವುವು. ಇವುಗಳನ್ನು ಮಾಡಿದವನಿಗೆ ಸಕಲ ತೀರ್ಥಯಾತ್ರೆಗಳ ಮತ್ತು ಎಲ್ಲ ಯಜ್ಞಗಳ ಫಲವು ಲಭಿಸುವುದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಗ್ರಹಯಜ್ಞವಿಧಾನವೆಂಬ
ಇನ್ನೂರ ಮೂವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

# ಅಥ ಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಃ

॥ ಮನುರುವಾಚ ॥

ಇದಾನೀಂ ಸರ್ವಧರ್ಮಜ್ಞ ಸರ್ವಶಾಸ್ತ್ರವಿಶಾರದ ।
ಯಾತ್ರಾಕಾಲವಿಧಾನಂ ಮೇ ಕಥಯಸ್ವ ಮಹೀಕ್ಷಿತಾಂ ॥ ೧ ॥

॥ ಮತ್ಸ್ಯ ಉವಾಚ ॥

ಯದಾ ಮನ್ಯೇತ ನೃಪತಿರಾಕ್ರಂದೇನ ಬಲೀಯಸಾ ।
ಪಾರ್ಷ್ಣಿಗ್ರಾಹಾಭಿಭೂತೋಽರಿಸ್ತದಾ ಯಾತ್ರಾಂ ಪ್ರಯೋಜಯೇತ್॥ ೨ ॥
ಯೋಧಾನ್ಮತ್ವಾ ಪ್ರಭೂತಾಂಶ್ಚ ಪ್ರಭೂತಂ ಚ ಬಲಂ ಮಮ ।
ಮೂಲರಕ್ಷಾಸಮರ್ಥೋಽಸ್ಮಿ ತದಾ ಯಾತ್ರಾಂ ಪ್ರಯೋಜಯೇತ್ ॥ ೩ ॥
ಅಶುದ್ಧಪಾರ್ಷ್ಣಿರ್ನೃಪತಿರ್ನ ತು ಯಾತ್ರಾಂ ಪ್ರಯೋಜಯೇತ್ ।
ಪಾರ್ಷ್ಣಿಗ್ರಾಹಾಧಿಕಂ ಸೈನ್ಯಂ ಮೂಲೇ ನಿಕ್ಷಿಪ್ಯ ಚ ವ್ರಜೇತ್ ॥ ೪ ॥

---

೧. ಮನುಚಕ್ರವರ್ತಿ ಹೇಳಿದನು.—ಸಕಲ ಧರ್ಮಗಳನ್ನರಿತವನೂ, ಸರ್ವ ಶಾಸ್ತ್ರವಿಶಾರದನೂ ಆದ ಓ ದೇವಾ, ರಾಜರು ದಂಡಯಾತ್ರೆಯನ್ನು ಕೈಗೊಳ್ಳ ಬೇಕಾದ ಕಾಲದ ಸ್ವರೂಪವನ್ನು ನನಗೆ ತಿಳಿಸು.

೨. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಹಿಂಬದಿಯಲ್ಲಿ ಆಕ್ರ ಮಣನಡೆಸಿ ಬಲವಾಗಿ ಯುದ್ಧಮಾಡಿದರೆ ಶತ್ರುವು ಸೋಲುತ್ತಾನೆಂದು ತಿಳಿದು ಬಂದಾಗ ರಾಜನು ದಂಡಯಾತ್ರೆಯನ್ನು ಕೈಗೊಳ್ಳಬೇಕು.

೩. "ಹೋರಾಡಬಲ್ಲ ವೀರರು ಬೇಕಾದಷ್ಟು ಜನರಿದ್ದಾರೆ. ನನ್ನ ಸೈನ್ಯವೂ ಪ್ರಬಲವಾಗಿದೆ. ಮೂಲಬಲವನ್ನು ಕಾಪಾಡಿಕೊಳ್ಳುವ ಸಾಮರ್ಥ್ಯವು ನನ ಗುಂಟು" ಎಂದು ಮನವರಿಕೆಯಾದಾಗ ಜೈತ್ರಯಾತ್ರೆಗೆ ಹೊರಡಬೇಕು.

೪. ಹಿಂಗಾವಲಿನ ಸೈನ್ಯವು ಬಲವಾಗಿಲ್ಲದ ರಾಜನು ದಂಡಯಾತ್ರೆ ಹೊರಡಬಾರದು. ಶತ್ರುಬಲದ ಹಿಂಚೂಣಿಯನ್ನು ಮುತ್ತುವುದಕ್ಕೆ ಬೇಕಾ ದಷ್ಟನ್ನು ತೆಗೆದುಕೊಂಡು ಅಧಿಕವಾದ ಸೈನ್ಯವನ್ನು ಮೂಲಬಲದಲ್ಲಿಟ್ಟು ಪ್ರಯಾಣ ಮಾಡಬೇಕು.

ಚೈತ್ರ್ಯಾಂ ವಾ ಮಾರ್ಗಶೀರ್ಷ್ಯಾಂ ವಾ ಯಾತ್ರಾಂ ಯಾಯಾನ್ನರಾಧಿಪಃ ।
ಚೈತ್ರ್ಯಾಂ ಪಶ್ಯೇಚ್ಚ ನೈದಾಘಂ ಹಂತಿ ಪುಷ್ಟಿಂ ಚ ಶಾರದೀಂ ॥ ೫ ॥

ಏತದೇವ ವಿಪರ್ಯಸ್ತಂ ಮಾರ್ಗಶೀರ್ಷ್ಯಾಂ ನರಾಧಿಪ ।
ಶತ್ರೋರ್ವಾ ವ್ಯಸನೇ ಯಾಯಾತ್ಕಾಲ ಏವ ಸುದುರ್ಲಭಃ ॥ ೬ ॥

ದಿವ್ಯಾಂತರಿಕ್ಷಕ್ಷಿತಿಜೈರುತ್ಪಾತೈಃ ಪೀಡಿತಂ ಪರಂ ।
ಷಡಕ್ಷಪೀಡಾಸಂತಪ್ತಂ ಪೀಡಿತಂ ಚ ತಥಾ ಗ್ರಹೈಃ ॥ ೭ ॥

ಜ್ವಲಂತೀ ಚ ತಥೈವೋಲ್ಕಾ ದಿಶಂ ಯಾಂ ಚ ಪ್ರಪದ್ಯತೇ ।
ಭೂಕಂಪೋಲ್ಕಾದಿ ಸಂಯಾತಿ ಯಾಂ ಚ ಕೇತುಃ ಪ್ರಸೂಯತೇ ॥ ೮ ॥

---

೫. ರಾಜನು ಚೈತ್ರಮಾಸದ ಹುಣ್ಣಿಮೆಯ ದಿನವೋ ಮಾರ್ಗಶಿರಮಾಸದ ಹುಣ್ಣಿಮೆಯ ದಿನವೋ ದಂಡಯಾತ್ರೆಗೆ ಹೊರಡಬೇಕು. ಚೈತ್ರಹುಣ್ಣಿಮೆಯಲ್ಲಿ ಹೊರಟರೆ ಬೇಸಿಗೆಯ ತಾಪವನ್ನು ಎದುರಿಸಬೇಕಾಗುವುದು. ಅಷ್ಟೇ ಅಲ್ಲ; ಶರತ್ಕಾಲದಲ್ಲಿ ಶೇಖರಿಸಿಕೊಳ್ಳಬಹುದಾದ ಸಾಧನ ಸಂಪತ್ತುಗಳನ್ನೆಲ್ಲ ತಪ್ಪಿಸಿ ಕೊಂಡಂತಾಗುವುದು.

೬. ಓ ರಾಜಾ, ಮಾರ್ಗಶಿರದ ಹುಣ್ಣಿಮೆಯಲ್ಲಾದರೆ ಇದೇ ಫಲವು ವ್ಯತ್ಯಸ್ತವಾಗುವುದು. ಶತ್ರುವು ವ್ಯಸನಾಸಕ್ತನಾಗಿರುವ ಕಾಲದಲ್ಲಾದರೂ ಹೋಗಬಹುದು. ಇಂತಹ ಕಾಲವು ಸಿಕ್ಕುವುದು ಬಹಳ ದುರ್ಲಭ.

೭. ಶತ್ರುವು ದಿವ್ಯ, ಅಂತರಿಕ್ಷ ಮತ್ತು ಭೌಮಗಳೆಂಬ ಮೂರುಬಗೆಯ ಉತ್ಪಾತಗಳಿಂದ ಪೀಡಿತನಾಗಿರುವಾಗಲೂ, ಆರುಬಗೆಯ ಈತಿಬಾಧೆಗಳಿಗೆ ಗುರಿಯಾಗಿರುವಾಗಲೂ, ಇಂದ್ರಿಯ ಸುಖದ ಕೋಟಲೆಗೆ ಸಿಕ್ಕಿ ಬಳಲುತ್ತಿರುವಾಗಲೂ, ಅನನುಕೂಲವಾದ ಗ್ರಹಗಳಿಂದ ತೊಂದರೆ ಪಡುತ್ತಿರುವಾಗಲೂ ಅವನ ಮೇಲೆ ದಂಡೆತ್ತಿ ಹೋಗಬೇಕು.

೮. ಆಕಾಶದಲ್ಲಿ ಉರಿಗೊಳ್ಳಿಯು ಜ್ವಲಿಸುತ್ತ ಯಾವದಿಕ್ಕಿಗೆ ಹೋಗುತ್ತದೆಯೋ, ಭೂಕಂಪವೂ ಉಲ್ಕಾಪಾತಗಳೂ ಯಾವ ದಿಕ್ಕಿನಲ್ಲಿ ಆಗುತ್ತವೆಯೋ, ಧೂಮಕೇತು ಯಾವ ದಿಕ್ಕಿನಲ್ಲಿ ಏಳುತ್ತದೆಯೋ, ಯಾವ ದಿಕ್ಕಿನಲ್ಲಿ ಸಿಡಿಲು ಬೀಳುತ್ತದೆಯೋ ಆಕಡೆಗೆ ರಾಜನು ದಂಡಯಾತ್ರೆ ಹೊರಡಬೇಕು.

ನಿರ್ಘಾತಶ್ಚ ಪತೇದ್ಯತ್ರ ತಾಂ ಯಾಯಾದ್ವಸುಧಾಧಿಪಃ ।
ಸ್ವಬಲವ್ಯಸನೋಪೇತಂ ತಥಾ ದುರ್ಭಿಕ್ಷಪೀಡಿತಂ ॥ ೯ ॥

ಸಂಭೂತಾಂತರಕೋಪಂ ಚ ಕ್ಷಿಪ್ರಂ ಪ್ರಾಯಾದರಿಂ ನೃಪಃ ।
ಯೂಕಾಮಾಕ್ಷೀಕಬಹುಲಂ ಬಹುಪಂಕಂ ತಥಾವಿಲಂ ॥೧೦॥

ನಾಸ್ತಿಕಂ ಭಿನ್ನಮರ್ಯಾದಂ ತಥಾಽಮಂಗಲವಾದಿನಂ ।
ಅಪೇತಪ್ರಕೃತಿಂ ಚೈವ ನಿಃಸಾರಂ ಚ ತಥಾ ಜಯೇತ್ ॥೧೧॥

ವಿದ್ವಿಷ್ಟನಾಯಕಂ ಸೈನ್ಯಂ ತಥಾ ಭಿನ್ನಂ ಪರಸ್ಪರಂ ।
ವ್ಯಸನಾಸಕ್ತನೃಪತಿಂ ಬಲಂ ರಾಜಾಭಿಯೋಜಯೇತ್ ॥೧೨॥

ಸೈನಿಕಾನಾಂ ನ ಶಸ್ತ್ರಾಣಿ ಸ್ಫುರಂತ್ಯಂಗಾನಿ ಯತ್ರ ಚ ।
ದುಃಸ್ವಪ್ನಾನಿ ಚ ಪಶ್ಯಂತಿ ಬಲಂ ತದಭಿಯೋಜಯೇತ್ ॥೧೩॥

---

೯. ಶತ್ರುವು ತನ್ನ ಸೈನ್ಯದ ವಿಷಯವಾಗಿ ಚಿಂತಾಕುಲನಾಗಿದ್ದರೆ, ಕ್ಷಾಮ ಬಾಧೆಯಿಂದ ಪೀಡಿತನಾಗಿದ್ದರೆ, ಪತ್ನೀಪುತ್ರಾದಿಗಳ ಮತ್ತು ಅಮಾತ್ಯಸೇನಾಪತಿಗಳ ಕೋಪಕ್ಕೆ ಪಾತ್ರನಾಗಿದ್ದರೆ ತಡಮಾಡದೆ ಅವನ ಮೇಲೆ ಬೀಳಲು ಹೋಗಬೇಕು.

೧೦-೧೧. ಹೇನುನೊಣಗಳಿಂದ ತುಂಬಿ ಬಹು ಪಾಪಿಷ್ಠನೂ, ಅಪರಿಶುದ್ಧನೂ, ನಾಸ್ತಿಕನೂ, ನಡೆವಳಿಕೆಯನ್ನು ಮೀರಿದವನೂ, ಅಮಂಗಲಶಬ್ದವನ್ನು ಹೇಳುವವನೂ, ಪ್ರಜಾನುರಾಗವನ್ನು ಕಳೆದುಕೊಂಡವನೂ, ದುರ್ಬಲನೂ ಆದ ಶತ್ರುವನ್ನು ಜಯಿಸಬೇಕು.

೧೨. ಸೈನ್ಯವು ಸೇನಾಪತಿಯನ್ನು ದ್ವೇಷಿಸುತ್ತ ಒಗ್ಗಟ್ಟಿನಲ್ಲಿಲ್ಲದಿದ್ದರೂ, ರಾಜನು ಸಪ್ತವ್ಯಸನಗಳಲ್ಲಿ ಆಸಕ್ತನಾಗಿದ್ದರೂ ಆ ದೇಶಕ್ಕೆ ಜಯಾಭಿಲಾಷಿಯಾದ ರಾಜನು ತನ್ನ ಸೈನ್ಯವನ್ನು ನಡೆಸಬೇಕು.

೧೩. ಯಾವದೇಶದಲ್ಲಿ ಸೈನಿಕರಿಗೆ ಶಸ್ತ್ರಗಳಿಲ್ಲವೋ, ಅಶುಭಸೂಚಕವಾಗಿ ಅಂಗಗಳು ಅದುರುತ್ತವೆಯೋ, ದುಃಸ್ವಪ್ನಗಳು ಬೀಳುತ್ತವೆಯೋ ಅಲ್ಲಿಗೆ ರಾಜನು ದಂಡಯಾತ್ರೆ ಹೊರಡಬೇಕು.

ಉತ್ಸಾಹಬಲಸಂಪನ್ನಃ ಸ್ವಾನುರಕ್ತಬಲಸ್ತಥಾ ।
ತುಷ್ಟಪುಷ್ಟಬಲೋ ರಾಜಾ ಪರಾನಭಿಮುಖೋ ವ್ರಜೇತ್ ॥೧೪॥

ಶರೀರಸ್ಫುರಣೇ ಧನ್ಯೇ ತಥಾ ದುಃಸ್ವಪ್ನನಾಶನೇ ।
ನಿಮಿತ್ತೇ ಶಕುನೇ ಧನ್ಯೇ ಜಾತೇ ಶತ್ರುಪುರಂ ವ್ರಜೇತ್ ॥೧೫॥

ಋಕ್ಷೇಷು ಷಟ್ಸು ಶುದ್ಧೇಷು ಗ್ರಹೇಷ್ವನುಗುಣೇಷು ಚ ।
ಪ್ರಶ್ನಕಾಲೇ ಶುಭೇ ಜಾತೇ ಪರಾನ್ಯಾಯಾನ್ನರಾಧಿಪಃ ॥೧೬॥

ಏವಂ ತು ದೈವಸಂಪನ್ನಸ್ತಥಾ ಪೌರುಷಸಂಯುತಃ ।
ದೇಶಕಾಲೋಪಪನ್ನಾಂ ತು ಯಾತ್ರಾಂ ಕುರ್ಯಾನ್ನರಾಧಿಪಃ ॥೧೭॥

ಸ್ಥಲೇ ನಕ್ರಸ್ತು ನಾಗಸ್ಯ ತಸ್ಯಾಪಿ ಸ ಜಲೇ ವಶೇ ।
ಉಲೂಕಸ್ಯ ನಿಶಿ ಧ್ವಾಂಕ್ಷಃ ಸ ಚ ತಸ್ಯ ದಿವಾ ವಶೇ ॥೧೮॥

---

೧೪. ಪ್ರಜೆಗಳ ಮತ್ತು ಪರಿವಾರದವರ ಅನುರಾಗವನ್ನು ಪೂರ್ಣವಾಗಿ ಗಳಿಸಿ, ಸಂತುಷ್ಟರೂ ಪುಷ್ಟರೂ ಆದ ಸೈನಿಕರಿಂದ ಕೂಡಿ, ಉತ್ಸಾಹ ಬಲಸಂಪನ್ನನೆನಿಸಿದ ಶತ್ರುವಿಗೆ ಅಭಿಮುಖನಾಗಿ ಹೋಗಬೇಕು.

೧೫. ಶುಭಸೂಚಕವಾಗಿ ಅಂಗವು ಅದುರಿದರೆ, ಒಳ್ಳೆಯ ಕನಸುಗಳು ಬಿದ್ದರೆ, ಶುಭಶಕುನಗಳಾದರೆ ಶತ್ರುವಿನ ಪಟ್ಟಣವನ್ನು ಆಕ್ರಮಿಸಲು ಹೋಗಬೇಕು.

೧೬. ತನು, ಧನ, ಸುಖ, ಶತ್ರು, ಆಯುಸ್ಸು ಮತ್ತು ವ್ಯಯಗಳೆಂಬ ಆರು ಸ್ಥಾನಗಳು ಶುದ್ಧವಾಗಿರಲು, ಗ್ರಹಗಳು ಅನುಕೂಲವಾಗಿರಲು, ಜೈತ್ರಯಾತ್ರೆಯ ವಿಷಯವಾದ ಪ್ರಶ್ನೆಯನ್ನೆತ್ತಿದ ಕಾಲವು ಶುಭವಾಗಿರಲು, ಅರಸನು ಶತ್ರುಗಳ ಮೇಲೆ ದಂಡೆತ್ತಿ ಹೊರಡಬೇಕು.

೧೭. ಹೀಗೆ ದೈವಬಲವು ಅನುಕೂಲವಾಗಿರುವಾಗ ಪುರುಷಬಲವನ್ನು ಜೊತೆಗೊಳಿಸಿಕೊಂಡು, ದೇಶಕಾಲಗಳಿಗನುಸಾರವಾಗಿ ರಾಜನು ಜೈತ್ರಯಾತ್ರೆಯನ್ನು ಮಾಡಬೇಕು.

೧೮. ನೆಲದ ಮೇಲೆ ಮೊಸಳೆಯು ಆನೆಯ ವಶವಾಗುವುದು. ಅದೇ ಆನೆಯು ನೀರಿನಲ್ಲಿ ಮೊಸಳೆಗೆ ಅಧೀನವಾಗುವುದು. ಕಾಗೆ ರಾತ್ರಿಯಲ್ಲಿ ಗೂಬೆಗೂ ಅದು ಹಗಲಿನಲ್ಲಿ ಕಾಗೆಗೂ ವಶವಾಗುವುವು. ಹೀಗೆ ದೇಶಕಾಲಗಳ ಬಲಾಬಲವನ್ನು ತಿಳಿದು ರಾಜನು ದಂಡೆತ್ತಿ ನಡೆಯಬೇಕು.

ಏವಂ ದೇಶಂ ಚ ಕಾಲಂ ಚ ಜ್ಞಾತ್ವಾ ಯಾತ್ರಾಂ ಪ್ರಯೋಜಯೇತ್ ।
ಪದಾತಿನಾಗಬಹುಲಾಂ ಸೇನಾಂ ಪ್ರಾವೃಷಿ ಯೋಜಯೇತ್ ॥೧೯॥

ಹೇಮಂತೇ ಶಿಶಿರೇ ಚೈವ ರಥವಾಜಿಸಮಾಕುಲಾಂ ।
ಖರೋಷ್ಟ್ರಬಹುಲಾಂ ಸೇನಾಂ ತಥಾ ಗ್ರೀಷ್ಮೇ ನರಾಧಿಪಃ ॥೨೦॥

ಚತುರಂಗಬಲೋಪೇತಾಂ ವಸಂತೇ ವಾ ಶರದ್ಯಥ ।
ಸೇನಾ ಪದಾತಿಬಹುಲಾ ಯಸ್ಯ ಸ್ಯಾತ್ಪೃಥಿವೀಪತೇಃ ॥೨೧॥

ಅಭಿಯೋಜ್ಯೋ ಭವೇತ್ತೇನ ಶತ್ರುರ್ವಿಷಮಮಾಶ್ರಿತಃ ।
ಗಮ್ಯೋ ವೃಕ್ಷಾವೃತೇ ದೇಶೇ ಸ್ಥಿತಂ ಶತ್ರುಂ ತಥೈವ ಚ ॥೨೨॥

ಕಿಂಚಿತ್ಪಂಕೇ ತಥಾ ಯಾಯಾದ್ಬಹುನಾಗೋ ನರಾಧಿಪಃ ।
ರಥಾಶ್ವಬಹುಲೋ ಯಾಯಾಚ್ಛತ್ರುಂ ಸಮಪಥಸ್ಥಿತಂ ॥೨೩॥

ತಮಾಶ್ರಯಂತೋ ಬಹುಲಾಸ್ತಾಂಸ್ತು ರಾಜಾ ಪ್ರಪೂಜಯೇತ್ ।
ಖರೋಷ್ಟ್ರಬಹುಲೋ ರಾಜಾ ಶತ್ರುಬಂಧೇನ ಸಂಶ್ರಿತಃ ॥೨೪॥

---

೧೯-೨೦. ಕಾಲ್ಬಲವೂ ಆನೆಗಳೂ ವಿಶೇಷವಾಗಿರುವ ಸೈನ್ಯವನ್ನು ಮಳೆಗಾಲದಲ್ಲೂ, ತೇರುಗಳೂ ಕುದುರೆಗಳೂ ತುಂಬಿರುವ ದಂಡನ್ನು ಹೇಮಂತ ಅಥವಾ ಶಿಶಿರರ್ತುವಿನಲ್ಲೂ, ಹೇಸರಗತ್ತೆಗಳೂ ಒಂಟೆಗಳೂ ಅಧಿಕವಾಗಿರುವ ಪಡೆಯನ್ನು ವಸಂತ ಇಲ್ಲವೇ ಶರದೃತುವಿನಲ್ಲೂ ಒಯ್ಯಬೇಕು.

೨೧. ಶತ್ರುವು ಹಳ್ಳತಿಟ್ಟಾದ ಪ್ರದೇಶದಲ್ಲಿದ್ದರೆ ಕಾಲ್ಬಲವು ಅತ್ಯಧಿಕವಾಗಿರುವ ಸೈನ್ಯದೊಡನೆ ಅವನ ಮೇಲೆ ಏರಿ ಹೋಗಬೇಕು.

೨೨-೨೩. ಹೋಗಬೇಕಾದ ದೇಶವು ಮರಗಳಿಂದ ತುಂಬಿದ್ದರೂ, ಸ್ವಲ್ಪ ಮಟ್ಟಿಗೆ ಕೆಸರಿನಿಂದ ಕೂಡಿದ್ದರೂ ಅಧಿಕಸಂಖ್ಯೆಯಲ್ಲಿ ಆನೆಗಳನ್ನು ಕೊಂಡೊಯ್ಯಬೇಕು. ಶತ್ರುವು ಮಟ್ಟಸವಾದ ಹಾದಿಯಲ್ಲಿದ್ದರೆ ರಥಗಳೂ ಅಶ್ವಗಳೂ ವಿಶೇಷವಾಗಿ ಬೇಕಾಗುವುವು.

೨೪. ಶತ್ರುರಾಜನನ್ನು ಆಶ್ರಯಿಸಿಕೊಂಡಿರುವವರು ಹಲವರಿದ್ದಾರೆ. ರಾಜನು ಅವರೆಲ್ಲರನ್ನೂ ಗೌರವಿಸಬೇಕು. ದುರ್ಗವನ್ನು ಕಟ್ಟಿಕೊಂಡು ಒಳಗೆ ಅಡಗಿರುವ ಶತ್ರುವನ್ನು ವಶಪಡಿಸಿಕೊಳ್ಳಬೇಕಾದರೆ ಒಂಟೆಗಳೂ ಹೇಸರಗತ್ತೆಗಳೂ ವಿಶೇಷವಾಗಿರಬೇಕು.

ಬಂಧನಸ್ಥೋಽಭಿಯೋಜ್ಯೋಽರಿಸ್ತಥಾ ಪ್ರಾವೃಷಿ ಭೂಭುಜಾ ।
ಹಿಮಪಾತಯುತೇ ದೇಶೇ ಸ್ಥಿತಂ ಗ್ರೀಷ್ಮೇಽಭಿಯೋಜಯೇತ್ ॥೨೫॥

ಯವಸೇಂಧನಸಂಯುಕ್ತಃ ಕಾಲಃ ಪಾರ್ಥಿವ ಹೈಮನಃ ।
ಶರದ್ವಸಂತೌ ಧರ್ಮಜ್ಞ ಕಾಲೌ ಸಾಧಾರಣೌ ಸ್ಮೃತೌ ॥೨೬॥

ವಿಜ್ಞಾಯ ರಾಜಾ ದ್ವಿಜದೇಶಕಾಲೌ
ದೈವಂ ತ್ರಿಕಾಲಂ ಚ ತಥೈವ ಬುದ್ಧ್ವಾ ।
ಯಾಯಾತ್ಪರಂ ಕಾಲವಿದಾಂ ಮತೇನ
ಸಂಚಿಂತ್ಯ ಸಾರ್ಧಂ ದ್ವಿಜಮಂತ್ರವಿದ್ಭಿಃ ॥೨೭॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಯಾತ್ರಾನಿಮಿತ್ತಕಾಲಯೋಜ್ಯ
ಚಿಂತಾ ನಾಮ ಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಃ

---

೨೫. ದುರ್ಗದೊಳಗಿರುವ ಶತ್ರುವಿನ ಮೇಲೆ ರಾಜನು ಮಳೆಗಾಲದಲ್ಲಿ ದಂಡೆತ್ತಿ ಹೋಗಬೇಕು. ವಿಶೇಷವಾಗಿ ಮಂಜು ಬೀಳುವ ಕಡೆಯಲ್ಲಿರುವ ಹಗೆಯನ್ನು ಗ್ರೀಷ್ಮಕಾಲದಲ್ಲಿ ಮುತ್ತಬೇಕು.

೨೬. ರಾಜಧರ್ಮಜ್ಞನಾದ ಓ ರಾಜಾ, ಹೇಮಂತರ್ತುವು ತೃಣಕಾಷ್ಠಗಳಿಂದ ಸಮೃದ್ಧವಾಗಿರುವುದು. ಶರದೃತುವೂ ವಸಂತರ್ತುವೂ ಸಾಧಾರಣವಾದುವು

೨೭. ರಾಜನು ದೇಶಕಾಲಗಳನ್ನರಿತು, ಎಡೆಬಿಡದೆ ದೈವಬಲವನ್ನು ಪರೀಕ್ಷಿಸಿ ತಿಳಿದುಕೊಂಡು, ಬ್ರಾಹ್ಮಣರೊಡನೆಯೂ ರಾಜಮಂತ್ರಕುಶಲರೊಡನೆಯೂ ಆಲೋಚನೆಮಾಡಿ, ಜ್ಯೋತಿಷ್ಕರು ಹೇಳುವ ಸುಮುಹೂರ್ತದಲ್ಲಿ ಶತ್ರುವಿನ ಮೇಲೆ ದಂಡೆತ್ತಿಹೋಗಬೇಕು.

ಅಧ್ಯಾಯ ೨೪೦

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ರಾಜನು ಶತ್ರುವಿನ ಮೇಲೆ ದಂಡೆತ್ತಿಹೋಗುವುದಕ್ಕೆ ತಕ್ಕ ಕಾಲವಾವುದೆಂಬುದನ್ನು ವಿಚಾರಮಾಡಿದೆ.

ಸಾಧನಸಂಪತ್ತುಗಳು ತನಗೆ ಪರಿಪೂರ್ಣವಾಗಿವೆಯೆಂಬ ದೃಢವಾದ ನಂಬಿಕೆಯಿದ್ದಾಗ ಮಾತ್ರವೇ ರಾಜನು ದಂಡಯಾತ್ರೆಗೆ ಹೊರಡಬೇಕು. ಶತ್ರುವಿನ ದೌರ್ಬಲ್ಯವನ್ನೂ, ಅವನಿಗೆ ದೈವಸಹಾಯವು ಇಲ್ಲದಿರುವ ಅಂಶವನ್ನೂ ಆ ದೇಶದಲ್ಲಿ ನಡೆಯುವ ಉತ್ಪಾತಾದಿಗಳ ಮೂಲಕ ಅರಿತುಕೊಳ್ಳಬೇಕು. ದಂಡಯಾತ್ರೆಯ ಕಾಲದೇಶಗಳಿಗನುಗುಣವಾಗಿ ಸೈನ್ಯದ ಚತುರಂಗಗಳಲ್ಲಿ ಹೆಚ್ಚುಕಡಿಮೆಮಾಡಿಕೊಳ್ಳಬೇಕು. ಮಂತ್ರಕುಶಲರಾದ ಸಚಿವರೊಡನೆಯೂ, ಧರ್ಮಜ್ಞರಾದ ಬ್ರಾಹ್ಮಣರೊಡನೆಯೂ ಶುಭಾಶುಭಫಲವನ್ನರಿತ ಜ್ಯೋತಿಷ್ಕರೊಡನೆಯೂ ಆಲೋಚಿಸಿ ಶುಭಮುಹೂರ್ತದಲ್ಲಿ ಪ್ರಯಾಣಮಾಡಬೇಕು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಯಾತ್ರಾನಿಮಿತ್ತಕಾಲಯೋಜ್ಯಚಿಂತೆಯೆಂಬ ಇನ್ನೂರ ನಲವತ್ತನೆಯ ಅಧ್ಯಾಯವು ಮುಗಿದುದು

## ಅಥೈಕಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಃ

॥ ಮನುರುವಾಚ ॥

ಬ್ರೂಹಿ ಮೇ ತ್ವಂ ನಿಮಿತ್ತಾನಿ ಅಶುಭಾನಿ ಶುಭಾನಿ ಚ ।
ಸರ್ವಧರ್ಮಭೃತಾಂ ಶ್ರೇಷ್ಠ ತ್ವಂ ಹಿ ಸರ್ವವಿದುಚ್ಯಸೇ ॥ ೧ ॥

॥ ಮತ್ಸ್ಯ ಉವಾಚ ॥

ಅಂಗದಕ್ಷಿಣಭಾಗೇ ತು ಶಸ್ತಂ ಪ್ರಸ್ಫುರಣಂ ಭವೇತ್ ।
ಅಪ್ರಶಸ್ತಂ ತಥಾ ವಾಮೇ ಪೃಷ್ಠಸ್ಯ ಹೃದಯಸ್ಯ ಚ ॥ ೨ ॥

॥ ಮನುರುವಾಚ ॥

ಅಂಗಾನಾಂ ಸ್ಪಂದನಂ ಚೈವ ಶುಭಾಶುಭವಿಚೇಷ್ಟಿತಂ ।
ತನ್ಮೇ ವಿಸ್ತರತೋ ಬ್ರೂಹಿ ಯೇನ ಸ್ಯಾಂ ತದ್ವಿದೋ ಭುವಿ ॥ ೩ ॥

॥ ಮತ್ಸ್ಯ ಉವಾಚ ॥

ಪೃಥ್ವೀಲಾಭೋ ಭವೇನ್ಮೂರ್ಧ್ನಿ ಲಲಾಟೇ ರವಿನಂದನ ।
ಸ್ಥಾನಂ ವಿವೃದ್ಧಿಮಾಯಾತಿ ಭ್ರೂನಸೋಃ ಪ್ರಿಯಸಂಗಮಃ ॥ ೪ ॥

---

೧. ಮನುಚಕ್ರವರ್ತಿ ಹೇಳಿದನು.—ಧರ್ಮಜ್ಞರಲ್ಲೆಲ್ಲ ಅಗ್ರಗಣ್ಯನಾದ ಓ ದೇವಾ, ಅಶುಭವನ್ನೂ ಶುಭವನ್ನೂ ಸೂಚಿಸುವ ನಿಮಿತ್ತಗಳನ್ನು ಹೇಳು. ನೀನು ಸರ್ವಜ್ಞನೆನಿಸಿಕೊಂಡಿರುವೆ.

೨. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಶರೀರದ ಬಲಭಾಗದಲ್ಲಿ ಅದುರಿದರೆ ಶುಭ. ಎಡಗಡೆಯ ಅಂಗಗಳಲ್ಲಿಯೂ, ಬೆನ್ನು ಮತ್ತು ಹೃದಯದ ಎಡಗಡೆಯೂ ಅದುರಿದರೆ ಅಶುಭ.

೩. ಮನುಚಕ್ರವರ್ತಿ ಹೇಳಿದನು.—ಅಂಗಗಳ ಸ್ಫುರಣವನ್ನೂ ಅವುಗಳಿಂದಾಗುವ ಶುಭಾಶುಭ ಫಲಗಳನ್ನೂ ನನಗೆ ತಿಳಿಯುವಂತೆ ವಿವರಿಸಿಹೇಳು.

೪. ಮತ್ಸ್ಯರೂಪನಾದ ಭಗವಂತನು ಹೇಳಿದನು.—ತಲೆಯಲ್ಲಿ ಅದುರಿದರೆ ಭೂಲಾಭ, ಹಣೆಯಲ್ಲಿ ಸ್ಥಾನವೃದ್ಧಿ, ಹುಬ್ಬು ಮತ್ತು ಮೂಗುಗಳಲ್ಲಾದರೆ ಪ್ರಿಯಸಂಗಮ.

ಭೃತ್ಯಲಬ್ಧಿಶ್ಚಾಕ್ಷಿದೇಶೇ ದೃಗುಪಾಂತೇ ಧನಾಗಮಃ ।
ಉತ್ಕಂಠೋಪಗಮೋ ಮಧ್ಯೇ ದೃಷ್ಟಂ ರಾಜನ್ ವಿಚಕ್ಷಣೈಃ ॥ ೫ ॥

ದೃಗ್ಬಂಧನೇ ಸಂಗರೇ ಚ ಜಯಂ ಶೀಘ್ರಮವಾಪ್ನುಯಾತ್ ।
ಯೋಷಿದ್ಭೋಗೋಽಪಾಂಗದೇಶೇ ಶ್ರವಣಾಂತೇ ಪ್ರಿಯಶ್ರುತಿಃ ॥ ೬ ॥

ನಾಸಿಕಾಯಾಂ ಪ್ರೀತಿಸೌಖ್ಯಂ ಪ್ರಜಾಪ್ತಿರಧರೋಷ್ಠಜೇ ।
ಕಂಠೇ ತು ಭೋಗಲಾಭಃ ಸ್ಯಾದ್ಭೋಗವೃದ್ಧಿರಥಾಂಸಯೋಃ ॥ ೭ ॥

ಸುಹೃತ್ಸ್ನೇಹಶ್ಚ ಬಾಹುಭ್ಯಾಂ ಹಸ್ತೇ ಚೈವ ಧನಾಗಮಃ ।
ಪೃಷ್ಠೇ ಪರಾಜಯಃ ಸದ್ಯೋ ಜಯೋ ವಕ್ಷಃಸ್ಥಲೇ ಭವೇತ್ ॥ ೮ ॥

ಕುಕ್ಷಿಭ್ಯಾಂ ಪ್ರೀತಿರುದ್ದಿಷ್ಟಾ ಸ್ತ್ರಿಯಾಃ ಪ್ರಜನನಂ ಸ್ತನೇ ।
ಸ್ಥಾನಭ್ರಂಶೋ ನಾಭಿದೇಶೇ ಅಂತ್ರೇ ಚೈವ ಧನಾಗಮಃ ॥ ೯ ॥

---

೫. ನರೇಂದ್ರಾ, ಕಣ್ಣಿನಲ್ಲಿ ಭೃತ್ಯಲಾಭ, ಕಡೆಗಣ್ಣಿನ ಬಳಿಯಲ್ಲಿ ಧನಪ್ರಾಪ್ತಿ, ಕಣ್ಣಿನ ಮಧ್ಯದಲ್ಲಾದರೆ ವ್ಯಾಕುಲತೆಯೆಂದು ಪ್ರಾಜ್ಞರು ಸ್ಪಂದನಫಲವನ್ನು ಹೇಳಿರುವರು.

೬. ಕಣ್ಣು ಕುಣಿಕೆಯಲ್ಲಿ ಸ್ಫುರಣವಾದರೆ ಯುದ್ಧಜಯವು ಶೀಘ್ರವಾಗಿ ಲಭಿಸುವುದು. ಕಡೆಗಣ್ಣಿನಲ್ಲಿ ಸ್ತ್ರೀಭೋಗವೂ, ತುದಿಗಿವಿಯಲ್ಲಿ ಪ್ರಿಯವಾರ್ತೆಯೂ ಪ್ರಾಪ್ತವಾಗುವುವು.

೭. ಮೂಗಿನಲ್ಲಿ ಪ್ರೀತಿಸೌಖ್ಯ, ಕೆಳದುಟಿಯಲ್ಲಿ ಪ್ರಜಾಲಾಭ, ಕಂಠದಲ್ಲಿ ಭೋಗಲಾಭ, ಹೆಗಲುಗಳಲ್ಲಿ ಭೋಗವೃದ್ಧಿ.

೮. ತೋಳುಗಳಲ್ಲಿ ಅದುರಿದರೆ ಮಿತ್ರಸ್ನೇಹ, ಕೈಯಲ್ಲಿ ಧನಪ್ರಾಪ್ತಿ, ಬೆನ್ನಿನಲ್ಲಿ ಪರಾಜಯ, ಎದೆಯಲ್ಲಿ ತತ್‌ಕ್ಷಣವೇ ಜಯ.

೯. ಕೆಳಗಿನ ಮತ್ತು ಮೇಲಿನ ಹೊಟ್ಟೆಗಳಲ್ಲಿ ಪ್ರೀತಿಯೂ, ಸ್ತ್ರೀಯ ಸ್ತನದಲ್ಲಿ ಸಂತಾನಲಾಭವೂ, ನಾಭಿದೇಶದಲ್ಲಿ ಸ್ಥಾನನಾಶವೂ, ಕರುಳಿನ ಬಳಿಯಲ್ಲಿ ಅದುರಿದರೆ ಧನಲಾಭವೂ ಫಲವೆಂದು ತಿಳಿಯಬೇಕು.

**ಜಾನುಸಂಧೌ ಪರೈಃ ಸಂಧಿರ್ಬಲವದ್ಭಿರ್ಭವೇನ್ನೃಪ ।**
**ದೇಶೈಕದೇಶನಾಶೋಽಥ ಜಂಘಾಭ್ಯಾಂ ರವಿನಂದನ ॥೧೦॥**

**ಉತ್ತಮಂ ಸ್ಥಾನಮಾಪ್ನೋತಿ ಪದ್ಭ್ಯಾಂ ಪ್ರಸ್ಫುರಣಾನ್ನೃಪ ।**
**ಸಲಾಭಂ ಪಾದಗಮನಂ ಭವೇತ್ಪಾದತಲೇ ನೃಪ ॥೧೧॥**

**ಲಾಂಛನಂ ಪಿಟಕಂ ಚೈವ ಜ್ಞೇಯಂ ಸ್ಫುರಣವತ್ತಥಾ ।**
**ವಿಪರ್ಯಯೇಣ ವಿಹಿತಃ ಸರ್ವಃ ಸ್ತ್ರೀಣಾಂ ಫಲಾಗಮಃ ॥೧೨॥**

**ಅಪ್ರಶಸ್ತೇ ತಥಾ ವಾಮೇ ತ್ವಪ್ರಶಸ್ತಂ ವಿಶೇಷತಃ ।**
**ದಕ್ಷಿಣೇಽಪಿ ಪ್ರಶಸ್ತೇಂಗೇ ಪ್ರಶಸ್ತಂ ಸ್ಯಾದ್ವಿಶೇಷತಃ ॥೧೩॥**

---

೧೦. ಎಲೈ ಸೂರ್ಯನಂದನಾ, ಮೊಳಕಾಲಿನ ಕೀಲಿನಲ್ಲಿ ಅದುರಿದರೆ ಬಲಿಷ್ಠರಾದ ಶತ್ರುಗಳನ್ನು ಸಂಧಿಸಬೇಕಾಗುವುದು. ಮೊಣಕಾಲುಗಳಲ್ಲಾದರೆ ದೇಶದ ಒಂದು ಭಾಗವು ನಾಶವಾಗುವುದು.

೧೧. ಕಾಲುಗಳಲ್ಲಿ ಸ್ಫುರಣವಾದರೆ ಉತ್ತಮಸ್ಥಾನವು ದೊರಕುವುದು. ರಾಜಾ, ಅಂಗಾಲಿನಲ್ಲಿ ಆದರೆ ಪ್ರಯಾಣವೂ ಅದರಿಂದ ಲಾಭವೂ ಉಂಟಾಗುವುವು

೧೨. ಗುಹ್ಯಾವಯವದಲ್ಲಿ ಸ್ಪಂದನವಾದರೆ ಬೊಕ್ಕೆಯೇಳುವುದೆಂದು ತಿಳಿಯಬೇಕು. ಮೇಲೆ ಹೇಳಿದ ಫಲವೆಲ್ಲ ಸ್ತ್ರೀಯರ ವಿಷಯದಲ್ಲಿ ವ್ಯತ್ಯಾಸವಾಗುವುದು. ಎಂದರೆ ಎಡಭಾಗವು ಅವರಿಗೆ ಫಲಪ್ರದವೆಂದು ಅರಿಯಬೇಕು.

೧೩. ಎಡಗಡೆಯ ಅಂಗವು ಅಪ್ರಶಸ್ತವಾಗಿದ್ದರೆ ಅದರ ಫಲವು ಸಹ ಅತ್ಯಂತ ಅಪ್ರಶಸ್ತವಾಗುತ್ತದೆ. ಬಲಗಡೆಯ ಅವಯವವು ಉತ್ತಮವಾಗಿದ್ದರೆ ಅದರ ಫಲವು ಮತ್ತಷ್ಟು ಉತ್ತಮವಾಗುವುದು.

**ಅತೋಽನ್ಯಥಾ ಸದ್ದ್ವಿಜಜಲ್ಪನಾತ್ತು**
**ಫಲಸ್ಯ ಶಸ್ತಸ್ಯ ಚ ನಿಂದಿತಸ್ಯ ।**
**ಅನಿಷ್ಟಚಿಹ್ನೋಪಗಮೋ ದ್ವಿಜಾನಾಂ**
**ಕಾರ್ಯಂ ಸುವರ್ಣೇನ ತು ತರ್ಪಣಂ ಸ್ಯಾತ್ ॥೧೪॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಯಾತ್ರಾನಿಮಿತ್ತಕದೇಹ ಸ್ಪಂದನಂ ನಾಮೈಕಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಃ**

---

೧೪. ಇಲ್ಲಿ ಹೇಳದೆ ಬಿಟ್ಟ ಅವಯುವಗಳ ಸ್ಫುರಣದ ಶುಭಾಶುಭಫಲವನ್ನು ಶಾಸ್ತ್ರಜ್ಞರಾದ ಬ್ರಾಹ್ಮಣರ ವಾಕ್ಯದಿಂದ ತಿಳಿದುಕೊಳ್ಳಬೇಕು. ಅನಿಷ್ಟಫಲವು ಸೂಚಿತವಾದರೆ ಬ್ರಾಹ್ಮಣರನ್ನು ಸುವರ್ಣದಾನದಿಂದ ತೃಪ್ತಿಪಡಿಸಬೇಕು.

## ಅಧ್ಯಾಯದ ಸಾರಾಂಶ

ಶರೀರದ ಬೇರೆಬೇರೆ ಅವಯುವಗಳು ಅದುರಿದರೆ ಅದರಿಂದ ಸೂಚಿತವಾಗುವ ಶುಭಾಶುಭ ಫಲಗಳನ್ನು ಈ ಅಧ್ಯಾಯದಲ್ಲಿ ಹೇಳಿದೆ.

ಪುರುಷರಿಗೆ ಬಲಭಾಗವೂ, ಸ್ತ್ರೀಯರಿಗೆ ಎಡಭಾಗವೂ ಫಲಪ್ರದವಾದುವು. ಅನಿಷ್ಟಫಲವು ಸೂಚಿತವಾದರೆ ಬ್ರಾಹ್ಮಣರಿಗೆ ದಾನದಕ್ಷಿಣೆಗಳನ್ನು ಕೊಡಬೇಕು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಯಾತ್ರಾನಿಮಿತ್ತಕ ದೇಹಸ್ಪಂದನವೆಂಬ ಇನ್ನೂರ ನಲವತ್ತೊಂದನೆಯ ಅಧ್ಯಾಯವು ಮುಗಿದುದು

## ಅಥ ದ್ವಿಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಃ

॥ ಮನುರುವಾಚ ॥

ಸ್ವಪ್ನಾಖ್ಯಾನಂ ಕಥಂ ದೇವ ಗಮನೇ ಪ್ರತ್ಯುಪಸ್ಥಿತೇ ।
ದೃಶ್ಯಂತೇ ವಿವಿಧಾಕಾರಾಃ ಕಥಂ ತೇಷಾಂ ಫಲಂ ಭವೇತ್ ॥ ೧ ॥

॥ ಮತ್ಸ್ಯ ಉವಾಚ ॥

ಇದಾನೀಂ ಕಥಯಿಷ್ಯಾಮಿ ನಿಮಿತ್ತಂ ಸ್ವಪ್ನದರ್ಶನೇ ।
ನಾಭಿಂ ವಿನಾಽನ್ಯಗಾತ್ರೇಷು ತೃಣವೃಕ್ಷಸಮುದ್ಭವಃ ॥ ೨ ॥

ಚೂರ್ಣನಂ ಮೂರ್ಧ್ನಿ ಕಾಂಸ್ಯಾನಾಂ ಮುಂಡನಂ ನಗ್ನತಾ ತಥಾ ।
ಮಲಿನಾಂಬರಧಾರಿತ್ವಮಭ್ಯಂಗಃ ಪಂಕದಿಗ್ಧತಾ ॥ ೩ ॥

ಉಚ್ಚಾತ್ಪ್ರಪತನಂ ಚೈವ ದೋಲಾರೋಹಣಮೇವ ಚ ।
ಅರ್ಜನಂ ಪಕ್ವಮಾಂಸಾನಾಂ ಹಯಾನಾಮಪಿ ಮಾರಣಂ ॥ ೪ ॥

---

೧. ಮನುಚಕ್ರವರ್ತಿ ಹೇಳಿದನು.—ದೇವಾ, ಇನ್ನು ಸ್ವಪ್ನಗಳ ವೃತ್ತಾಂತವೇನು? ಅರಸನು ದಂಡಯಾತ್ರೆಗೆ ಹೊರಟಿರುವಾಗ ನಾನಾವಿಧವಾದ ಕನಸುಗಳು ಅವನಿಗೆ ಬೀಳುವುವಷ್ಟೆ. ಅವುಗಳಿಗೆ ಫಲವೇನು?

೨-೧೪. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಸ್ವಪ್ನದರ್ಶನದ ಶುಭಾಶುಭ ಫಲವನ್ನು ಹೇಳುವೆನು ಕೇಳು. ಮುಂದೆ ಹೇಳುವ ಸ್ವಪ್ನಗಳು ದುಷ್ಟ ಫಲವನ್ನು ಕೊಡತಕ್ಕುವೆಂದು ತಿಳಿಯಬೇಕು. ಹೊಕ್ಕುಳನ್ನು ಬಿಟ್ಟು ಉಳಿದ ಅಂಗಗಳಲ್ಲಿ ಹುಲ್ಲೂ ಗಿಡಮರಗಳೂ ಬೆಳೆಯುವುದು, ತಲೆಯಮೇಲೆ ಕಂಚು ಬಿದ್ದು ಒಡೆಯುವುದು, ತಲೆಬೋಳಿಸಿಕೊಳ್ಳುವುದು, ಬೆತ್ತಲೆಯಿರುವುದು, ಕೊಳೆಬಟ್ಟೆಯನ್ನು ಹಾಕಿಕೊಂಡಿರುವುದು, ಎಣ್ಣೆಹಚ್ಚಿಕೊಳ್ಳುವುದು, ಕೆಸರನ್ನು ಬಳಿದು

ರಕ್ತಪುಷ್ಪದ್ರುಮಾಣಾಂ ಚ ಚುಂಬನಂ ಸ್ಯಾತ್ತಥೈವ ಚ ।
ವರಾಹರ್ಷಖರೋಷ್ಟ್ರಾಣಾಂ ತಥಾ ಚಾರೋಹಣಕ್ರಿಯಾ ॥ ೫ ॥

ಭಕ್ಷಣಂ ಪಕ್ಷಿಮತ್ಸ್ಯಾನಾಂ ತೈಲಸ್ಯ ಕೃಸರಸ್ಯ ಚ ।
ನರ್ತನಂ ಹಸನಂ ಚೈವ ವಿವಾಹೋ ಗೀತಮೇವ ಚ ॥ ೬ ॥

ತಂತ್ರೀವಾದ್ಯವಿಹೀನಾನಾಂ ವಾದ್ಯಾನಾಮಪಿ ವಾದನಂ ।
ಸ್ರೋತೋಽವಗಾಹಗಮನಂ ಸ್ನಾನಂ ಗೋಮಯವಾರಿಣಾ ॥ ೭ ॥

ಪಂಕೋದಕೇನ ಚ ತಥಾ ಮಹೀತೋಯೇನ ಚಾಪ್ಯಥ ।
ಮಾತುಃ ಪ್ರವೇಶೋ ಜಠರೇ ಚಿತಾರೋಹಣಮೇವ ಚ ॥ ೮ ॥

ಶಕ್ರಧ್ವಜಾಭಿಪತನಂ ಪತನಂ ಶಶಿಸೂರ್ಯಯೋಃ ।
ದಿವ್ಯಾಂತರಿಕ್ಷಭೌಮಾನಾಮುತ್ಪಾತಾನಾಂ ಚ ದರ್ಶನಂ ॥ ೯ ॥

ದೇವದ್ವಿಜಾತಿಭೂಪಾಲಗುರೂಣಾಂ ಕ್ರೋಧ ಏವ ಚ ।
ಆಲಿಂಗನಂ ಕುಮಾರೀಣಾಂ ಪುರುಷಾಣಾಂ ಚ ಮೈಥುನಂ ॥೧೦॥

---

ಕೊಳ್ಳುವುದು, ಮೇಲಿನಿಂದ ಬೀಳುವುದು, ಉಯ್ಯಾಲೆಯನ್ನೇರುವುದು, ಬೇಯಿಸಿದ ಮಾಂಸವನ್ನು ಸಂಪಾದಿಸಿ ತರುವುದು, ಕುಮರಿಗಳನ್ನು ಕೊಲ್ಲುವುದು, ಕೆಂಪು ಹೂಮರಗಳನ್ನು ಚುಂಬಿಸುವುದು, ಹಂದಿ, ಒಂಟೆ, ಕರಡಿ ಮತ್ತು ಕತ್ತೆಗಳಮೇಲೆ ಹತ್ತಿಕುಳಿತುಕೊಳ್ಳುವುದು, ಕುಣಿಯುವುದು, ನಗುವುದು, ಮದುವೆಯಾಗುವುದು, ಹಾಡುವುದು, ತಂತಿಯಿಲ್ಲದ ವಾದ್ಯಗಳನ್ನು ಬಾಜಿಸುವುದು, ಜಲಪ್ರವಾಹದಲ್ಲಿಳಿದು ನಡೆಯುವುದು, ಸಗಣಿಯ ನೀರಿನಲ್ಲಿ, ಕೆಸರು ನೀರಿನಲ್ಲಿ ಮತ್ತು ನಿಂತಿರುವ ನೀರಿನಲ್ಲಿ ಸ್ನಾನಮಾಡುವುದು, ತಾಯಿಯ ಗರ್ಭದಲ್ಲಿ ಪ್ರವೇಶಿಸುವುದು, ಚಿತೆಯನ್ನೇರುವುದು, ಕಾಮನಬಿಲ್ಲೂ ಚಂದ್ರಸೂರ್ಯರೂ ನೆಲಕ್ಕೆ ಬೀಳುವುದು, ದಿವ್ಯ, ಅಂತರಿಕ್ಷ ಮತ್ತು ಭೌಮಗಳೆಂಬ ಉತ್ಪಾತಗಳಾಗುವುದು, ದೇವತೆಗಳು, ಬ್ರಾಹ್ಮಣರು, ರಾಜರು, ಮತ್ತು ಗುರುಗಳು ಕೋಪಿಸಿಕೊಳ್ಳುವುದು, ಕುಮಾರಿ

ಹಾನಿಶ್ಚೈವ ಸ್ವಗಾತ್ರಾಣಾಂ ವಿರೇಕವಮನಕ್ರಿಯಾ ।
ದಕ್ಷಿಣಾಶಾಭಿಗಮನಂ ವ್ಯಾಧಿನಾಭಿಭವಸ್ತಥಾ ॥೧೧॥

ಫಲಾಪಹಾನಿಶ್ಚ ತಥಾ ಪುಷ್ಪಹಾನಿಸ್ತಥೈವ ಚ ।
ಗೃಹಾಣಾಂ ಚೈವ ಪಾತಶ್ಚ ಗೃಹಸಮ್ಮಾರ್ಜನಂ ತಥಾ ॥೧೨॥

ಕ್ರೀಡಾ ಪಿಶಾಚಕ್ರವ್ಯಾದವಾನರರ್ಕ್ಷನರೈರಪಿ ।
ಪರಾದಭಿಭವಶ್ಚೈವ ತಸ್ಮಾಚ್ಚ ವ್ಯಸನೋದ್ಭವಃ ॥೧೩॥

ಕಾಷಾಯವಸ್ತ್ರಧಾರಿತ್ವಂ ತದ್ವತ್ಸ್ತ್ರೀಕ್ರೀಡನಂ ತಥಾ ।
ಸ್ನೇಹಪಾನಾವಗಾಹೌ ಚ ರಕ್ತಮಾಲ್ಯಾನುಲೇಪನಂ ॥೧೪॥

ಏವಮಾದೀನಿ ಚಾನ್ಯಾನಿ ದುಃಸ್ವಪ್ನಾನಿ ವಿನಿರ್ದಿಶೇತ್ ।
ಏಷಾಂ ಸಂಕಥನಂ ಧನ್ಯಂ ಭೂಯಃ ಪ್ರಸ್ವಾಪನಂ ತಥಾ ॥೧೫॥

---

ಯರನ್ನು ಆಲಂಗಿಸುವುದು, ಪುರುಷಮೈಥುನ, ತನ್ನ ಅಂಗಗಳೇ ಕಳಚಿ ಬಿದ್ದು ಹೋಗುವುದು, ವಾಂತಿಯೂ ಪ್ರವೃತ್ತಿಯೂ ಆಗುವುದು, ದಕ್ಷಿಣದಿಕ್ಕಿಗೆ ಹೋಗುವುದು, ವ್ಯಾಧಿಯಿಂದ ನರಳುವುದು, ಹೂಹಣ್ಣುಗಳು ಮರದಿಂದ ಮಾಯವಾಗುವುದು, ಮನೆಗಳು ಬೀಳುವುದು, ಮನೆಯನ್ನು ಗುಡಿಸಿ ಸಾರಿಸುವುದು, ಪಿಶಾಚಗಳು, ರಾಕ್ಷಸರು, ಕಪಿಗಳು, ಕರಡಿಗಳು ಮತ್ತು ಮನುಷ್ಯರು ಆಟವಾಡುವುದು, ಶತ್ರುವಿನ ತಿರಸ್ಕಾರದಿಂದ ವ್ಯಸನಪಡುವುದು, ಕಾಷಾಯವಸ್ತ್ರವನ್ನು ಧರಿಸುವುದು, ಸ್ತ್ರೀಯರೊಡನೆ ಕ್ರೀಡಿಸುವುದು, ಸ್ನೇಹಮಾಡುವುದು, ಕುಡಿಯುವುದು ಮತ್ತು ಸ್ನಾನಮಾಡುವುದು, ಕೆಂಪು ಬಣ್ಣದ ಹೂವನ್ನೂ ಗಂಧವನ್ನೂ ಧರಿಸುವುದು ಇಂತಹವುಗಳೆಲ್ಲ ದುಸ್ಸ್ವಪ್ನಗಳು.

೧೫-೧೬. ತಾನು ಕಂಡ ದುಃಸ್ವಪ್ನವನ್ನು ಇತರರಿಗೆ ಹೇಳಿ ಮತ್ತೆ ಮಲಗುವುದು ಒಳ್ಳೆಯದು. ಕಲ್ಕದಿಂದ ಸ್ನಾನಮಾಡುವುದು, ತಿಲಹೋಮಮಾಡುವುದು,

ಕಲ್ಕಸ್ನಾನಂ ತಿಲೈರ್ಹೋಮೋ ಬ್ರಾಹ್ಮಣಾನಾಂ ಚ ಪೂಜನಂ ।
ಸ್ತುತಿಶ್ಚ ವಾಸುದೇವಸ್ಯ ತಥಾ ತಸ್ಯೈವ ಪೂಜನಂ ॥೧೬॥

ನಾಗೇಂದ್ರಮೋಕ್ಷಶ್ರವಣಂ ಜ್ಞೇಯಂ ದುಃಸ್ವಪ್ನನಾಶನಂ ।
ಸ್ವಪ್ನಾಸ್ತು ಪ್ರಥಮೇ ಯಾಮೇ ಸಂವತ್ಸರವಿಪಾಕಿನಃ ॥೧೭॥

ಷಡ್ಭಿರ್ಮಾಸೈರ್ದ್ವಿತೀಯೇ ತು ತ್ರಿಭಿರ್ಮಾಸೈಸ್ತ್ರೃತೀಯಕೇ ।
ಚತುರ್ಥೇ ಮಾಸಮಾತ್ರೇಣ ಪಶ್ಯತೋ ನಾತ್ರ ಸಂಶಯಃ ॥೧೮॥

ಅರುಣೋದಯವೇಲಾಯಾಂ ದಶಾಹೇನ ಫಲಂ ಭವೇತ್ ।
ಏಕಸ್ಯಾಂ ಯದಿ ವಾ ರಾತ್ರೌ ಶುಭಂ ವಾ ಯದಿ ವಾಽಶುಭಂ ॥೧೯॥

ಪಶ್ಚಾದ್ದೃಷ್ಟಸ್ತು ಯಸ್ತತ್ರ ತಸ್ಯ ಪಾಕಂ ವಿನಿರ್ದಿಶೇತ್ ।
ತಸ್ಮಾಚ್ಛೋಭನಕೇ ಸ್ವಪ್ನೇ ಪಶ್ಚಾತ್ಸ್ವಪ್ನೋ ನ ಶಸ್ಯತೇ ॥೨೦॥

---

ಬ್ರಾಹ್ಮಣರನ್ನು ಪೂಜಿಸುವುದು, ಗಜೇಂದ್ರಮೋಕ್ಷದ ವೃತ್ತಾಂತವನ್ನು ಕೇಳುವುದು ಇವೆಲ್ಲವೂ ದುಃಸ್ವಪ್ನದೋಷದ ಪರಿಹಾರಕ್ಕೆ ಮಾರ್ಗಗಳು.

೧೭-೧೮. ರಾತ್ರಿಯ ಮೊದಲನೇ ಜಾವದ ಕನಸುಗಳು ಫಲಕೊಡಬೇಕಾದರೆ ಒಂದು ವರ್ಷ ಬೇಕು. ಎರಡನೆಯ ಜಾವದವು ಆರುತಿಂಗಳಲ್ಲೂ, ಮೂರನೆಯ ಜಾವದವು ಮೂರುತಿಂಗಳಲ್ಲೂ ಫಲಕೊಡುವುವು. ನಾಲ್ಕನೆಯ ಜಾವದ ಕನಸುಗಳು ಕಂಡ ಒಂದು ತಿಂಗಳೊಳಗಾಗಿ ಫಲಿಸುವುವು. ಸಂದೇಹವಿಲ್ಲ.

೧೯-೨೦. ಅರುಣೋದಯದ ಸಮಯದಲ್ಲಿ ಕಂಡ ಕನಸಿಗೆ ಹತ್ತು ದಿನಗಳಲ್ಲೇ ಫಲವುಂಟಾಗುತ್ತದೆ. ಒಂದು ರಾತ್ರಿಯಲ್ಲಿ ಶುಭಾಶುಭ ಸ್ವಪ್ನಗಳೆರಡೂ ಆದರೆ ಕೊನೆಯದೇ ತನ್ನ ಫಲವನ್ನು ಕೊಡುತ್ತದೆ. ಆದಕಾರಣ ಒಳ್ಳೆಯಕನಸನ್ನು ಕಂಡಬಳಿಕ ನಿದ್ರೆಮಾಡುವುದು ಸರಿಯಲ್ಲ.

ಶೈಲಪ್ರಾಸಾದನಾಗಾಶ್ವ ವೃಷಭಾರೋಹಣಂ ಹಿತಂ ।
ದ್ರುಮಾಣಾಂ ಶ್ವೇತಪುಷ್ಪಾಣಾಂ ಗಮನೇ ಚ ತಥಾ ದ್ವಿಜ ॥೨೧॥

ದ್ರುಮತೃಣೋದ್ಭವೋ ನಾಭೌ ತಥೈವ ಬಹುಬಾಹುತಾ ।
ತಥೈವ ಬಹುಶೀರ್ಷತ್ವಂ ಪಲಿತೋದ್ಭವ ಏವ ಚ ॥೨೨॥

ಸುಶುಕ್ಲಮಾಲ್ಯಧಾರಿತ್ವಂ ಸುಶುಕ್ಲಾಂಬರಧಾರಿತಾ ।
ಚಂದ್ರಾರ್ಕತಾರಾಗ್ರಹಣಂ ಪರಿಮಾರ್ಜನಮೇವ ಚ ॥೨೩॥

ಶಕ್ರಧ್ವಜಾಲಿಂಗನಂ ಚ ತದುಚ್ಛ್ರಾಯಕ್ರಿಯಾ ತಥಾ ।
ಭೂಮ್ಯಂಬುಧೀನಾಂ ಗ್ರಸನಂ ಶತ್ರೂಣಾಂ ಚ ವಧಕ್ರಿಯಾ ॥೨೪॥

ಜಯೋ ವಿವಾದೇ ದ್ಯೂತೇ ಚ ಸಂಗ್ರಾಮೇ ಚ ತಥಾ ದ್ವಿಜ ।
ಭಕ್ಷಣಂ ಚಾರ್ದ್ರಮಾಂಸಾನಾಂ ಮತ್ಸ್ಯಾನಾಂ ಪಾಯಸಸ್ಯ ಚ ॥೨೫॥

ದರ್ಶನಂ ರುಧಿರಸ್ಯಾಪಿ ಸ್ನಾನಂ ವಾ ರುಧಿರೇಣ ಚ ।
ಸುರಾರುಧಿರಮದ್ಯಾನಾಂ ಪಾನಂ ಕ್ಷೀರಸ್ಯ ಚಾಥ ವಾ ॥೨೬॥

---

೨೧-೨೨. ಬೆಟ್ಟ, ಉಪ್ಪರಿಗೆ, ಆನೆ, ಕುದುರೆ ಮತ್ತು ಎತ್ತುಗಳನ್ನು ಏರುವುದು, ಬಿಳಿಯ ಹೂ ಬಿಡುವ ಮರಗಳ ಬಳಿಗೆ ಹೋಗುವುದು, ಹೊಕ್ಕಳಿನಲ್ಲಿ ಹುಲ್ಲೂ ಗಿಡಮರಗಳೂ ಬೆಳೆಯುವುದು, ಹಲವು ತೋಳುಗಳೂ ತಲೆಗಳೂ ಮೂಡುವುದು, ನರೆತಲೆ ದೋರುವುದು ಇವೆಲ್ಲವೂ ಶುಭಕರವಾದ ಸ್ವಪ್ನಗಳು.

೨೩-೨೮. ಅಚ್ಚ ಬಿಳಿಯ ಹೂವನ್ನೂ ವಸ್ತ್ರವನ್ನೂ ಧರಿಸುವುದು, ಚಂದ್ರ ಸೂರ್ಯರನ್ನೂ ನಕ್ಷತ್ರಗಳನ್ನೂ ಕೈಯಿಂದ ಹಿಡಿದು ಸವರುವುದು, ಕಾಮನ ಬಿಲ್ಲನ್ನು ತಬ್ಬಿಕೊಳ್ಳುವುದು, ಅದನ್ನು ಎತ್ತುವುದಕ್ಕೆ ಪ್ರಯತ್ನಿಸುವುದು, ಭೂಮಿಯನ್ನೂ ಸಮುದ್ರಗಳನ್ನೂ ನುಂಗುವುದು, ಶತ್ರುಗಳನ್ನು ಕೊಲ್ಲುವುದು, ವಾದದಲ್ಲಿಯೂ ಜೂಜಿನಲ್ಲಿಯೂ ಯುದ್ಧದಲ್ಲಿಯೂ ಗೆಲ್ಲುವುದು, ಹಸಿಯಮಾಂಸ, ಮತ್ಸ್ಯ, ಪಾಯಸ ಇವುಗಳನ್ನು ತಿನ್ನುವುದು, ರಕ್ತವನ್ನು ನೋಡುವುದು, ಅದರಲ್ಲಿ ಸ್ನಾನ ಮಾಡುವುದು, ರಕ್ತವನ್ನೂ ಮದ್ಯವನ್ನೂ ಕ್ಷೀರವನ್ನೂ ಪಾನಮಾಡುವುದು, ಕರುಳು

ಅಂತ್ರೈರ್ವಾ ವೇಷ್ಟನಂ ಭೂಮೌ ನಿರ್ಮಲಂ ಗಗನಂ ತಥಾ ।
ಮುಖೇನ ದೋಹನಂ ಶಸ್ತಂ ಮಹಿಷೀಣಾಂ ತಥಾ ಗವಾಂ । ||೨೭||

ಸಿಂಹೀನಾಂ ಹಸ್ತಿನೀನಾಂ ಚ ವೆಡವಾನಾಂ ತಥೈವ ಚ ।
ಪ್ರಸಾದೋ ದೇವವಿಪ್ರೇಭ್ಯೋ ಗುರುಭ್ಯಶ್ಚ ತಥಾ ಶುಭಃ ||೨೮||

ಅಂಭಸಾ ತ್ವಭಿಷೇಕಸ್ತು ಗವಾಂ ಶೃಂಗಾಶ್ರಿತೇನ ವಾ ।
ಚಂದ್ರಾದ್ಭ್ರಷ್ಟೇನ ವಾ ರಾಜಞ್ಜ್ಞೇಯೋ ರಾಜ್ಯಪ್ರದೋ ಹಿ ಸಃ ||೨೯||

ರಾಜ್ಯಾಭಿಷೇಕಶ್ಚ ತಥಾ ಛೇದನಂ ಶಿರಸಸ್ತಥಾ ।
ಮರಣಂ ವಹ್ನಿದಾಹಶ್ಚ ವಹ್ನಿದಾಹೋ ಗೃಹಾದಿಷು ||೩೦||

ಲಬ್ಧಿಶ್ಚ ರಾಜ್ಯಲಿಂಗಾನಾಂ ತಂತ್ರೀವಾದ್ಯಾಭಿವಾದನಂ ।
ತಥೋದಕಾನಾಂ ತರಣಂ ತಥಾ ವಿಷಮಲಂಘನಂ ||೩೧||

---

ಗಳನ್ನು ಮೈಗೆ ಸುತ್ತಿಕೊಂಡು ನೆಲದಲ್ಲಿ ಹೊರಳಾಡುವುದು, ಆಕಾಶವು ನಿರ್ಮಲವಾಗುವುದು, ಎಮ್ಮೆ, ಹಸು, ಸಿಂಹ ಆನೆ ಮತ್ತು ಕುದುರೆಗಳ ಕೆಚ್ಚಲಿಗೆ ಬಾಯಿಟ್ಟು ಹಾಲುಕುಡಿಯುವುದು, ದೇವತೆಗಳಿಂದಲೂ, ಬ್ರಾಹ್ಮಣರಿಂದಲೂ, ಗುರುಗಳಿಂದಲೂ ಅನುಗ್ರಹವನ್ನು ಪಡೆಯುವುದು ಇವೆಲ್ಲವೂ ಶುಭಸ್ವಪ್ನಗಳು.

೨೯. ರಾಜಾ, ಹಸುವಿನ ಕೊಂಬಿನಿಂದ ಅಥವಾ ಚಂದ್ರಮಂಡಲದಿಂದ ಸುರಿಯುತ್ತಿರುವ ನೀರಿನಲ್ಲಿ ಸ್ನಾನಮಾಡಿದಂತೆ ಕನಸುಕಂಡರೆ ರಾಜ್ಯಲಾಭವಾಗುವುದು.

೩೦-೩೨. ರಾಜ್ಯದಲ್ಲಿ ಅಭಿಷೇಕವಾಗುವುದು, ತಲೆ ಕತ್ತರಿಸಿಹೋಗುವುದು, ಮನೆ ಮುಂತಾದುವುಗಳಿಗೆ ಬೆಂಕಿ ಬೀಳುವುದು, ಛತ್ರಿ, ಚಾಮರ ಮುಂತಾದ ಪ್ರಭುಲಾಂಛನಗಳು ದೊರೆಯುವುದು, ತಂತಿಯವಾದ್ಯವನ್ನು ಬಾಜಿಸುವುದು, ನೀರನ್ನು ದಾಟುವುದು, ಹಳ್ಳವನ್ನು ಹಾರುವುದು, ಆನೆ, ಕುದುರೆ ಮತ್ತು ಹಸುಗಳು

ಹಸ್ತಿನೀವಡವಾನಾಂ ಚ ಗವಾಂ ಚ ಪ್ರಸವೋ ಗೃಹೇ ।
ಆರೋಹಣಮಥಾಶ್ವಾನಾಂ ರೋದನಂ ಚ ತಥಾಶುಭಂ ॥೩೨॥

ವರಸ್ತ್ರೀಣಾಂ ತಥಾ ಲಾಭಸ್ತಥಾಲಿಂಗನಮೇವ ಚ ।
ನಿಗಡೈರ್ಬಂಧನಂ ಧನ್ಯಂ ತಥಾ ವಿಷ್ಠಾನುಲೇಪನಂ ॥೩೩॥

ಜೀವತಾಂ ಭೂಮಿಪಾಲಾನಾಂ ಸುಹೃದಾಮಪಿ ದರ್ಶನಂ ।
ದರ್ಶನಂ ದೇವತಾನಾಂ ಚ ವಿಮಲಾನಾಂ ತಥಾಂಭಸಾಂ ॥೩೪॥

ಶುಭಾನ್ಯಥೈತಾನಿ ನರಸ್ತು ದೃಷ್ಟ್ವಾ
ಪ್ರಾಪ್ನೋತ್ಯಯತ್ನಾದ್ಧ್ರುವಮರ್ಥಲಾಭಂ ।
ಸ್ವಪ್ನಾನಿ ವೈ ಧರ್ಮಭೃತಾಂ ವರಿಷ್ಠ
ವ್ಯಾಧೇರ್ವಿಮೋಕ್ಷಂ ಚ ತಥಾತುರೋಽಪಿ ॥೩೫॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಯಾತ್ರಾನಿಮಿತ್ತೇ ಸ್ವಪ್ನಾಧ್ಯಾಯೋ ನಾಮ ದ್ವಿಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಃ

---

ಮನೆಯಲ್ಲಿ ಮರಿಹಾಕುವುದು, ಕುದುರೆಗಳನ್ನೇರುವುದು, ಅಳುವುದು ಇವೆಲ್ಲವೂ ಒಳ್ಳೆಯ ಕನಸುಗಳು.

೩೩-೩೪. ಉತ್ತಮಸ್ತ್ರೀಯರ ಪ್ರಾಪ್ತಿ, ಅವರ ಆಲಿಂಗನ, ಕೈಕಾಲುಗಳಿಗೆ ಬೇಡಿ ಬೀಳುವುದು, ಅಮೇಧ್ಯವನ್ನು ಮೈಗೆ ಲೇಪಿಸಿಕೊಳ್ಳುವುದು, ಬದುಕಿರುವ ರಾಜರನ್ನೂ ಸ್ನೇಹಿತರನ್ನೂ ಕಾಣುವುದು, ದೇವತೆಗಳನ್ನೂ ವಿಮಾನಗಳನ್ನೂ ಜಲವನ್ನೂ ನೋಡುವುದು ಇವುಗಳೂ ಕೂಡ ಶುಭಸ್ವಪ್ನಗಳೇ.

೩೫. ಒಳ್ಳೆಯ ಕನಸುಗಳನ್ನು ಕಂಡರೆ ಮನುಷ್ಯನು ಪ್ರಯತ್ನವಿಲ್ಲದೆಯೇ ಅರ್ಥಲಾಭವನ್ನು ಪಡೆಯುವುದು ಖಂಡಿತ. ಧರ್ಮಜ್ಞರಲ್ಲಿ ಶ್ರೇಷ್ಠನಾದ ಎಲೈ ಮನು ಚಕ್ರವರ್ತೀ, ಅದೇ ರೀತಿಯಲ್ಲಿ ರೋಗಿಯೂ ಸಹ ಶುಭಸ್ವಪ್ನಗಳನ್ನು ಕಂಡರೆ ಬೇಗನೆ ರೋಗಮುಕ್ತನಾಗುವನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಶುಭಾಶುಭ ಸ್ವಪ್ನಗಳ ಲಕ್ಷಣವನ್ನೂ ಅವುಗಳ ಫಲವನ್ನೂ ಹೇಳಿದೆ.

ಒಳ್ಳೆಯ ಕನಸುಗಳಿಂದ ಒಳ್ಳೆಯ ಫಲವೂ ಕೆಟ್ಟ ಕನಸುಗಳಿಂದ ಕೆಟ್ಟಫಲವೂ ಉಂಟಾಗುವುವು. ರಾತ್ರಿ ಮೊದಲನೆಯ ಜಾವದಲ್ಲಿ ಕಂಡ ಕನಸು ಫಲಕೊಡ ಬೇಕಾದರೆ ಒಂದು ವರ್ಷ ಬೇಕು. ಮುಂದಿನ ಜಾವಗಳಲ್ಲಿ ಈ ಅವಧಿಯು ಕಡಿಮೆ ಯಾಗುತ್ತ ಬರುವುದು. ಅರುಣೋದಯದ ವೇಳೆಯ ಸ್ವಪ್ನವು ಹತ್ತುದಿನಗಳಲ್ಲೇ ಫಲಿಸುತ್ತದೆ. ಶುಭಸ್ವಪ್ನವನ್ನು ಕಂಡಮೇಲೆ ಮತ್ತೆ ಮಲಗಬಾರದು. ದೇವರನ್ನು ಸ್ತುತಿಸಿ ಎಚ್ಚರವಾಗಿರಬೇಕು. ರೋಗಿಗೆ ಒಳ್ಳೆಯ ಕನಸು ಬಿದ್ದರೆ ಬೇಗನೆ ಆರೋಗ್ಯಲಾಭವಾಗುತ್ತದೆ.

ಶ್ರೀಮತ್ಸ್ಯಮಹಾಪುರಾಣದಲ್ಲಿ ಯಾತ್ರಾನಿಮಿತ್ತದಲ್ಲಿ ಸ್ವಪ್ನಾಧ್ಯಾಯವೆಂಬ
ಇನ್ನೂರ ನಲವತ್ತೆರಡನೆಯ ಅಧ್ಯಾಯವು ಮುಗಿದುದು

## ಅಥ ತ್ರಿಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಃ

|| ಮನುರುವಾಚ ||

ಗಮನಂ ಪ್ರತಿ ರಾಜ್ಞಾಂ ತು ಸಂಮುಖಾದರ್ಶನೇ ಚ ಕಿಂ |
ಪ್ರಶಸ್ತಾಂಶ್ಚೈವ ಸಂಭಾಷ್ಯ ಸರ್ವಾನೇತಾಂಶ್ಚ ಕೀರ್ತಯ || ೧ ||

|| ಮತ್ಸ್ಯ ಉವಾಚ ||

ಔಷಧಾನಿ ತ್ವಯುಕ್ತಾನಿ ಧಾನ್ಯಂ ಕೃಷ್ಣಂ ಚ ಯದ್ಭವೇತ್ |
ಕಾರ್ಪಾಸಶ್ಚ ತೃಣಂ ರಾಜನ್ ಶುಷ್ಕಂ ಗೋಮಯಮೇವ ಚ || ೨ ||

ಇಂಧನಂ ಚ ತಥಾಂಗಾರಂ ಗುಡಂ ತೈಲಂ ತಥಾಽಶುಭಂ |
ಅಭ್ಯಕ್ತಂ ಮಲಿನಂ ಮುಂಡಂ ತಥಾ ನಗ್ನಂ ಚ ಮಾನವಂ || ೩ ||

ಮುಕ್ತಕೇಶಂ ರುಜಾರ್ತಂ ಚ ಕಾಷಾಯಾಂಬರಧಾರಿಣಂ |
ಉನ್ಮತ್ತಕಂ ತಥಾ ಸತ್ತ್ವಂ ದೀನಂ ಚಾಥ ನಪುಂಸಕಂ || ೪ ||

---

೧. ಮನುಚಕ್ರವರ್ತಿ ಹೇಳಿದನು.—ಅರಸರು ಪ್ರಯಾಣೋನ್ಮುಖರಾದಾಗ ಎದುರಿಗೆ ನೋಡುವುದಕ್ಕೆ ಅರ್ಹವಲ್ಲದ ಪದಾರ್ಥಗಳಾವುವು? ಹಾಗೆಯೇ ಪ್ರಶಸ್ತವಾದಂತಹವು ಯಾವುವು? ಇವೆಲ್ಲವನ್ನೂ ವಿವರಿಸಿ ಹೇಳು.

೨. ಮತ್ಸ್ಯರೂಪನಾದ ಭಗವಂತನು ಹೇಳಿದನು.—ರಾಜಾ, ಅಯುಕ್ತವಾದ ಔಷಧಗಳು, ಕರಿಯಬಣ್ಣದ ಧಾನ್ಯ, ಹತ್ತಿ, ಹುಲ್ಲು, ಬೆರಣಿ, ಸೌದೆ, ಇದ್ದಿಲು, ಬೆಲ್ಲ, ಎಣ್ಣೆ ಇವೆಲ್ಲವೂ ಪ್ರಯಾಣಕಾಲದಲ್ಲಿ ಎದುರಿಗೆ ಗೋಚರವಾದರೆ ಅಶುಭವೆಂದು ತಿಳಿಯಬೇಕು.

೩-೪. ಎಣ್ಣೆಹಚ್ಚಿಕೊಂಡಿರುವವನು, ಕೊಳಕ, ತಲೆ ಬೋಳಿಸಿಕೊಂಡಿರುವವನು, ತಲೆ ಕೆದರಿಕೊಂಡಿರುವವನು, ಕಾಷಾಯವಸ್ತ್ರವನ್ನುಟ್ಟವನು, ಹುಚ್ಚ, ಸಾರವಿಲ್ಲದವನು, ದೀನ, ನಪುಂಸಕ ಇಂತಹವರನ್ನು ಪ್ರಯಾಣದಲ್ಲಿ ನೋಡಬಾರದು.

ಅಯಃಪಂಕಸ್ತಥಾ ಚರ್ಮ ಕೇಶಬಂಧನಮೇವ ಚ ।
ತಥೈವೋದ್ಧೃತಸಾರಾಣಿ ಪಿಣ್ಯಾಕಾದೀನಿ ಯಾನಿ ಚ ॥ ೫ ॥

ಚಂಡಾಲಶ್ವಪಚಾಶ್ಚೈವ ರಾಜಬಂಧನಪಾಲಕಾಃ ।
ವಧಕಾಃ ಪಾಪಕರ್ಮಾಣೋ ಗರ್ಭಿಣೀ ಸ್ತ್ರೀ ತಥೈವ ಚ ॥ ೬ ॥

ತುಷಭಸ್ಮಕಪಾಲಾಸ್ಥಿಭಿನ್ನಭಾಂಡಾನಿ ಯಾನಿ ಚ ।
ರಿಕ್ತಾನಿ ಚೈವ ಭಾಂಡಾನಿ ಮೃತಂ ಶಾರ್ಙ್ಗಿಕಮೇವ ಚ ॥ ೭ ॥

ಏವಮಾದೀನಿ ಚಾನ್ಯಾನಿ ಅಶಸ್ತಾನ್ಯಭಿದರ್ಶನೇ ।
ಅಶಸ್ತೋ ವಾದ್ಯಶಬ್ದಶ್ಚ ಭಿನ್ನಭೈರವಜರ್ಜರಃ ॥ ೮ ॥

ಪುರತಃ ಶಬ್ದ ಏಹೀತಿ ಶಸ್ಯತೇ ನ ತು ಪೃಷ್ಠತಃ ।
ಗಚ್ಛೇತಿ ಪಶ್ಚಾದ್ಧರ್ಮಜ್ಞ ಪುರಸ್ತಾತ್ತು ವಿಗರ್ಹಿತಃ ॥ ೯ ॥

---

೫-೭ ಕಬ್ಬಿಣ, ಕೆಸರು, ಚರ್ಮ, ಕೂದಲಿನ ಹೊರೆ, ಹಿಂಡಿ ಮೊದಲಾದ ಸಾರತೆಗೆದ ವಸ್ತುಗಳು, ಚಂಡಾಲ, ಶ್ವಪಚ, ಸೆರೆಮನೆಯ ಕಾವಲುಗಾರ, ಕೊಲೆ ಪಾತಕ, ಪಾಪಕಾರಿ, ಗರ್ಭಿಣಿ, ಹೊಟ್ಟು, ಬೂದಿ, ತಲೆಯಚಿಪ್ಪು, ಮೂಳೆ, ಒಡೆದ ಮಡಕೆ, ಬರಿದಾಗಿರುವ ಪಾತ್ರೆಗಳು, ಸತ್ತುಹೋದ ಕೊಂಬಿರುವ ಪ್ರಾಣಿ, ಇವೇ ಮೊದಲಾದ ವಸ್ತುಗಳು ಪ್ರಯಾಣಕಾಲದಲ್ಲಿ ನೋಡಲು ಅಮಂಗಲ ವಾದುವು.

೮-೯. ಕಿವಿಯೊಡೆಯುವಂತಹ ಭಯಂಕರವಾದ ವಾದ್ಯಶಬ್ದವು ಅಪ್ರಶಸ್ತ ವೆನಿಸುವುದು. ಬಾ ಎಂದು ಮುಂದುಗಡೆ ಹೇಳಿದರೆ ಒಳ್ಳೆಯದು. ಹಿಂದುಗಡೆ ಯಿಂದಾದರೆ ಕೆಟ್ಟದು. ಹೋಗು ಎಂದು ಹಿಂಭಾಗದಿಂದ ಹೇಳಿದರೆ ಶುಭ, ಮುಂಭಾಗದಿಂದಾದರೆ ಅಶುಭ.

ಕ್ವ ಯಾಸಿ ತಿಷ್ಠ ಮಾ ಗಚ್ಛ ಕಿಂ ತೇ ತತ್ರ ಗತಸ್ಯ ತು ।
ಅನ್ಯೇ ಶಬ್ದಾಶ್ಚ ಯೇಽನಿಷ್ಟಾಸ್ತೇ ವಿಪತ್ತಿಕರಾ ಅಪಿ ॥೧೦॥

ಧ್ವಜಾದಿಷು ತಥಾ ಸ್ಥಾನಂ ಕ್ರವ್ಯಾದಾನಾಂ ವಿಗರ್ಹಿತಂ ।
ಸ್ಖಲನಂ ವಾಹನಾನಾಂ ಚ ವಸ್ತ್ರಸಂಗಸ್ತಥೈವ ಚ ॥೧೧॥

ನಿರ್ಗತಸ್ಯ ತು ದ್ವಾರಾದೌ ಶಿರಸಶ್ಚಾಭಿಘಾತನಂ ।
ಛತ್ರಧ್ವಜಾನಾಂ ವಸ್ತ್ರಾಣಾಂ ಪತನಂ ಚ ತಥಾಽಶುಭಂ ॥೧೨॥

ದೃಷ್ಟೇ ನಿಮಿತ್ತೇ ಪ್ರಥಮಮಮಂಗಲ್ಯವಿನಾಶನಂ ।
ಕೇಶವಂ ಪೂಜಯೇದ್ವಿದ್ವಾನ್ ಸ್ತವೇನ ಮಧುಸೂದನಂ ॥೧೩॥

ದ್ವಿತೀಯೇ ತು ತತೋ ದೃಷ್ಟೇ ಪ್ರತೀಪೇ ಪ್ರವಿಶೇದ್ಗೃಹಂ ।
ಅಥೇಷ್ಟಾನಿ ಪ್ರವಕ್ಷ್ಯಾಮಿ ಮಂಗಲ್ಯಾನಿ ತಥಾಽನಘ ॥೧೪॥

---

೧೦. "ಎಲ್ಲಿ ಹೋಗುತ್ತೀಯೆ? ನಿಂತುಕೋ, ಹೋಗಬೇಡ, ಅಲ್ಲಿ ಹೋಗಿ ನಿನಗೇನಾಗಬೇಕಾಗಿದೆ?" ಮುಂತಾದ ಅನಿಷ್ಟವಾದ ಮಾತುಗಳೆಲ್ಲ ಅಮಂಗಲವಾದುವು.

೧೧-೧೨. ಹದ್ದು, ಗಿಡಗ ಮುಂತಾದ ಪಕ್ಷಿಗಳು ಧ್ವಜ, ಛತ್ರ ಮುಂತಾದುವುಗಳ ಮೇಲೆ ಕುಳಿತುಕೊಳ್ಳುವುದು ಸರಿಯಲ್ಲ. ಕುದುರೆಗಳು ಮುಗ್ಗರಿಸುವುದು, ಉಟ್ಟಬಟ್ಟೆ ಸಿಕ್ಕಿಕೊಳ್ಳುವುದು, ಹೊರಟಾಗ ಬಾಗಿಲು ಮುಂತಾದುವಕ್ಕೆ ತಲೆ ತಾಕುವುದು, ಕೊಡೆಗಳ ಮತ್ತು ಬಾವುಟಗಳ ಬಟ್ಟೆ ಬೀಳುವುದು ಇವೆಲ್ಲ ಅಪಶಕುನಗಳು.

೧೩. ಮೊದಲನೆಯ ಸಾರಿ ಅಪಶಕುನವಾದರೆ ವಿವೇಕಿಯು ಅದರ ಪರಿಹಾರಕ್ಕಾಗಿ ವಿಷ್ಣುವನ್ನು ಪೂಜಿಸಿ ಸ್ತೋತ್ರಮಾಡಬೇಕು. ಎರಡನೆಯ ಸಲವೂ ಆದರೆ ಮನೆಗೆ ಹಿಂದಿರುಗಿ ಹೋಗಬೇಕು.

೧೪-೧೭. ದೋಷರಹಿತನಾದ ಎಲೈ ಮನುಚಕ್ರವರ್ತೀ, ಇನ್ನುಮುಂದೆ ಶುಭಶಕುನಗಳನ್ನು ಹೇಳುವೆನು ಕೇಳು. ಬಿಳಿಯ ಹೂಗಳು, ಪೂರ್ಣಕುಂಭಗಳು,

**ಶ್ವೇತಾಃ ಸುಮನಸಃ ಶ್ರೇಷ್ಠಾಃ ಪೂರ್ಣಕುಂಭಾಸ್ತಥೈವ ಚ ।**
**ಜಲಜಾಃ ಪಕ್ಷಿಣಶ್ಚೈವ ಮಾಂಸಮತ್ಸ್ಯಾಶ್ಚ ಪಾರ್ಥಿವ ॥೧೫॥**

**ಗಾವಸ್ತುರಂಗಮಾ ನಾಗಾ ಬದ್ಧ ಏಕಃ ಪಶುಸ್ತ್ವಜಃ ।**
**ತ್ರಿದಶಾಃ ಸುಹೃದೋ ವಿಪ್ರಾ ಜ್ವಲಿತಶ್ಚ ಹುತಾಶನಃ ॥೧೬॥**

**ಗಣಿಕಾ ಚ ಮಹಾಭಾಗ ದೂರ್ವಾ ಚಾರ್ದ್ರಂ ಚ ಗೋಮಯಂ ।**
**ರುಕ್ಮಂ ರೂಪ್ಯಂ ತಥಾ ತಾಮ್ರಂ ಸರ್ವರತ್ನಾನಿ ಚಾಪ್ಯಥ ॥೧೭॥**

**ಔಷಧಾನಿ ಚ ಧರ್ಮಜ್ಞ ಯವಾಃ ಸಿದ್ಧಾರ್ಥಕಾಸ್ತಥಾ ।**
**ನೃವಾಹ್ಯಮಾನಂ ಯಾನಂ ಚ ಭದ್ರಪೀಠಂ ತಥೈವ ಚ ॥೧೮॥**

**ಖಡ್ಗಂ ಛತ್ರಂ ಪತಾಕಾ ಚ ಮೃದಶ್ಚಾಯುಧಮೇವ ಚ ।**
**ರಾಜಲಿಂಗಾನಿ ಸರ್ವಾಣಿ ಶವಂ ರುದಿತವರ್ಜಿತಂ ॥೧೯॥**

---

ನೀರುಹಕ್ಕಿಗಳು, ಮಾಂಸ, ಮತ್ಸ್ಯ, ಹಸುಗಳು, ಕುದುರೆಗಳು, ಆನೆಗಳು, ಒಬ್ಬಂಟಿಗನಾದ ಬೌದ್ಧಸನ್ಯಾಸಿ, ಸಾಧುಪ್ರಾಣಿ, ಆಡು, ದೇವತೆಗಳು, ಸ್ನೇಹಿತರು, ಬ್ರಾಹ್ಮಣರು, ಉರಿಯುತ್ತಿರುವ ಬೆಂಕಿ, ವೇಶ್ಯಾಸ್ತ್ರೀ, ಗರಿಕೆಹುಲ್ಲು, ಹಸಿಯಸಗಣಿ, ಚಿನ್ನ, ಬೆಳ್ಳಿ, ತಾಮ್ರ, ಎಲ್ಲಬಗೆಯ ರತ್ನಗಳು ಇವು ಪ್ರಯಾಣಕಾಲದಲ್ಲಿ ಮುಂದೆ ಗೋಚರವಾದರೆ ಒಳ್ಳೆಯದು.

೧೮-೨೦. ರಾಜಧರ್ಮಜ್ಞನಾದ ಓ ರವಿನಂದನಾ, ಔಷಧಗಳು, ಯವ ಧಾನ್ಯ, ಬಿಳಿಯಸಾಸುವೆ, ಮನುಷ್ಯರು ಎಳೆಯುವ ಅಥವಾ ಹೊರುವ ಗಾಡಿ ಅಥವಾ ಪಲ್ಲಕ್ಕಿ, ಭದ್ರಪೀಠ, ಕತ್ತಿ, ಕೊಡೆ, ಬಾವುಟ, ಮಣ್ಣು, ಆಯುಧ, ಎಲ್ಲ ಬಗೆಯ ರಾಜಚಿಹ್ನಗಳು, ಅಳುವಿನ ಸದ್ದಿಲ್ಲದ ಹೆಣ, ತುಪ್ಪ, ಮೊಸರು, ಹಾಲು, ಬಗೆಬಗೆಯ ಹಣ್ಣುಗಳು, ಸ್ವಸ್ತಿಕ, ವರ್ಧಮಾನ, ನಂದ್ಯಾವರ್ತ ಮತ್ತು ಕೌಸ್ತುಭ

ಘೃತಂ ದಧಿ ಪಯಶ್ಚೈವ ಫಲಾನಿ ವಿವಿಧಾನಿ ಚ ।
ಸ್ವಸ್ತಿಕಂ ವರ್ಧಮಾನಂ ಚ ನಂದ್ಯಾವರ್ತಂ ಸಕೌಸ್ತುಭಂ ॥೨೦॥

ವಾದಿತ್ರಾಣಾಂ ಸುಖಃ ಶಬ್ದೋ ಗಭೀರಃ ಸುಮನೋಹರಃ ।
ಗಾಂಧಾರಷಡ್ಜ ಋಷಭಾ ಯೇ ಚ ಶಸ್ತಾಸ್ತಥಾ ಸ್ವರಾಃ ॥೨೧॥

ವಾಯುಃ ಸಶರ್ಕರೋ ರೂಕ್ಷಃ ಸರ್ವತ್ರ ಸಮುಪಸ್ಥಿತಃ ।
ಪ್ರತಿಲೋಮಸ್ತಥಾ ನೀಚೋ ವಿಜ್ಞೇಯೋ ಭಯಕೃದ್ದ್ವಿಜ ॥೨೨॥

ಅನುಕೂಲೋ ಮೃದುಃ ಸ್ನಿಗ್ಧಃ ಸುಖಸ್ಪರ್ಶಃ ಸುಖಾವಹಃ ।
ರೂಕ್ಷಾ ರೂಕ್ಷಸ್ವರಾ ಭದ್ರಾಃ ಕ್ರವ್ಯಾದಾಃ ಪರಿಗಚ್ಛತಾಂ ॥೨೩॥

ಮೇಘಾಃ ಶಸ್ತಾ ಘನಾಃ ಸ್ನಿಗ್ಧಾ ಗಜಬೃಂಹಿತನಿಸ್ವನಾಃ ।
ಅನುಲೋಮಾಸ್ತಡಿಚ್ಛನ್ನಾಃ ಶಕ್ರಚಾಪಂ ತಥೈವ ಚ ॥೨೪॥

---

ಗಳೆಂಬ ಬಗೆಬಗೆಯ ಕಟ್ಟಡಗಳು ಇವೆಲ್ಲ ಪ್ರಯಾಣಸಮಯದಲ್ಲಿ ಎದುರಿಗೆ ನೋಡುವುದಕ್ಕೆ ಪ್ರಶಸ್ತವೆನಿಸುವುವು.

೨೧-೨೩. ಗಂಭೀರವೂ ಬಹು ಮನೋಹರವೂ ಆದ ಧ್ವನಿಗಳೂ, ಗಾಂಧಾರ, ಷಡ್ಜ, ಋಷಭ ಮೊದಲಾದ ಶುಭಸ್ವರಗಳೂ ಶ್ರೇಷ್ಠವಾದುವು. ಎಲೈ ದ್ವಿಜವರ್ಯಾ, ಗಾಳಿಯು ಮರಳು ಮಣ್ಣಿನಿಂದ ತುಂಬಿ ಒರಟಾಗಿ ಎಲ್ಲಕಡೆಗೂ ವ್ಯಾಪಿಸಿಕೊಂಡು ಎದುರಾಗಿ ಬೀಸಿದರೆ ಭಯವುಂಟಾಗುವುದೆಂದು ತಿಳಿಯಬೇಕು. ಶರೀರಕ್ಕೆ ಹಿತವಾಗುವಂತೆ ಮೆಲ್ಲಗೆ ಮಧುರವಾಗಿ ಹಿಂದುಗಡೆಯಿಂದ ಬೀಸಿದರೆ ಸುಖಪ್ರದವಾಗುವುದು. ಕ್ರೂರವಾದ ಪ್ರಾಣಿಗಳು ಭಯಂಕರವಾದ ಒರಟುಧ್ವನಿ ಮಾಡುತ್ತಿದ್ದರೆ ಪ್ರಯಾಣಿಕರಿಗೆ ಕ್ಷೇಮಕಾರಿಯೆಂದೇ ತಿಳಿಯಬೇಕು.

೨೪. ನೀರುತುಂಬಿ ಆನೆಗಳ ಘೀಂಕಾರದಂತೆ ಗುಡುಗುಗಳು ಕೇಳುತ್ತಿರಲು, ಮಿಂಚುಗಳು ಹೊಳೆಯುತ್ತಿರಲು ಮೋಡಗಳೂ, ಕಾಮನಬಿಲ್ಲೂ ಹಿಂಗಡೆಯಲ್ಲಿ ಮೂಡಿದರೆ ಶುಭವಾಗುವುದು.

ಅಪ್ರಶಸ್ತೇ ತಥಾ ಜ್ಞೇಯೋ ಪರಿವೇಷಪ್ರವರ್ಷಣೇ ।
ಅನುಲೋಮಾ ಗ್ರಹಾಃ ಶಸ್ತಾ ವಾಕ್ಪತಿಸ್ತು ವಿಶೇಷತಃ ||೨೫||

ಆಸ್ತಿಕ್ಯಂ ಶ್ರದ್ದಧಾನತ್ವಂ ತಥಾ ಪೂಜ್ಯಾಭಿಪೂಜನಂ ।
ಶಸ್ತಾನ್ಯೇತಾನಿ ಧರ್ಮಜ್ಞ ಯಚ್ಚ ಸ್ಯಾನ್ಮನಸಿ ಪ್ರಿಯಂ ||೨೬||

ಮನಸಸ್ತುಷ್ಟಿರೇವಾತ್ರ ಪರಮಂ ಜಯಲಕ್ಷಣಂ ।
ಏಕತಃ ಸರ್ವಲಿಂಗಾನಿ ಮನಸಸ್ತುಷ್ಟಿರೇಕತಃ ||೨೭||

ಯಾನೋತ್ಸುಕತ್ವಂ ಮನಸಃ ಪ್ರಹರ್ಷಃ
ಸುಖಸ್ಯ ಲಾಭೋ ವಿಜಯಪ್ರವಾದಃ ।
ಮಂಗಲ್ಯಲಬ್ಧಿಃ ಶ್ರವಣಂ ಚ ರಾಜನ್
ಜ್ಞೇಯಾನಿ ನಿತ್ಯಂ ವಿಜಯಾವಹಾನಿ ||೨೮||

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಯಾತ್ರಾನಿಮಿತ್ತೇ ಮಂಗಲಾಧ್ಯಾಯೋ ನಾಮ ತ್ರಿಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಃ

---

೨೫. ಪರಿವೇಷಹಾಕುವುದೂ ಮಳೆ ಹನಿಯುವುದೂ ಅಪ್ರಶಸ್ತವೆನಿಸುವುವು. ಗ್ರಹಗಳು, ಅದರಲ್ಲಿಯೂ ಮುಖ್ಯವಾಗಿ ಬೃಹಸ್ಪತಿ ಹಿಂಭಾಗದಲ್ಲಿ ಪ್ರಕಾಶಿಸುತ್ತಿದ್ದರೆ ಒಳ್ಳೆಯದು.

೨೬. ದೇವರಲ್ಲಿ ಭಕ್ತಿ, ಶಾಸ್ತ್ರಗಳಲ್ಲಿ ನಂಬಿಕೆ, ಪೂಜ್ಯರಲ್ಲಿ ಗೌರವ, ಮನಸ್ಸಿನಲ್ಲಿ ಸಂತೋಷ ಇವೆಲ್ಲವೂ ಪ್ರಯಾಣಕಾಲದಲ್ಲಿದ್ದರೆ ಶುಭಫಲವುಂಟಾಗುವುದು.

೨೭. ಮನಸ್ಸಂತೋಷವೇ ಕಾರ್ಯಜಯಕ್ಕೆ ಅತಿಮುಖ್ಯವಾದ ಲಕ್ಷಣ. ಮನಸ್ಸಂತೋಷವೊಂದಿದ್ದರೆ ಮಿಕ್ಕ ಶಕುನಗಳೆಲ್ಲವೂ ಇದ್ದಂತೆಯೇ ಸರಿ.

೨೮. ಪ್ರಯಾಣದಲ್ಲಿ ಉತ್ಸಾಹ, ಮನಸ್ಸಿನಲ್ಲಿ ಹರ್ಷ, ಸುಖದ ಲಾಭ, ಗೆಲವು ದೊರಕುವುದೆಂಬ ಪ್ರವಾದ, ಶುಭಶಕುನಗಳ ಪ್ರಾಪ್ತಿ, ಶುಭವಾರ್ತೆಗಳು ಕಿವಿಗೆ ಬೀಳುವುದು ಇವೆಲ್ಲ ಜಯವು ನಿಶ್ಚಯವಾಗಿ ದೊರಕುವುದೆಂಬುದಕ್ಕೆ ಸೂಚನೆಗಳೆಂದು ತಿಳಿಯಬೇಕು.

## ಅಧ್ಯಾಯದ ಸಾರಾಂಶ

ಪ್ರಯಾಣಕಾಲದಲ್ಲಿ ಗೋಚರವಾಗುವ ಶುಭಾಶುಭ ಶಕುನಗಳ ವಿಷಯವನ್ನು ಈ ಅಧ್ಯಾಯವು ತಿಳಿಸುತ್ತದೆ.

ಪ್ರಯಾಣ ಹೊರಟಾಗ ಶುಭಸೂಚನೆಗಳಾದರೆ ಕಾರ್ಯದಲ್ಲಿ ಜಯವಾಗುವುದು. ಅಶುಭಲಕ್ಷಣಗಳು ತೋರಿಬಂದರೆ ಕಾರ್ಯಹಾನಿಯೂ ಅನಿಷ್ಟಪ್ರಾಪ್ತಿಯೂ ಆಗುವುವು. ದಂಡಯಾತ್ರೆ ಹೊರಡುವಾಗ ರಾಜನು ಇದನ್ನು ಚೆನ್ನಾಗಿ ಗಮನಿಸಬೇಕು. ಎಲ್ಲ ಶಕುನಗಳಿಗಿಂತ ಮನಸ್ಸಿನ ಹರ್ಷವು ಅತಿಮುಖ್ಯವಾದುದು; ಅದು ದೃಢವಾಗಿದ್ದರೆ ಕಾರ್ಯದಲ್ಲಿ ಗೆಲವು ಖಂಡಿತವೆಂದು ತಿಳಿಯಬೇಕು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಯಾತ್ರಾನಿಮಿತ್ತದಲ್ಲಿ ಮಂಗಲಾಧ್ಯಾಯವೆಂಬ ಇನ್ನೂರ ನಲವತ್ತಮೂರನೆಯ ಅಧ್ಯಾಯ ಮುಗಿದುದು



## ಅಥ ಚತುಶ್ಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಃ

|| ಋಷಯ ಊಚುಃ ||

ರಾಜಧರ್ಮಾಸ್ತ್ವಯಾ ಸೂತ ಕಥಿತೋ ವಿಸ್ತರೇಣ ತು ।
ತಥೈವಾದ್ಭುತಮಾಂಗಲ್ಯಂ ಸ್ವಪ್ನದರ್ಶನಮೇವ ಚ || ೧ ||

ವಿಷ್ಣೋರಿದಾನೀಂ ಮಾಹಾತ್ಮ್ಯಂ ಪುನರ್ವಕ್ತುಮಿಹಾರ್ಹಸಿ ।
ಕಥಂ ಸ ವಾಮನೋ ಭೂತ್ವಾ ಬಬಂಧ ಬಲಿದಾನವಂ ।
ಕ್ರಮತಃ ಕೀದೃಶಂ ರೂಪಮಾಸೀಲ್ಲೋಕತ್ರಯೇ ಹರೇಃ || ೨ ||

|| ಸೂತ ಉವಾಚ ||

ಏತದೇವ ಪುರಾ ಪೃಷ್ಟಃ ಕುರುಕ್ಷೇತ್ರೇ ತಪೋಧನಃ ।
ಶೌನಕಸ್ತೀರ್ಥಯಾತ್ರಾಯಾಂ ವಾಮನಾಯತನೇ ಪುರಾ || ೩ ||

---

೧. ಋಷಿಗಳು ಹೇಳಿದರು.—ಎಲೈ ಸೂತಪೌರಾಣಿಕನೇ, ರಾಜಧರ್ಮ ವನ್ನು ವಿಸ್ತಾರವಾಗಿ ಹೇಳಿದೆ. ಉತ್ಪಾತಗಳ ಶಾಂತಿ ವಿಧಾನವನ್ನೂ, ಪ್ರಯಾಣ ಕಾಲದಲ್ಲಿ ಒದಗುವ ಶುಭಾಶುಭ ನಿಮಿತ್ತಗಳನ್ನೂ, ಸ್ವಪ್ನಫಲವನ್ನೂ ತಿಳಿಸಿದೆ.

೨. ಈಗ ಮತ್ತೆ ವಿಷ್ಣುವಿನ ಮಹಿಮೆಯನ್ನು ಹೇಳು. ಅವನು ವಾಮನಾ ವತಾರ ಮಾಡಿ ದಾನವೇಶ್ವರನಾದ ಬಲಿಚಕ್ರವರ್ತಿಯನ್ನು ಬಂಧಿಸಿದುದು ಹೇಗೆ? ಮೂರುಲೋಕವನ್ನೂ ಅಳೆದ ಆ ಹರಿಯ ರೂಪವು ಹೇಗಿದ್ದಿತು?

೩-೪. ಸೂತಪೌರಾಣಿಕನು ಹೇಳಿದನು.—ಇದೇ ವಿಷಯವನ್ನು ಪೂರ್ವದಲ್ಲಿ ತೀರ್ಥಯಾತ್ರೆಗಾಗಿ ಕುರುಕ್ಷೇತ್ರಕ್ಕೆ ಹೋಗಿದ್ದ ಅರ್ಜುನನು, ವಾಮನಮೂರ್ತಿಯ ದೇವಸ್ಥಾನದಲ್ಲಿ ತಪೋನಿರತನಾಗಿದ್ದ ಶೌನಕಮಹರ್ಷಿಯನ್ನು ಕೇಳಿದನು. ಧರ್ಮ

ಯದಾ ಸಮಯಭೇದಿತ್ವಂ ದ್ರೌಪದ್ಯಾಃ ಪಾರ್ಥಿವಂ ಪ್ರತಿ ।
ಅರ್ಜುನೇನ ಕೃತಂ ತತ್ರ ತೀರ್ಥಯಾತ್ರಾಂ ತದಾ ಯಯೌ ॥ ೪ ॥

ಧರ್ಮಕ್ಷೇತ್ರೇ ಕುರುಕ್ಷೇತ್ರೇ ವಾಮನಾಯತನೇ ಸ್ಥಿತಃ ।
ದೃಷ್ಟ್ವಾ ಸ ವಾಮನಂ ತತ್ರ ಅರ್ಜುನೋ ವಾಕ್ಯಮಬ್ರವೀತ್ ॥ ೫ ॥

॥ ಅರ್ಜುನ ಉವಾಚ ॥

ಕಿಂ ನಿಮಿತ್ತಮಯಂ ದೇವೋ ವಾಮನಾಕೃತಿರಿಜ್ಯತೇ ।
ವರಾಹರೂಪೀ ಭಗವಾನ್ ಕಸ್ಮಾತ್ಪೂಜ್ಯೋಽಭವತ್ಪುರಾ ।
ಕಸ್ಮಾಚ್ಚ ವಾಮನಸ್ಯೇದಮಿಷ್ಟಂ ಕ್ಷೇತ್ರಮಜಾಯತ ॥ ೬ ॥

॥ ಶೌನಕ ಉವಾಚ ॥

ವಾಮನಸ್ಯ ಚ ವಕ್ಷ್ಯಾಮಿ ವರಾಹಸ್ಯ ಚ ಧೀಮತಃ ।
ತ್ಯಕ್ತ್ವಾತಿವಿಸ್ತರಂ ಭೂಯೋ ಮಾಹಾತ್ಮ್ಯಂ ಕುರುನಂದನ ॥ ೭ ॥

---

ರಾಜನು ದ್ರೌಪದಿಯೊಡನೆ ಏಕಾಂತದಲ್ಲಿರುವಾಗ ಅರ್ಜುನನು ತಿಳಿಯದೆ ಪ್ರವೇಶಿಸಿ ತಾವು ಮಾಡಿಕೊಂಡಿದ್ದ ಒಪ್ಪಂದವನ್ನು ಮೀರಿದನು. ಅದಕ್ಕೋಸ್ಕರ ಅವನು ತೀರ್ಥಯಾತ್ರೆಗೆ ಹೊರಟನು.

೫. ಅರ್ಜುನನು ಧರ್ಮಕ್ಷೇತ್ರವೆನಿಸಿದ ಕುರುಕ್ಷೇತ್ರವನ್ನು ಸೇರಿ ಅಲ್ಲಿದ್ದ ವಾಮನಮಂದಿರಕ್ಕೆ ಹೋದನು. ಅಲ್ಲಿ ವಾಮನಮೂರ್ತಿಯನ್ನು ಕಂಡು ಇಂತೆಂದನು.

೬. ಅರ್ಜುನನು ಹೇಳಿದನು.—ವಾಮನರೂಪಿಯಾದ ಈ ದೇವನು ಏತಕ್ಕಾಗಿ ಪೂಜ್ಯನೆನಿಸಿದನು? ಪೂರ್ವದಲ್ಲಿ ವರಾಹರೂಪಿಯಾದ ಭಗವಂತನು ಪೂಜ್ಯನಾದುದು ಏತರಿಂದ? ಈ ಕ್ಷೇತ್ರವು ಭಗವಂತನಾದ ವಾಮನನಿಗೆ ಹೇಗೆ ಪ್ರಿಯವಾಯಿತು?

೭. ಶೌನಕಮುನಿ ಹೇಳಿದನು.—ಎಲೈ ಅರ್ಜುನಾ, ವಾಮನನ ಮತ್ತು ಸರ್ವಜ್ಞನಾದ ವರಾಹಮೂರ್ತಿಯ ಮಹಿಮೆಯನ್ನು ಸಂಗ್ರಹವಾಗಿ ಹೇಳುವೆನು ಕೇಳು.

ಪುರಾ ನಿರ್ವಾಸಿತೇ ಶಕ್ರೇ ಸುರೇಷು ವಿಜಿತೇಷು ಚ ।
ಚಿಂತಯಾಮಾಸ ದೇವಾನಾಂ ಜನನೀ ಪುನರುದ್ಭವಂ ॥ ೮ ॥

ಅದಿತಿರ್ದೇವಮಾತಾ ಚ ಪರಮಂ ದುಶ್ಚರಂ ತಪಃ ।
ತೀವ್ರಂ ಚಚಾರ ವರ್ಷಾಣಾಂ ಸಹಸ್ರಂ ಪೃಥಿವೀಪತೇ ॥ ೯ ॥

ಆರಾಧನಾಯ ಕೃಷ್ಣಸ್ಯ ವಾಗ್ಯತಾ ವಾಯುಭೋಜನಾ ।
ದೈತ್ಯೈರ್ನಿರಾಕೃತಾನ್ ದೃಷ್ಟ್ವಾ ತನಯಾನ್ ಕುರುನಂದನ ॥೧೦॥

ವೃಥಾಪುತ್ರಾಹಮಸ್ಮೀತಿ ನಿರ್ವೇದಾತ್ಪ್ರಣತಾ ಹರಿಂ ।
ತುಷ್ಟಾವ ವಾಗ್ಭಿರಿಷ್ಟಾಭಿಃ ಪರಮಾರ್ಥಾವಬೋಧಿನೀ ।
ದೇವದೇವಂ ಹೃಷೀಕೇಶಂ ನತ್ವಾ ಸರ್ವಗತಂ ಹರಿಂ ॥೧೧॥

॥ ಅದಿತಿರುವಾಚ ॥

ನಮಃ ಸರ್ವಾರ್ತಿನಾಶಾಯ ನಮಃ ಪುಷ್ಕರಮಾಲಿನೇ ।
ನಮಃ ಪರಮಕಲ್ಯಾಣ ಕಲ್ಯಾಣಾಯಾದಿವೇಧಸೇ ॥೧೨॥

---

೮. ಪೂರ್ವದಲ್ಲಿ ದೈತ್ಯರು ಇಂದ್ರನನ್ನು ಓಡಿಸಿದರು. ದೇವತೆಗಳನ್ನು ಗೆದ್ದರು. ಆಗ ದೇವಮಾತೆಯಾದ ಅದಿತಿಯು ತನ್ನ ಮಕ್ಕಳು ಮತ್ತೆ ಏಳಿಗೆಗೆ ಬರುವುದು ಹೇಗೆಂದು ಚಿಂತಿಸಿದಳು.

೯. ರಾಜೇಂದ್ರಾ, ದೇವಜನನಿಯಾದ ಅದಿತಿಯು ಒಂದು ಸಾವಿರ ವರ್ಷಗಳಕಾಲ ಅತಿಘೋರವಾದ ತಪಸ್ಸನ್ನು ಮಾಡಿದಳು.

೧೦-೧೧. ಓ ಅರ್ಜುನಾ, ದೈತ್ಯರು ಓಡಿಸಿದ ತನ್ನ ಮಕ್ಕಳನ್ನು ಕಂಡು ಅವಳು ಮೌನವ್ರತವನ್ನು ತಾಳಿ, ವಾಯುಭೋಜನಮಾಡುತ್ತ ಕೃಷ್ಣನನ್ನು ಆರಾಧಿಸಿದಳು. "ಅಯ್ಯೋ! ನಾನು ಮಕ್ಕಳನ್ನು ಪಡೆದದ್ದು ದಂಡವಾಯಿತಲ್ಲಾ" ಎಂದು ನಿರ್ವೇದಗೊಂಡು, ತತ್ವಾರ್ಥವನ್ನರಿತ ಆಕೆಯು ದೇವದೇವನೂ ಸರ್ವಾಂತರ್ಯಾಮಿಯೂ ಆದ ಹರಿಯನ್ನು ನಮಸ್ಕರಿಸಿ ಇಷ್ಟವಚನಗಳಿಂದ ಸ್ತುತಿಸಿದಳು.

೧೨. ಅದಿತಿ ಹೇಳಿದಳು.—ಸಕಲ ಪೀಡಾಪರಿಹಾರಕನಿಗೆ ನಮಸ್ಕಾರ. ಕಮಲಗಳ ಮಾಲೆಯನ್ನು ಧರಿಸಿದಾತನಿಗೆ ನಮಸ್ಕಾರ. ಅತ್ಯಂತ ಶ್ರೇಷ್ಠನಾದ, ಕಲ್ಯಾಣಗುಣಗಳಿಂದ ಪೂರ್ಣನಾದ ಆದಿಸೃಷ್ಟಿಕರ್ತನಿಗೆ ನಮಸ್ಕಾರ.

ನಮಃ ಪಂಕಜನೇತ್ರಾಯ ನಮಃ ಪಂಕಜನಾಭಯೇ ।
ಶ್ರಿಯಃ ಕಾಂತಾಯ ದಾಂತಾಯ ದಾಂತದೃಶ್ಯಾಯ ಚಕ್ರಿಣೇ ॥೧೩॥

ನಮಃ ಪಂಕಜಸಂಭೂತಿಸಂಭವಾಯಾತ್ಮಯೋನಯೇ ।
ನಮಃ ಶಂಖಾಸಿಹಸ್ತಾಯ ನಮಃ ಕನಕರೇತಸೇ ॥೧೪॥

ತಥಾಽಽತ್ಮಜ್ಞಾನವಿಜ್ಞಾನಯೋಗಿಚಿಂತ್ಯಾತ್ಮಯೋಗಿನೇ ।
ನಿರ್ಗುಣಾಯಾವಿಶೇಷಾಯ ಹರಯೇ ಬ್ರಹ್ಮರೂಪಿಣೇ ॥೧೫॥

ಜಗತ್ಪ್ರತಿಷ್ಠಿತಂ ಯತ್ರ ಜಗತಾ ಯೋ ನ ದೃಶ್ಯತೇ ।
ನಮಃ ಸ್ಥೂಲಾತಿಸೂಕ್ಷ್ಮಾಯ ತಸ್ಮೈ ದೇವಾಯ ಶಂಖಿನೇ ॥೧೬॥

ಯಂ ನ ಪಶ್ಯಂತಿ ಪಶ್ಯಂತೋ ಜಗದಪ್ಯಖಿಲಂ ನರಾಃ ।
ಅಪಶ್ಯದ್ಭಿರ್ಜಗತ್ಯತ್ರ ಸ ದೇವೋ ಹೃದಿ ಸಂಸ್ಥಿತಃ ॥೧೭॥

---

೧೩. ಪುಂಡರೀಕಾಕ್ಷನಿಗೆ ನಮಸ್ಕಾರ. ಪದ್ಮನಾಭನಿಗೆ ನಮಸ್ಕಾರ. ಲಕ್ಷ್ಮೀರಮಣನೂ, ಜಿತಾತ್ಮನೂ, ಜಿತೇಂದ್ರಿಯರಿಗೆ ಗೋಚರನೂ, ಚಕ್ರಧಾರಿಯೂ ಆದವನಿಗೆ ನಮಸ್ಕಾರ.

೧೪. ಕಮಲಸಂಭವನೆನಿಸಿದ ಬ್ರಹ್ಮನನ್ನು ಸೃಷ್ಟಿಸಿದ ಸ್ವಯಂಭುವಿಗೆ ನಮಸ್ಕಾರ. ಶಂಖವನ್ನೂ ಖಡ್ಗವನ್ನೂ ಹಸ್ತಗಳಲ್ಲಿ ಧರಿಸಿರುವಾತನಿಗೆ ನಮಸ್ಕಾರ. ಸುವರ್ಣವೇ ವೀರ್ಯವಾಗಿರುವವನಿಗೆ ನಮಸ್ಕಾರ.

೧೫. ಆತ್ಮಜ್ಞಾನದಿಂದಲೂ ವಿಜ್ಞಾನದಿಂದಲೂ ಪೂರ್ಣರಾದ ಯೋಗಿಗಳು ಯಾವನ ಮಹಿಮೆಯನ್ನು ಚಿಂತಿಸುತ್ತಿರುವರೋ ಆ ನಿರ್ಗುಣನೂ ನಿರ್ವಿಶೇಷನೂ ಬ್ರಹ್ಮರೂಪಿಯೂ ಆದ ಹರಿಗೆ ನಮಸ್ಕಾರ.

೧೬. ಜಗತ್ತು ಯಾವನಲ್ಲಿ ನೆಲಸಿದೆಯೋ, ಆದರೆ ಯಾರು ಅದಕ್ಕೆ ಕಾಣಿಸುವುದಿಲ್ಲವೋ, ಅಂತಹ ಸ್ಥೂಲರೂಪನೂ, ಸೂಕ್ಷ್ಮರೂಪನೂ, ಶಂಖಧರನೂ ಆದ ಭಗವಂತನಿಗೆ ನಮಸ್ಕಾರ.

೧೭. ಜಗತ್ತನ್ನೆಲ್ಲ ನೋಡಬಲ್ಲವರಾದರೂ ಸಾಮಾನ್ಯಜನರು ಅವನನ್ನು ಕಾಣಲಾರರು. ಆದರೆ ಅಂತರ್ಮುಖಿಗಳಾಗಿ ಬಾಹ್ಯಜಗತ್ತಿನ ಕಡೆಗೆ ದೃಷ್ಟಿಯಿಡದ ಯೋಗಿಗಳು ಆ ದೇವನನ್ನು ತಮ್ಮ ಹೃದಯದಲ್ಲೇ ಕಾಣುವರು.

ಯಸ್ಮಿನ್ನನ್ನಂ ಪಯಶ್ಚೈವ ನದ್ಯಶ್ಚೈವಾಖಿಲಂ ಜಗತ್ ।
ತಸ್ಮೈ ಸಮಸ್ತ ಜಗತಾಮಾಧಾರಾಯ ನಮೋ ನಮಃ ॥೧೮॥

ಆದ್ಯಃ ಪ್ರಜಾಪತಿಪತಿರ್ಯಃ ಪ್ರಭೂಣಾಂ ಪತಿಃ ಪರಃ ।
ಪತಿಃ ಸುರಾಣಾಂ ಯಸ್ತಸ್ಮೈ ನಮಃ ಕೃಷ್ಣಾಯ ವೇಧಸೇ ॥೧೯॥

ಯಃ ಪ್ರವೃತ್ತೌ ನಿವೃತ್ತೌ ಚ ಇಜ್ಯತೇ ಕರ್ಮಭಿಃ ಸ್ವಕೈಃ ।
ಸ್ವರ್ಗಾಪವರ್ಗಫಲದೋ ನಮಸ್ತಸ್ಮೈ ಗದಾಭೃತೇ ॥೨೦॥

ಯಶ್ಚಿಂತ್ಯಮಾನೋ ಮನಸಾ ಸದ್ಯಃ ಪಾಪಂ ವ್ಯಪೋಹತಿ ।
ನಮಸ್ತಸ್ಮೈ ವಿಶುದ್ಧಾಯ ಪರಾಯ ಹರಿವೇಧಸೇ ॥೨೧॥

ಯಂ ಬುದ್ಧ್ವಾ ಸರ್ವಭೂತಾನಿ ದೇವದೇವೇಶಮವ್ಯಯಂ ।
ನ ಪುನರ್ಜನ್ಮಮರಣೇ ಪ್ರಾಪ್ನುವಂತಿ ನಮಾಮಿ ತಂ ॥೨೨॥

---

೧೮. ಅನ್ನ, ಹಾಲು, ನದಿಗಳು ಮತ್ತು ಸಮಸ್ತ ಪ್ರಪಂಚಗಳು ಯಾರನ್ನು ಆಶ್ರಯಿಸಿಕೊಂಡಿರುವುವೋ ಆ ಸಕಲ ಜಗತ್ತುಗಳ ಆಧಾರನೆನಿಸಿದ ಭಗವಂತನಿಗೆ ಹಲವುಸಾರಿ ನಮಸ್ಕಾರ.

೧೯. ಸೃಷ್ಟಿಕರ್ತರಿಗೆಲ್ಲ ಯಾವನು ಮೊತ್ತಮೊದಲಿಗನೋ, ಪ್ರಭುಗಳಿಗೆಲ್ಲ ಯಾವನು ಪ್ರಭುವೋ, ದೇವತೆಗಳಿಗೆ ಯಾವನು ಅಧೀಶ್ವರನೋ ಆ ಜಗತ್ಕರ್ತನಾದ ಕೃಷ್ಣನಿಗೆ ನಮಸ್ಕಾರ.

೨೦. ಕಾಮ್ಯಕರ್ಮಗಳಿಂದಲೂ ನಿಷ್ಕಾಮಕರ್ಮಗಳಿಂದಲೂ ಜನರು ಯಾವನನ್ನು ಪೂಜಿಸುವರೋ, ಯಾವನು ಸ್ವರ್ಗವನ್ನೂ ಮೋಕ್ಷವನ್ನೂ ಕರುಣಿಸುವನೋ ಆ ಗದಾಧರನಾದ ದೇವನಿಗೆ ನಮಸ್ಕಾರ.

೨೧. ಮನಸ್ಸಿನಲ್ಲಿ ಚಿಂತಿಸಿದ ಮಾತ್ರಕ್ಕೆ ಯಾವನು ಕೂಡಲೇ ಪಾಪವನ್ನು ಪರಿಹರಿಸುತ್ತಾನೋ ಆ ಪಾವನನೂ ಶ್ರೇಷ್ಠನೂ ಆದ ವಿಷ್ಣುವಿಗೆ ನಮಸ್ಕಾರ.

೨೨. ಯಾವನನ್ನರಿತ ಮೇಲೆ ಸಕಲ ಪ್ರಾಣಿಗಳೂ ಜನ್ಮಮರಣಗಳ ಬಾಧೆಯನ್ನು ಮತ್ತೆ ಕಾಣುವುದಿಲ್ಲವೋ ಆ ದೇವದೇವನೂ ನಿರ್ವಿಕಾರನೂ ಆದ ಭಗವಂತನನ್ನು ನಮಸ್ಕರಿಸುತ್ತೇನೆ.

ಯೋ ಯಜ್ಞೈಃ ಯಜ್ಞಪರಮೈರಿಜ್ಯತೇ ಯಜ್ಞಸಂಜ್ಞಿತಃ ।
ತಂ ಯಜ್ಞಪುರುಷಂ ವಿಷ್ಣುಂ ನಮಾಮಿ ಪ್ರಭುಮೀಶ್ವರಂ ॥೨೩॥

ನೀಯತೇ ಸರ್ವವೇದೇಷು ವೇದವಿದ್ಭಿರ್ವಿದಾಂಪತಿಃ ।
ಯಸ್ತಸ್ಮೈ ವೇದವೇದ್ಯಾಯ ವಿಷ್ಣವೇ ಜಿಷ್ಣವೇ ನಮಃ ॥೨೪॥

ಯತೋ ವಿಶ್ವಂ ಸಮುತ್ಪನ್ನಂ ಯಸ್ಮಿಂಶ್ಚ ಲಯಮೇಷ್ಯತಿ ।
ವಿಶ್ವಾಗಮಪ್ರತಿಷ್ಠಾಯ ನಮಸ್ತಸ್ಮೈ ಮಹಾತ್ಮನೇ ॥೨೫॥

ಬ್ರಹ್ಮಾದಿಸ್ತಂಬಪರ್ಯಂತಂ ಯೇನ ವಿಶ್ವಮಿದಂ ತತಂ ।
ಮಾಯಾಜಾಲಂ ಸಮುತ್ತರ್ತುಂ ತಮುಪೇಂದ್ರಂ ನಮಾಮ್ಯಹಂ ॥೨೬॥

ಯಸ್ತು ತೋಯಸ್ವರೂಪಸ್ಥೋ ಬಿಭರ್ತ್ಯಖಿಲಮೀಶ್ವರಃ ।
ವಿಶ್ವಂ ವಿಶ್ವಪತಿಂ ವಿಷ್ಣುಂ ತಂ ನಮಾಮಿ ಪ್ರಜಾಪತಿಂ ॥೨೭॥

---

೨೩. ಯಾವನು ಯಜ್ಞನಿರತರಾದ ಶ್ರೋತ್ರಿಯರಿಂದ ಯಜ್ಞಯಾಗಗಳಲ್ಲಿ ಪೂಜೆಯನ್ನು ಕೈಗೊಳ್ಳುವನೋ ಆ ಯಜ್ಞಪುರುಷನೂ, ಜಗತ್ಪ್ರಭುವೂ, ಸರ್ವೇಶ್ವರನೂ ಆದ ವಿಷ್ಣುವನ್ನು ನಮಿಸುತ್ತೇನೆ.

೨೪. ಸರ್ವಜ್ಞನಾದ ಯಾವ ಭಗವಂತನನ್ನು ಅರಿತ ಜ್ಞಾನಿಗಳು ಸಕಲ ವೇದಗಳಿಂದಲೂ ಸ್ತುತಿಸುತ್ತಾರೋ ಆ ವೇದವೇದ್ಯನೂ ಸರ್ವೋತ್ಕೃಷ್ಟನೂ ಆದ ವಿಷ್ಣುವಿಗೆ ನಮಸ್ಕಾರ.

೨೫. ಜಗತ್ತು ಯಾವನಿಂದ ಉತ್ಪನ್ನವಾಯಿತೋ, ಯಾವನಲ್ಲಿ ಲಯವಾಗುವುದೋ ಅಂತಹ ಜಗತ್ಕಾರಣನೂ ಜಗದಾಧಾರನೂ ಆದ ಮಹಾತ್ಮನಿಗೆ ನಮಸ್ಕಾರ.

೨೬. ಬ್ರಹ್ಮನಿಂದ ಹಿಡಿದು ಹುಲ್ಲುಬೊಡ್ಡೆಯವರೆಗಿನ ಜಗತ್ತಿನಲ್ಲೆಲ್ಲ ಯಾವನು ವ್ಯಾಪಿಸಿದ್ದಾನೋ ಆ ವಿಷ್ಣುವಿಗೆ, ಮಾಯೆಯಿಂದ ಪಾರಾಗುವುದಕ್ಕಾಗಿ ನಮಸ್ಕಾರ ಮಾಡುತ್ತೇನೆ.

೨೭. ಯಾವ ಸರ್ವೇಶ್ವರನು ಜಲಸ್ವರೂಪನಾಗಿ ಸಮಸ್ತವನ್ನೂ ಧಾರಣ ಮಾಡುತ್ತಾನೋ ಆ ಸರ್ವರೂಪನೂ, ಸರ್ವಾಧಿಪತಿಯೂ, ಸರ್ವರಕ್ಷಕನೂ ಆದ ವಾಸುವೇವನನ್ನು ನಮಸ್ಕರಿಸುತ್ತೇನೆ.

**ಯಮಾರಾಧ್ಯ ವಿಶುದ್ಧೇನ ಮನಸಾ ಕರ್ಮಣಾ ಗಿರಾ ।**
**ತರಂತ್ಯವಿದ್ಯಾಮಖಿಲಾಂ ತಮುಪೇಂದ್ರಂ ನಮಾಮ್ಯಹಂ ॥೨೮॥**

**ವಿಷಾದತೋಷರೋಷಾದ್ಯೈರಜೇಯಂ ಸುಖದುಃಖಜೈಃ ।**
**ನೃತ್ಯತ್ಯಖಿಲಭೂತಸ್ಥಸ್ತಮುಪೇಂದ್ರಂ ನಮಾಮ್ಯಹಂ ॥೨೯॥**

**ಮೂರ್ತಂ ತಮೋಽಸುರಮಯಂ ತದ್ವಧಾದ್ವಿನಿಹಂತಿ ಯಃ ।**
**ರಾತ್ರಿಜಂ ಸೂರ್ಯರೂಪೀವ ತಮುಪೇಂದ್ರಂ ನಮಾಮ್ಯಹಂ ॥೩೦॥**

**ಕಪಿಲಾದಿಸ್ವರೂಪಸ್ಥೋ ಯಶ್ಚಾಜ್ಞಾನಮಯಂ ತಮಃ ।**
**ಹಂತಿ ಜ್ಞಾನಪ್ರದಾನೇನ ತಮುಪೇಂದ್ರಂ ನಮಾಮ್ಯಹಂ ॥೩೧॥**

**ಯಸ್ಯಾಕ್ಷಿಣೀ ಚಂದ್ರಸೂರ್ಯೌ ಸರ್ವಲೋಕಶುಭಾಶುಭಂ ।**
**ಪಶ್ಯತಃ ಕರ್ಮ ಸತತಮುಪೇಂದ್ರಂ ತಂ ನಮಾಮ್ಯಹಂ ॥೩೨॥**

---

೨೮. ಪರಿಶುದ್ಧವಾದ ಮನಸ್ಸಿನಿಂದಲೂ, ಕರ್ಮದಿಂದಲೂ ಮತ್ತು ವಚನದಿಂದಲೂ ಯಾವನನ್ನು ಆರಾಧಿಸಿದರೆ ಅವಿದ್ಯೆಯನ್ನು ಸಂಪೂರ್ಣವಾಗಿ ದಾಟಬಹುದೋ ಆ ಉಪೇಂದ್ರನನ್ನು ನಮಸ್ಕರಿಸುತ್ತೇನೆ.

೨೯. ಸುಖದುಃಖಗಳಿಂದ ಉತ್ಪನ್ನವಾದ ವಿಷಾದ, ಹರ್ಷ ಮತ್ತು ರೋಷಾದಿ ಮನೋವಿಕಾರಗಳಿಗೆ ಯಾವನು ವಶನಾಗುವುದಿಲ್ಲವೋ, ಸಕಲ ಜಂತುಗಳ ಅಂತರ್ಯಾಮಿಯಾಗಿದ್ದರೂ ನಿರ್ಲಿಪ್ತನಾಗಿ ಯಾವನು ಆನಂದಪೂರ್ಣನಾಗಿರುವನೋ ಆ ಉಪೇಂದ್ರನಿಗೆ ನಮಸ್ಕಾರಮಾಡುತ್ತೇನೆ.

೩೦. ಯಾವನು ಸೂರ್ಯರೂಪನಾಗಿ, ರಾತ್ರಿಯ ಕತ್ತಲೆಯ ರೂಪದಿಂದ ಬಂದ ಅಸುರನನ್ನು ಸಂಹರಿಸುತ್ತಾನೋ ಆ ಉಪೇಂದ್ರನನ್ನು ನಮಸ್ಕರಿಸುತ್ತೇನೆ.

೩೧. ಕಪಿಲಾದಿಮಹರ್ಷಿಗಳ ರೂಪದಿಂದ ಜ್ಞಾನವನ್ನು ಬೀರಿ, ಅಜ್ಞಾನವೆಂಬ ಕತ್ತಲೆಯನ್ನು ಯಾವನು ಪರಿಹರಿಸುತ್ತಾನೆಯೋ, ಆ ಉಪೇಂದ್ರನಿಗೆ ನಮಸ್ಕಾರಮಾಡುತ್ತೇನೆ.

೩೨. ಚಂದ್ರಸೂರ್ಯರು ಯಾರ ಕಣ್ಣುಗಳೆನಿಸಿ ಸಕಲ ಲೋಕಗಳ ಶುಭಾಶುಭ ಕರ್ಮಗಳನ್ನು ನಿತ್ಯವೂ ನೋಡುತ್ತಿರುವರೋ ಆ ಉಪೇಂದ್ರನನ್ನು ನಮಸ್ಕರಿಸುತ್ತೇನೆ.

ಯಸ್ಮಿನ್ ಸರ್ವೇಶ್ವರೇ ಸರ್ವೇ ಸತ್ಯಮೇತನ್ಮಯೋದಿತಂ ।
ನಾನೃತಂ ತಮಜಂ ವಿಷ್ಣುಂ ನಮಾಮಿ ಪ್ರಭುಮವ್ಯಯಂ ॥೩೩॥

ಯಚ್ಚ ತತ್ಸತ್ಯಮುಕ್ತಂ ಮೇ ಭೂಯಾಂಶ್ಚಾತೋ ಜನಾರ್ದನಃ ।
ಸತ್ಯೇನ ತೇನ ಸಕಲಾಃ ಪೂರ್ಯಂತಾಂ ಮೇ ಮನೋರಥಾಃ ॥೩೪॥

॥ ಶೌನಕ ಉವಾಚ ॥

ಏವಂ ಸ್ತುತಃ ಸ ಭಗವಾನ್ ವಾಸುದೇವ ಉವಾಚ ತಾಂ ।
ಅದೃಶ್ಯಃ ಸರ್ವಭೂತಾನಾಂ ತಸ್ಯಾಃ ಸಂದರ್ಶನೇ ಸ್ಥಿತಃ ॥೩೫॥

॥ ಶ್ರೀ ಭಗವಾನುವಾಚ ॥

ಮನೋರಥಾಂಸ್ತ್ವಮದಿತೇ ಯಾನಿಚ್ಛಸ್ಯಭಿವಾಂಛಿತಾನ್ ।
ತಾಂಸ್ತ್ವಂ ಪ್ರಾಪ್ಸ್ಯಸಿ ಧರ್ಮಜ್ಞೇ ಮತ್ಪ್ರಸಾದಾನ್ನ ಸಂಶಯಃ ॥೩೬॥

---

೩೩. ನಾನು ಹೇಳಿದ ಈ ಗುಣಗಳೆಲ್ಲ ಸ್ವಲ್ಪವಾದರೂ ಅಸತ್ಯವಲ್ಲದೆ ಯಾವನಲ್ಲಿ ಸತ್ಯವಾಗಿ ನೆಲೆಗೊಂಡಿವೆಯೋ, ಆ ಉತ್ಪತ್ತಿರಹಿತನೂ, ಜಗತ್ಪ್ರಭುವೂ ನಿರ್ವಿಕಾರನೂ ಆದ ವಿಷ್ಣುವನ್ನು ನಮಸ್ಕರಿಸುತ್ತೇನೆ.

೩೪. ನಾನು ಹೇಳಿದ ಗುಣವೆಲ್ಲ ಸತ್ಯವಾಗಿ ನೆಲಸಿರುವ ಕಾರಣ ಆ ಜನಾರ್ದನನು ಅತ್ಯಂತಶ್ರೇಷ್ಠನಾದವನು. ಸತ್ಯಸ್ವರೂಪನಾದ ಆತನಿಂದ ನನ್ನ ಮನೋರಥಗಳು ಈಡೇರಲಿ.

೩೫. ಶೌನಕಮುನಿ ಹೇಳಿದನು.—ಲೋಕದ ಸಕಲ ಪ್ರಾಣಿಗಳ ದೃಷ್ಟಿಗೆ ಅಗೋಚರನಾದ ಭಗವಾನ್ ವಾಸುದೇವನು ತನ್ನನ್ನು ಸ್ತುತಿಸಿದ ಅದಿತಿಯ ಕಣ್ಣೆದುರಿಗೆ ನಿಂತು ಇಂತೆಂದನು.

೩೬. ಭಗವಂತನು ಹೇಳಿದನು.—ಧರ್ಮವನ್ನು ಬಲ್ಲ ಎಲೌ ಅದಿತೀ, ನನ್ನ ಅನುಗ್ರಹದಿಂದ ನೀನು ಬಯಸುವ ಕೋರಿಕೆಗಳೆಲ್ಲ ಈಡೇರುವುವು. ಸಂದೇಹವಿಲ್ಲ.

ಶೃಣುಷ್ವ ಸುಮಹಾಭಾಗೇ ವರೋ ಯಸ್ತೇ ಹೃದಿ ಸ್ಥಿತಃ ।
ತಮಾಶು ವ್ರಿಯತಾಂ ಕಾಮಂ ಶ್ರೇಯಸ್ತೇ ಸಂಭವಿಷ್ಯತಿ ।
ಮದ್ದರ್ಶನಂ ಹಿ ವಿಫಲಂ ನ ಕದಾಚಿದ್ಭವಿಷ್ಯತಿ ॥೩೭॥

॥ ಅದಿತಿರುವಾಚ ॥

ಯದಿ ದೇವ ಪ್ರಸನ್ನಸ್ತ್ವಂ ಮದ್ಭಕ್ತ್ಯಾ ಭಕ್ತವತ್ಸಲ ।
ತ್ರೈಲೋಕ್ಯಾಧಿಪತಿಃ ಪುತ್ರಸ್ತದಸ್ತು ಮಮ ವಾಸವಃ ॥೩೮॥

ಹೃತಂ ರಾಜ್ಯಂ ಹೃತಾಶ್ಚಾಸ್ಯ ಯಜ್ಞಭಾಗಾ ಮಹಾಸುರೈಃ ।
ತ್ವಯಿ ಪ್ರಸನ್ನೇ ವರದೇ ತಾನ್ ಪ್ರಾಪ್ನೋತು ಸುತೋ ಮಮ ॥೩೯॥

ಹೃತಂ ರಾಜ್ಯಂ ನ ದುಃಖಾಯ ಮಮ ಪುತ್ರಸ್ಯ ಕೇಶವ ।
ಸಾಪತ್ನ್ಯಾದ್ದಾಯನಿರ್ಭ್ರಂಶೋ ಬಾಧಾಂ ನಃ ಕುರುತೇ ಹೃದಿ ॥೪೦॥

---

೩೭. ಎಲೌ ಭಾಗ್ಯಶಾಲಿನೀ, ಇಲ್ಲಿ ಕೇಳು. ನಿನ್ನ ಮನಸ್ಸಿನಲ್ಲಿರುವ ಯಾವ ವರವನ್ನಾದರೂ ಬೇಗನೆ ಬೇಡು. ನಿನಗೆ ಶ್ರೇಯಸ್ಸಾಗುವುದು. ನನ್ನ ದರ್ಶನವು ಎಂದಿಗೂ ವ್ಯರ್ಥವಾಗಲಾರದು.

೩೮. ಅದಿತಿ ಹೇಳಿದಳು.—ದೇವಾ, ಭಕ್ತವತ್ಸಲಾ, ನನ್ನ ಭಕ್ತಿಯಿಂದ ನೀನು ಪ್ರಸನ್ನನಾಗಿದ್ದರೆ ನನ್ನ ಪುತ್ರನಾದ ದೇವೇಂದ್ರನಿಗೆ ಮೂರು ಲೋಕಗಳ ಒಡೆತನವು ಬರಲಿ.

೩೯. ರಾಜ್ಯವು ಹೋಯಿತು. ಬಲಿಷ್ಠರಾದ ಅಸುರರು ಯಜ್ಞಭಾಗಗಳನ್ನು ಅಪಹರಿಸಿದರು ಸ್ವಾಮೀ, ನೀನು ಪ್ರಸನ್ನನಾಗಿ ವರವನ್ನು ಕರುಣಿಸಲಿರುವೆ. ನನ್ನ ಮಗನಿಗೆ ಅವೆಲ್ಲ ಮತ್ತೆ ಪ್ರಾಪ್ತವಾಗಲಿ.

೪೦. ಕೇಶವಾ, ನನ್ನ ಮಗನ ರಾಜ್ಯ ಹೋಯಿತಲ್ಲಾ ಎಂದು ನಾನು ದುಃಖಿಸುವುದಿಲ್ಲ. ನನ್ನ ಸವತಿಯ ಮಗನು ಅವನ ದಾಯಭಾಗವನ್ನು ಅಪಹರಿಸಿದುದಕ್ಕಾಗಿ ಮನಸ್ಸಿನಲ್ಲಿ ಬಹಳ ಬಾಧೆಯಾಗುತ್ತದೆ.

|| ಶ್ರೀ ಭಗವಾನುವಾಚ ||

ಕೃತಃ ಪ್ರಸಾದೋ ಹಿ ಮಯಾ ತವ ದೇವಿ ಯಥೇಪ್ಸಿತಃ ।
ಸ್ವಾಂಶೇನ ಚೈವ ತೇ ಗರ್ಭೇ ಸಂಭವಿಷ್ಯಾಮಿ ಕಶ್ಯಪಾತ್ ||೪೧||

ತವ ಗರ್ಭಸಮುದ್ಭೂತಸ್ತತಸ್ತೇ ಯೇ ಸುರಾರಯಃ ।
ತಾನಹಂ ನಿಹನಿಷ್ಯಾಮಿ ನಿರ್ವೃತಾ ಭವ ನಂದಿನಿ ||೪೨||

|| ಅದಿತಿರುವಾಚ ||

ಪ್ರಸೀದ ದೇವದೇವೇಶ ನಮಸ್ತೇ ವಿಶ್ವಭಾವನ ।
ನಾಹಂ ತ್ವಾಮುದರೇ ದೇವ ವೋಢುಂ ಶಕ್ಷ್ಯಾಮಿ ಕೇಶವ || ೪೩||

ಯಸ್ಮಿನ್ ಪ್ರತಿಷ್ಠಿತಂ ವಿಶ್ವಂ ಯೋ ವಿಶ್ವಂ ಸ್ವಯಮೀಶ್ವರಃ ।
ತಮಹಂ ನೋದರೇಣ ತ್ವಾಂ ವೋಢುಂ ಶಕ್ಷ್ಯಾಮಿ ದುರ್ಧರಂ ||೪೪||

---

೪೧. ಭಗವಂತನು ಹೇಳಿದನು.—ದೇವೀ, ನಿನ್ನ ಕೋರಿಕೆಯಂತೆ ನಾನು ಅನುಗ್ರಹಮಾಡಿದ್ದೇನೆ. ಕಶ್ಯಪಮಹರ್ಷಿಯಿಂದ ನಿನ್ನ ಗರ್ಭದಲ್ಲಿ ನಾನೇ ನನ್ನ ಅಂಶದಿಂದ ಅವತರಿಸುತ್ತೇನೆ.

೪೨. ನಿನ್ನ ಗರ್ಭದಲ್ಲಿ ಜನಿಸಿ ನಾನು ದೇವತೆಗಳಿಗೆ ಶತ್ರುಗಳಾದ ದೈತ್ಯರನ್ನು ಧ್ವಂಸಮಾಡುತ್ತೇನೆ. ದೇವೀ, ನೀನು ನೆಮ್ಮದಿಯಿಂದಿರು.

೪೩. ಅದಿತಿ ಹೇಳಿದಳು.—ದೇವಾಧಿದೇವಾ, ಪ್ರಸನ್ನನಾಗು. ಓ ಜಗತ್ಕಾರಣಾ, ನಿನಗೆ ನಮಸ್ಕಾರ. ಸ್ವಾಮೀ, ಕೇಶವಾ, ನಿನ್ನನ್ನು ಗರ್ಭದಲ್ಲಿ ಧರಿಸುವ ಶಕ್ತಿ ನನಗಿಲ್ಲ.

೪೪. ಯಾವನಲ್ಲಿ ಜಗತ್ತು ನೆಲೆಸಿದೆಯೋ, ಯಾವನು ಸಾಕ್ಷಾಜ್ಜಗತ್ಸ್ವರೂಪನೋ, ಸರ್ವೇಶ್ವರನೋ, ಅಂತಹ ಧರಿಸಲಶಕ್ಯನಾದ ನಿನ್ನನ್ನು ಉದರದಲ್ಲಿ ಹೊರುವ ಸಾಮರ್ಥ್ಯ ನನಗಿಲ್ಲ.

॥ ಶ್ರೀ ಭಗವಾನುವಾಚ ॥

**ಸತ್ಯಮಾತ್ಥ ಮಹಾಭಾಗೇ ಮಯಿ ಸರ್ವಮಿದಂ ಜಗತ್ ।**
**ಪ್ರತಿಷ್ಠಿತಂ ನ ಮಾಂ ಶಕ್ತಾ ವೋಢುಂ ಸೇಂದ್ರಾ ದಿವೌಕಸಃ ॥೪೫॥**

**ಕಿಂತ್ವಹಂ ಸಕಲಾಂಲ್ಲೋಕಾನ್ಸದೇವಾಸುರಮಾನುಷಾನ್ ।**
**ಜಂಗಮಾನ್ ಸ್ಥಾವರಾನ್ ಸರ್ವಾಂಸ್ತ್ವಾಂ ಚ ದೇವಿ ಸಕಶ್ಯಪಾನ್ ।**
**ಧಾರಯಿಷ್ಯಾಮಿ ಭದ್ರಂ ತೇ ತದಲಂ ಸಂಭ್ರಮೇಣ ತೇ ॥೪೬॥**

**ನ ತೇ ಗ್ಲಾನಿರ್ನ ತೇ ಖೇದೋ ಗರ್ಭಸ್ಥೇ ಭವಿತಾ ಮಯಿ ।**
**ದಾಕ್ಷಾಯಣಿ ಪ್ರಸಾದಂ ತೇ ಕರೋಮ್ಯನ್ಯೈಃ ಸುದುರ್ಲಭಂ ॥೪೭॥**

**ಗರ್ಭಸ್ಥೇ ಮಯಿ ಪುತ್ರಾಣಾಂ ತವ ಯೋಽರಿರ್ಭವಿಷ್ಯತಿ ।**
**ತೇಜಸಸ್ತಸ್ಯ ಹಾನಿಂ ಚ ಕರಿಷ್ಯೇ ಮಾ ವ್ಯಥಾಂ ಕೃಥಾಃ ॥೪೮॥**

---

೪೫. ಭಗವಂತನು ಹೇಳಿದನು.—ಓ ಭಾಗ್ಯವತೀ, ನೀನು ಸತ್ಯವನ್ನು ಹೇಳಿದೆ. ಈ ಜಗತ್ತೆಲ್ಲ ನನ್ನಲ್ಲಿ ನಿಂತಿದೆ. ಇಂದ್ರಾದಿ ದೇವತೆಗಳಿಗೆ ಕೂಡ ನನ್ನನ್ನು ಧರಿಸುವ ಶಕ್ತಿಯಿಲ್ಲ.

೪೬. ಆದರೆ ದೇವತೆಗಳು, ಅಸುರರು, ಮನುಷ್ಯರು, ಸ್ಥಾವರ ಜಂಗಮಗಳು, ನೀನು ಮತ್ತು ಕಶ್ಯಪ ಈ ಎಲ್ಲರೊಡಗೂಡಿದ ಸಕಲ ಲೋಕಗಳನ್ನೂ ನಾನೇ ಧರಿಸುತ್ತೇನೆ. ನೀನು ಗಾಬರಿಗೊಳ್ಳಬೇಡ.

೪೭. ಎಲೌ ಅದಿತೀ, ನಾನು ಗರ್ಭದಲ್ಲಿರುವಾಗ ನಿನಗೆ ಆಯಾಸವಾಗಲಿ ದುಃಖವಾಗಲಿ ಆಗುವುದಿಲ್ಲ. ಇತರರಾರಿಂದಲೂ ಆಗದಂತಹ ಅನುಗ್ರಹವನ್ನು ನಿನಗೆ ನಾನು ಮಾಡುವೆನು.

೪೮. ನಾನು ಗರ್ಭದಲ್ಲಿರುವಾಗ ನಿನ್ನ ಮಕ್ಕಳ ಹಗೆಯ ಪರಾಕ್ರಮವನ್ನು ಅಡಗಿಸುವೆನು. ವ್ಯಥೆಪಡಬೇಡ.

|| ಶೌನಕ ಉವಾಚ ||

ಏವಮುಕ್ತ್ವಾ ತತಃ ಸದ್ಯೋ ಯಾತೋಂತರ್ಧಾನಮೀಶ್ವರಃ ।
ಸಾಪಿ ಕಾಲೇನ ತಂ ಗರ್ಭಮವಾಪ ಕುರುಸತ್ತಮ ||೪೯||

ಗರ್ಭಸ್ಥಿತೇ ತತಃ ಕೃಷ್ಣೇ ಚಚಾಲ ಸಕಲಾ ಕ್ಷಿತಿಃ ।
ಚಕಂಪಿರೇ ಮಹಾಶೈಲಾಃ ಕ್ಷೋಭಂ ಜಗ್ಮುಸ್ತಥಾಬ್ಧಯಃ ||೫೦||

ಯತೋ ಯತೋಽದಿತಿರ್ಯಾತಿ ದದಾತಿ ಲಲಿತಂ ಪದಂ ।
ತತಸ್ತತಃ ಕ್ಷಿತಿಃ ಖೇದಾನ್ನನಾಮ ವಸುಧಾಧಿಪ ||೫೧||

ದೈತ್ಯಾನಾಮಥ ಸರ್ವೇಷಾಂ ಗರ್ಭಸ್ಥೇ ಮಧುಸೂಧನೇ ।
ಬಭೂವ ತೇಜಸಾಂ ಹಾನಿರ್ಯಥೋಕ್ತಂ ಪರಮೇಷ್ಠಿನಾ ||೫೨||

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ವಾಮನಪ್ರಾದುರ್ಭಾವೇಽದಿತಿವರ ಪ್ರದಾನಂ ನಾಮ ಚತುಶ್ಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಃ

---

೪೯. ಶೌನಕಮುನಿ ಹೇಳಿದನು.—ಹೀಗೆ ಹೇಳಿ ಕೂಡಲೇ ಮಹಾವಿಷ್ಣುವು ಅದೃಶ್ಯನಾದನು. ಅರ್ಜುನಾ, ಸ್ವಲ್ಪಕಾಲಾನಂತರ ಆಕೆಯೂ ಕೂಡ ಗರ್ಭವತಿ ಯಾದಳು.

೫೦. ಕೃಷ್ಣನು ಅದಿತಿಯ ಗರ್ಭದಲ್ಲಿರುವಾಗ ಭೂಮಿಯೆಲ್ಲ ನಡುಗಿತು; ಮಹಾಪರ್ವತಗಳು ಅಲ್ಲಾಡಿದುವು; ಸಾಗರಗಳು ಅಲ್ಲೋಲಕಲ್ಲೋಲವಾದುವು.

೫೧. ರಾಜಾ, ಅದಿತಿಯು ಮೆಲ್ಲನೆ ಹೆಜ್ಜೆಯಿಡುತ್ತ ಯಾವಕಡೆ ಹೋಗಲಿ ಅಲ್ಲೆಲ್ಲ ಭೂಮಿಯು ಬಳಲಿಕೆಯಿಂದ ಕುಗ್ಗುತ್ತಿತ್ತು.

೫೨. ಮಧುವೈರಿಯಾದ ಮಹಾವಿಷ್ಣುವು, ಮೊದಲೇ ಹೇಳಿದಂತೆ ಅದಿತಿಯ ಗರ್ಭದಲ್ಲಿರುವಾಗಲೇ ದೈತ್ಯರೆಲ್ಲರ ತೇಜಸ್ಸೂ ಕುಗ್ಗಿಹೋಯಿತು.

## ಅಧ್ಯಾಯದ ಸಾರಾಂಶ

ವಾಮನವತಾರದ ವೃತ್ತಾಂತವು ಈ ಅಧ್ಯಾಯದಲ್ಲಿ ಪ್ರಾರಂಭವಾಗಿದೆ.

ದೈತ್ಯರು ಇಂದ್ರನನ್ನು ರಾಜ್ಯದಿಂದ ಓಡಿಸಿದರು. ದೇವತೆಗಳನ್ನೆಲ್ಲ ಜಯಿಸಿ ಅವರ ಯಜ್ಞಭಾಗಗಳನ್ನು ಕಿತ್ತುಕೊಂಡರು. ದೇವಮಾತೆಯಾದ ಅದಿತಿಯು ದುಃಖದಿಂದ ಕೊರಗುತ್ತ ಮಹಾವಿಷ್ಣುವನ್ನು ಕುರಿತು ಘೋರವಾದ ತಪಸ್ಸನ್ನು ಮಾಡಿದಳು. ವಾಸುದೇವನು ಪ್ರಸನ್ನನಾಗಿ ಆಕೆಯ ಮನೋರಥವನ್ನು ಸಲ್ಲಿಸುವುದಾಗಿ ಮಾತುಕೊಟ್ಟನು. ಇಂದ್ರನಿಗೆ ಪೂರ್ವದಂತೆ ತ್ರೈಲೋಕ್ಯಾಧಿಪತ್ಯವು ಬರಬೇಕೆಂದೂ ದೈತ್ಯರು ನಾಶವಾಗಬೇಕೆಂದೂ ಆಕೆ ಬೇಡಿದಳು. ವಿಷ್ಣು ಹಾಗೆಯೇ ಆಗಲೆಂದು ಅನುಗ್ರಹಿಸಿ, ಆಕೆಯ ಗರ್ಭದಲ್ಲಿ ತಾನೇ ಅವತರಿಸುವುದಾಗಿ ಹೇಳಿದನು. ಅದಿತಿಗೆ ಬಹು ಸಂತೋಷವಾಯಿತು. ಆಕೆ ಗರ್ಭವತಿಯಾದಳು. ದೈತ್ಯರ ತೇಜಸ್ಸು ಆಗಲೇ ಅಡಗತೊಡಗಿತು.

ಶ್ರೀಮತ್ಸ್ಯಮಹಾಪುರಾಣದಲ್ಲಿ ವಾಮನಪ್ರಾದುರ್ಭಾವದಲ್ಲಿ ಅದಿತಿ
ವರಪ್ರದಾನವೆಂಬ ಇನ್ನೂರ ನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು

## ಅಥ ಪಂಚಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಃ

॥ ಶೌನಕ ಉವಾಚ ॥

ನಿಸ್ತೇಜಸೋಽಸುರಾನ್ ದೃಷ್ಟ್ವಾ ಸಮಸ್ತಾನಸುರೇಶ್ವರಃ ।
ಪ್ರಹ್ಲಾದಮಥ ಪಪ್ರಚ್ಛ ಬಲಿರಾತ್ಮಪಿತಾಮಹಂ ॥ ೧ ॥

॥ ಬಲಿರುವಾಚ ॥

ತಾತ ನಿಸ್ತೇಜಸೋ ದೈತ್ಯಾ ನಿರ್ದಗ್ಧಾ ಇವ ವಹ್ನಿನಾ ।
ಕಿಮೇತೇ ಸಹಸೈವಾದ್ಯ ಬ್ರಹ್ಮದಂಡಹತಾ ಇವ ॥ ೨ ॥

ಅರಿಷ್ಟಂ ಕಿಂ ನು ದೈತ್ಯಾನಾಂ ಕಿಂ ಕೃತ್ಯಾ ವೈರಿನಿರ್ಮಿತಾ ।
ನಾಶಾಯೈಷಾ ಸಮುದ್ಭೂತಾ ಯಯಾ ನಿಸ್ತೇಜಸೋಽಸುರಾಃ ॥ ೩ ॥

॥ ಶೌನಕ ಉವಾಚ ॥

ಇತಿ ದೈತ್ಯಪತಿರ್ಧೀರಃ ಪೃಷ್ಟಃ ಪೌತ್ರೇಣ ಪಾರ್ಥಿವ ।
ಚಿರಂ ಧ್ಯಾತ್ವಾ ಜಗಾದೈನಮಸುರೇಂದ್ರಂ ಬಲಿಂ ತದಾ ॥ ೪ ॥

---

೧. ಶೌನಕಮುನಿ ಹೇಳಿದನು.—ಅಸುರರೆಲ್ಲರೂ ನಿಸ್ತೇಜಸ್ಕರಾದುದನ್ನು ಕಂಡು ಅವರ ರಾಜನಾದ ಬಲಿಚಕ್ರವರ್ತಿ ತನ್ನ ತಾತನಾದ ಪ್ರಹ್ಲಾದನನ್ನು ಪ್ರಶ್ನಿಸಿದನು.

೨. ಬಲಿಚಕ್ರವರ್ತಿ ಹೇಳಿದನು.—ಅಜ್ಜಾ, ಬೆಂಕಿಯಿಂದ ಸುಟ್ಟು ಹೋದಂತೆಯೂ, ಬ್ರಹ್ಮಶಾಪಕ್ಕೆ ಗುರಿಯಾದಂತೆಯೂ ದೈತ್ಯರು ಇದ್ದಕ್ಕಿದ್ದಂತೆ ನಿಸ್ತೇಜಸ್ಕರಾಗಿರುವರಲ್ಲಾ ! ಕಾರಣವೇನು ?

೩. ದೈತ್ಯರಿಗೆ ಒದಗಿರುವ ಹಾನಿಯೇನು ? ನಮ್ಮ ನಾಶಕ್ಕಾಗಿ ಶತ್ರುಗಳೇನಾದರೂ ಮಾಟಮಾಡಿರಬಹುದೋ ? ಅದರಿಂದಲೇ ಅಸುರರ ತೇಜಸ್ಸು ಅಡಗಿಹೋದಂತಿದೆ.

೪. ಶೌನಕಮುನಿ ಹೇಳಿದನು.—ಅರ್ಜುನಾ, ಮೊಮ್ಮಗನು ಇಂತು ಪ್ರಶ್ನಿಸಲು ಬುದ್ಧಿಶಾಲಿಯಾದ ಪ್ರಹ್ಲಾದನು ಬಹಳ ಹೊತ್ತು ಆಲೋಚನೆಮಾಡಿ ಅಸುರೇಂದ್ರನಾದ ಬಲಿಚಕ್ರವರ್ತಿಗೆ ಹೇಳಿದನು.

|| ಪ್ರಹ್ಲಾದ ಉವಾಚ ||

ಚಲಂತಿ ಗಿರಯೋ ಭೂಮಿರ್ಜಹಾತಿ ಸಹಜಾಂ ಧೃತಿಂ ।
ಸರ್ವೇ ಸಮುದ್ರಾಃ ಕ್ಷುಭಿತಾ ದೈತ್ಯಾ ನಿಸ್ತೇಜಸಃ ಕೃತಾಃ || ೫ ||

ಸೂರ್ಯೋದಯೋ ಯಥಾಪೂರ್ವಂ ತಥಾ ಗಚ್ಛಂತಿ ನ ಗ್ರಹಾಃ ।
ದೇವಾನಾಂ ಚ ಪರಾ ಲಕ್ಷ್ಮೀಃ ಕಾರಣೈರನುಮೀಯತೇ || ೬ ||

ಮಹದೇತನ್ಮಹಾಬಾಹೋ ಕಾರಣಂ ದಾನವೇಶ್ವರ ।
ನ ಹ್ಯಲ್ಪಮಿತಿ ಮಂತವ್ಯಂ ತ್ವಯಾ ಕಾರ್ಯಂ ಸುರಾರ್ದನ || ೭ ||

|| ಶೌನಕ ಉವಾಚ ||

ಇತ್ಯುಕ್ತ್ವಾ ದಾನವಪತಿಂ ಪ್ರಹ್ಲಾದಃ ಸೋಽಸುರೋತ್ತಮಃ ।
ಅತ್ಯಂತಭಕ್ತೋ ದೇವೇಶಂ ಜಗಾಮ ಮನಸಾ ಹರಿಂ || ೮ ||

ಸ ಧ್ಯಾನಯೋಗಂ ಕೃತ್ವಾಥ ಪ್ರಹ್ಲಾದಃ ಸುಮನೋಹರಂ ।
ವಿಚಾರಯಾಮಾಸ ತತೋ ಯತೋ ದೇವೋ ಜನಾರ್ದನಃ || ೯ ||

---

೫. ಪ್ರಹ್ಲಾದನು ಹೇಳಿದನು.—ಪರ್ವತಗಳು ಅಲ್ಲಾಡುತ್ತಿವೆ. ಭೂಮಿ ತನ್ನ ಸಹಜವಾದ ಧೈರ್ಯವನ್ನು ಬಿಟ್ಟಿದೆ. ಸಮುದ್ರಗಳೆಲ್ಲ ಅಲ್ಲೋಲಕಲ್ಲೋಲವಾಗುತ್ತಿವೆ. ದೈತ್ಯರು ತೇಜಸ್ಸನ್ನು ಕಳೆದುಕೊಂಡಿದ್ದಾರೆ.

೬. ಸೂರ್ಯೋದಯವೂ ಗ್ರಹಗಳ ಸಂಚಾರವೂ ಮೊದಲಿನಂತಿಲ್ಲ. ಈ ಕಾರಣಗಳಿಂದ ಲಕ್ಷ್ಮಿಯು ದೇವತೆಗಳನ್ನೊಲಿಯುತ್ತಾಳೆಂದು ಊಹಿಸಬೇಕಾಗಿದೆ.

೭. ಮಹಾಶೂರನೂ ದೇವಾಂತಕನೂ ಆದ ಎಲೈ ಬಲಿಚಕ್ರವರ್ತೀ, ಇದಕ್ಕೆ ಬಹು ಪ್ರಬಲವಾದ ಕಾರಣವಿದ್ದೀತು. ಅಲ್ಪವಾದುದೆಂದು ನೀನು ತಿಳಿಯಬೇಡ.

೮. ಶೌನಕಮುನಿ ಹೇಳಿದನು.—ಭಕ್ತಶ್ರೇಷ್ಠನೂ, ಅಸುರೋತ್ತಮನೂ ಆದ ಆ ಪ್ರಹ್ಲಾದನು ಬಲಿಚಕ್ರವರ್ತಿಗೆ ಹೀಗೆ ಹೇಳಿ ದೇವಾಧೀಶನಾದ ವಿಷ್ಣುವನ್ನು ಮನಸ್ಸಿನಲ್ಲಿ ಧ್ಯಾನಮಾಡಿದನು.

೯. ಪ್ರಹ್ಲಾದನು ಬಹುಮನೋಹರವಾದ ಧ್ಯಾನದೃಷ್ಟಿಯಿಂದ ವಿಷ್ಣು ಎಲ್ಲಿರುವನೆಂಬುದನ್ನು ಆಲೋಚಿಸಿದನು.

ಸ ದದರ್ಶೋದರೇಽದಿತ್ಯಾಃ ಪ್ರಹ್ಲಾದೋ ವಾಮನಾಕೃತಿಂ ।
ಅಂತಸ್ಥಾನ್ ಬಿಭ್ರತಂ ಸಪ್ತ ಲೋಕಾನಾದಿಪ್ರಜಾಪತಿಂ ॥೧೦॥

ತದಂತಸ್ಥಾನ್ ವಸೂನ್ ರುದ್ರಾನಶ್ವಿನೌ ಮರುತಸ್ತಥಾ ।
ಸಾಧ್ಯಾನ್ವಿಶ್ವಾಂಸ್ತಥಾದಿತ್ಯಾನ್ ಗಂಧರ್ವೋರಗರಾಕ್ಷಸಾನ್ ॥೧೧॥

ವಿರೋಚನಂ ಸ್ವತನಯಂ ಬಲಿಂ ಚಾಸುರನಾಯಕಂ ।
ಜಂಭಂ ಕುಜಂಭಂ ನರಕಂ ಬಾಣಮನ್ಯಾಂಸ್ತಥಾಸುರಾನ್ ॥೧೨॥

ಆತ್ಮಾನಮುರ್ವೀಂ ಗಗನಂ ವಾಯುಮಂಭೋ ಹುತಾಶನಂ ।
ಸಮುದ್ರಾನ್ದ್ರುಮಸರಿತ್ಸರಾಂಸಿ ಚ ಪಶೂನ್ ಮೃಗಾನ್ ॥೧೩॥

ವಯೋ ಮನುಷ್ಯಾನಖಿಲಾಂಸ್ತಥೈವ ಚ ಸರೀಸೃಪಾನ್ ।
ಸಮಸ್ತಲೋಕಸ್ರಷ್ಟಾರಂ ಬ್ರಹ್ಮಾಣಂ ಭವಮೇವ ಚ ।
ಗ್ರಹನಕ್ಷತ್ರನಾಗಾಂಶ್ಚ ದಕ್ಷಾದ್ಯಾಂಶ್ಚ ಪ್ರಜಾಪತೀನ್ ॥೧೪॥

---

೧೦. ಆದಿಸೃಷ್ಟಿಕರ್ತನಾದ ಪರಮಾತ್ಮನು ಏಳು ಲೋಕಗಳನ್ನೂ ತನ್ನೊಳಗೆ ಇರಿಸಿಕೊಂಡು, ವಾಮನಾಕಾರದಿಂದ ಅದಿತಿಯ ಗರ್ಭದಲ್ಲಿರುವುದನ್ನು ಪ್ರಹ್ಲಾದನು ತಿಳಿದನು.

೧೧-೧೫. ವಸುಗಳು, ರುದ್ರರು, ಅಶ್ವಿನೀದೇವತೆಗಳು, ಮರುತ್ತುಗಳು, ಸಾಧ್ಯರು, ವಿಶ್ವೇದೇವತೆಗಳು, ಆದಿತ್ಯರು, ಗಂಧರ್ವರು, ಉರಗರು, ರಾಕ್ಷಸರು, ತನ್ನ ಮಗನಾದ ವಿರೋಚನ, ಅಸುರೇಂದ್ರನಾದ ಬಲಿ, ಜಂಭ, ಕುಜಂಭ, ನರಕ, ಬಾಣ ಇನ್ನೂ ಉಳಿದ ಅಸುರನಾಯಕರು, ತಾನು, ಭೂಮಿ, ಗಗನ, ವಾಯು, ಜಲ, ಅಗ್ನಿ, ಸಮುದ್ರಗಳು, ಮರಗಳು, ನದಿಗಳು, ಸರೋವರಗಳು, ಪಶುಗಳು, ಮೃಗಗಳು, ಪಕ್ಷಿಗಳು, ಎಲ್ಲ ಮನುಷ್ಯರು, ಸರ್ಪಗಳು, ಸಕಲ ಲೋಕಗಳ ಸೃಷ್ಟಿಕರ್ತನಾದ ಬ್ರಹ್ಮ, ಗ್ರಹಗಳು, ನಕ್ಷತ್ರಗಳು, ನಾಗರು, ದಕ್ಷಾದಿಪ್ರಜಾಪತಿ

ಸ ಪಶ್ಯನ್ ವಿಸ್ಮಯಾವಿಷ್ಟಃ ಪ್ರಕೃತಿಸ್ಥಃ ಕ್ಷಣಾತ್ಪುನಃ ।
ಪ್ರಹ್ಲಾದಃ ಪ್ರಾಹ ದೈತ್ಯೇಂದ್ರಂ ಬಲಿಂ ವೈರೋಚನಿಂ ತದಾ ॥೧೫॥

॥ ಪ್ರಹ್ಲಾದ ಉವಾಚ ॥

ವತ್ಸ ಜ್ಞಾತಂ ಮಯಾ ಸರ್ವಂ ಯದರ್ಥಂ ಭವತಾಮಿಯಂ ।
ತೇಜಸೋ ಹಾನಿರುತ್ಪನ್ನಾ ತಚ್ಛೃಣು ತ್ವಮಶೇಷತಃ ॥೧೬॥

ದೇವದೇವೋ ಜಗದ್ಯೋನಿರಯೋನಿರ್ಜಗದಾದಿಕೃತ್ ।
ಅನಾದಿರಾದಿರ್ವಿಶ್ವಸ್ಯ ವರೇಣ್ಯೋ ವರದೋ ಹರಿಃ ॥೧೭॥

ಪರಾವರಾಣಾಂ ಪರಮಃ ಪರಃ ಪರವತಾಮಪಿ ।
ಪ್ರಮಾಣಂ ಚ ಪ್ರಮಾಣಾನಾಂ ಸಪ್ತಲೋಕಗುರೋರ್ಗುರುಃ ॥೧೮॥

---

ಗಳು ಇವರೆಲ್ಲರನ್ನೂ ಭಗವಂತನಲ್ಲಿ ಕಂಡು ಪ್ರಹ್ಲಾದನು ಬೆರಗಾದನು. ಸ್ವಲ್ಪ ಹೊತ್ತಿಗೆ ಮತ್ತೆ ಪೂರ್ವಸ್ಥಿತಿಗೆ ಬಂದು ವಿರೋಚನನ ಪುತ್ರನಾದ ಬಲಿಚಕ್ರವರ್ತಿಗೆ ಇಂತೆಂದನು.

೧೬. ಪ್ರಹ್ಲಾದನು ಹೇಳಿದನು.—ಮಗೂ, ನಿಮ್ಮ ತೇಜಸ್ಸು ಏಕೆ ನಷ್ಟವಾಯಿತೆಂಬುದೆಲ್ಲ ನನಗೆ ಗೊತ್ತಾಯಿತು. ಅದನ್ನು ಸಾಂಗವಾಗಿ ಹೇಳುತ್ತೇನೆ ಕೇಳು.

೧೭. ಹರಿಯು ದೇವತೆಗಳ ಅಧೀಶ್ವರ, ಜಗತ್ತುಗಳಿಗೆ ಕಾರಣ, ಜನ್ಮರಹಿತ, ಲೋಕಗಳ ಆದಿಕರ್ತ, ಅನಾದಿ, ವಿಶ್ವದ ಮೂಲ, ಎಲ್ಲರಿಂದಲೂ ಆಶ್ರಯಿಸಲ್ಪಡುವವನು ಮತ್ತು ಎಲ್ಲರಿಗೂ ವರಗಳನ್ನು ಕರುಣಿಸುವವನು ಎನಿಸಿಕೊಂಡಿದ್ದಾನೆ.

೧೮. ಮುಕ್ತರು, ಸ್ವರ್ಗಾದಿ ದಿವ್ಯಲೋಕಗಳಲ್ಲಿರುವವರು, ಪ್ರಕೃತಿಬದ್ಧರು ಇವರೆಲ್ಲರಿಗಿಂತಲೂ ಅವನು ಶ್ರೇಷ್ಠನಾಗಿರುವನು. ಎಲ್ಲ ಪ್ರಮಾಣಗಳನ್ನೂ ಮೀರಿಸಿದ ಶ್ರೇಷ್ಠವಾದ ಪ್ರಮಾಣವೂ ಅವನೇ. ಏಳುಲೋಕಗಳ ಅಧಿಪತಿಯಾದ ಬ್ರಹ್ಮನಿಗೂ ಅವನು ಗುರುವಾಗಿದ್ದಾನೆ.

ಪ್ರಭುಃ ಪ್ರಭೂಣಾಂ ಪರಮಃ ಪರಾಣಾ
ಮನಾದಿಮಧ್ಯೋ ಭಗವಾನನಂತಃ ।
ತ್ರೈಲೋಕ್ಯಮಂಶೇನ ಸನಾಥಮೇಷ
ಕರ್ತುಂ ಮಹಾತ್ಮಾಽದಿತಿಜೋಽವತೀರ್ಣಃ ||೧೯||

ನ ಯಸ್ಯ ರುದ್ರೋ ನ ಚ ಪದ್ಮಯೋನಿ
ರ್ನೇಂದ್ರೋ ನ ಸೂರ್ಯೇಂದುಮರೀಚಿಮುಖ್ಯಾಃ ।
ಜಾನಂತಿ ದೈತ್ಯಾಧಿಪ ಯತ್ಸ್ವರೂಪಂ
ಸ ವಾಸುದೇವಃ ಕಲಯಾವತೀರ್ಣಃ ||೨೦||

ಯೋಽಸೌ ಕಲಾಂಶೇನ ನೃಸಿಂಹರೂಪೀ
ಜಘಾನ ಪೂರ್ವಂ ಪಿತರಂ ಮಮೇಶಃ ।
ಯಃ ಸರ್ವಯೋಗೀಶಮನೋನಿವಾಸಃ
ಸ ವಾಸುದೇವಃ ಕಲಯಾವತೀರ್ಣಃ ||೨೧||

---

೧೯. ಪ್ರಭುಗಳಿಗೆ ಪ್ರಭುವೂ, ಉತ್ತಮರಿಗೆ ಉತ್ತಮನೂ, ಆದಿಮಧ್ಯಾಂತ ಶೂನ್ಯನೂ, ಷಡ್ಗುಣ ಪರಿಪೂರ್ಣನೂ ಆದ ಆ ಪರಮಾತ್ಮನು ಮೂರು ಲೋಕಗಳ ರಕ್ಷಣೆಗೋಸುಗ ತನ್ನ ಅಂಶದಿಂದ ಅದಿತಿಯ ಗರ್ಭದಲ್ಲಿ ಅವತರಿಸಿದ್ದಾನೆ.

೨೦. ದೈತ್ಯೇಂದ್ರಾ, ಯಾವನ ಸ್ವರೂಪವನ್ನು ಈಶ್ವರ, ಬ್ರಹ್ಮ, ಇಂದ್ರ, ಸೂರ್ಯ, ಚಂದ್ರ, ಮತ್ತು ಮರೀಚಿ ಮೊದಲಾದ ಬ್ರಹ್ಮರ್ಷಿಗಳು ಅರಿಯಲಾರರೋ ಆ ವಾಸುದೇವನು ತನ್ನ ಅಂಶದಿಂದ ಅವತರಿಸಿದ್ದಾನೆ.

೨೧. ಯಾವ ಭಗವಂತನು ಪೂರ್ವದಲ್ಲಿ ನರಸಿಂಹರೂಪನಾಗಿ ತನ್ನ ತೇಜಸ್ಸಿನ ಏಕದೇಶದಿಂದ ನನ್ನ ತಂದೆಯನ್ನು ಸಂಹರಿಸಿದನೋ, ಯಾವನು ಸಕಲ ಯೋಗೀಶ್ವರರ ಹೃದಯದಲ್ಲಿ ವಾಸಿಸುವನೋ ಆ ವಾಸುದೇವನು ತನ್ನ ಅಂಶದಿಂದ ಅವತರಿಸಿದ್ದಾನೆ.

ಯಮಕ್ಷರಂ ವೇದವಿದೋ ವಿದಿತ್ವಾ
ವಿಶಂತಿ ಯಜಾಜ್ಞ ನವಿಧೂತಪಾಪಾಃ ।
ಯಸ್ಮಿನ್ ಪ್ರವಿಷ್ಟಾ ನ ಪುನರ್ಭವಂತಿ
ತಂ ವಾಸುದೇವಂ ಪ್ರಣಮಾಮಿ ನಿತ್ಯಂ ॥೨೨॥

ಭೂತಾನ್ಯಶೇಷಾಣಿ ಯತೋ ಭವಂತಿ
ಯಥೋರ್ಮಯಸ್ತೋಯನಿಧೇರಜಸ್ರಂ ।
ಲಯಂ ಚ ಯಸ್ಮಿನ್ ಪ್ರಲಯೇ ಪ್ರಯಾಂತಿ
ತಂ ವಾಸುದೇವಂ ಪ್ರಣಮಾಮ್ಯಚಿಂತ್ಯಂ ॥೨೩॥

ನ ಯಸ್ಯ ರೂಪಂ ನ ಬಲಪ್ರಭಾವೌ
ನ ಯಸ್ಯ ಭಾವಃ ಪರಮಸ್ಯ ಪುಂಸಃ ।
ವಿಜ್ಞಾಯತೇ ಶರ್ವಪಿತಾಮಹಾದ್ಯೈ
ಸ್ತಂ ವಾಸುದೇವಂ ಪ್ರಣಮಾಮ್ಯಜಸ್ರಂ ॥೨೪॥

---

೨೨. ವೇದಜ್ಞರು ಯಾವನನ್ನು ಉಪಾಸನಮಾಡುತ್ತಾರೋ, ಯಾವನನ್ನರಿತು ಪಾಪಗಳನ್ನೆಲ್ಲ ಕಳೆದುಕೊಳ್ಳುತ್ತಾರೋ, ಯಾವನನ್ನು ಸೇರಿದ ಮೇಲೆ ಮರಳಿ ಹುಟ್ಟುವುದಿಲ್ಲವೋ ಆ ವಾಸುದೇವನನ್ನು ನಿತ್ಯವೂ ನಮಸ್ಕರಿಸುತ್ತೇನೆ.

೨೩. ಸಮುದ್ರದಲ್ಲಿ ಅಲೆಗಳು ಎಡೆಬಿಡದೆ ಏಳುವಂತೆ ಯಾವನಲ್ಲಿ ಸಕಲ ಪ್ರಾಣಿಗಳೂ ಸದಾ ಹುಟ್ಟುತ್ತಿರುವುವೋ, ಪ್ರಲಯವೊದಗಿದಾಗ ಎಲ್ಲಿ ಲಯವಾಗುವುವೋ ಆ ಅಚಿಂತ್ಯಮಹಿಮನಾದ ವಾಸುದೇವನನ್ನು ನಮಸ್ಕರಿಸುತ್ತೇನೆ.

೨೪. ಈಶ್ವರ, ಬ್ರಹ್ಮ ಮುಂತಾದವರು ಕೂಡ ಯಾವನ ರೂಪ, ಬಲ, ಪ್ರಭಾವ, ಮತ್ತು ಸಂಕಲ್ಪಗಳನ್ನು ತಿಳಿಯಲಾರರೋ ಆ ಪರಮಪುರುಷನಾದ ವಾಸುದೇವನನ್ನು ಯಾವಾಗಲೂ ನಮಸ್ಕರಿಸುತ್ತೇನೆ.

ರೂಪಸ್ಯ ಚಕ್ಷುರ್ಗ್ರಹಣೇ ತ್ವಗಿಷ್ಟಾ
ಸ್ಪರ್ಶೇ ಗ್ರಹೀತ್ರೀ ರಸನಾ ರಸಸ್ಯ ।
ಶ್ರೋತ್ರಂ ಚ ಶಬ್ದಗ್ರಹಣೇ ನರಾಣಾಂ
ಘ್ರಾಣಂ ಚ ಗಂಧಗ್ರಹಣೇ ನಿಯುಕ್ತಂ ॥೨೫॥

ಯೇನೈಕದಂಷ್ಟ್ರಾಗ್ರಸಮುದ್ಧೃತೇಯಂ
ಧರಾಽಚಲಾನ್ ಧಾರಯತೀಹ ಸರ್ವಾನ್ ।
ಯಸ್ಮಿಂಶ್ಚ ಶೇತೇ ಸಕಲಂ ಜಗಚ್ಚ
ತಮೀಶಮಾದ್ಯಂ ಪ್ರಣತೋಽಸ್ಮಿ ವಿಷ್ಣುಂ ॥೨೬॥

ನ ಘ್ರಾಣಚಕ್ಷುಃಶ್ರವಣಾದಿಭಿರ್ಯಃ
ಸರ್ವೇಶ್ವರೋ ವೇದಿತುಮಕ್ಷಯಾತ್ಮಾ ।
ಶಕ್ಯಸ್ತಮೀಡ್ಯಂ ಮನಸೈವ ದೇವಂ
ಗ್ರಾಹ್ಯಂ ನತೋಽಹಂ ಹರಿಮೀಶಿತಾರಂ ॥೨೭॥

---

೨೫. ಆ ಪರಮಾತ್ಮನು ರೂಪವನ್ನು ಗ್ರಹಿಸುವುದಕ್ಕಾಗಿ ನೇತ್ರೇಂದ್ರಿಯವನ್ನೂ, ಸ್ಪರ್ಶಿಸುವುದಕ್ಕಾಗಿ ತ್ವಗಿಂದ್ರಿಯವನ್ನೂ, ರಸವನ್ನು ತಿಳಿಯುವುದಕ್ಕಾಗಿ ಶ್ರೋತ್ರೇಂದ್ರಿಯವನ್ನೂ, ಗಂಧವನ್ನು ತಿಳಿಯುವುದಕ್ಕಾಗಿ ಘ್ರಾಣೇಂದ್ರಿಯವನ್ನೂ ಮನುಷ್ಯರಿಗೆ ಕರುಣಿಸಿದ್ದಾನೆ.

೨೬. ಪರ್ವತಗಳನ್ನೆಲ್ಲ ಹೊತ್ತುಕೊಂಡಿರುವ ಈ ಭೂಮಿಯನ್ನು ಯಾವನು ಒಂದು ಕೋರೆಹಲ್ಲಿನ ತುದಿಯಿಂದ ಎತ್ತಿದನೋ, ಜಗತ್ತೆಲ್ಲ ಯಾವನಲ್ಲಿ ವಿಶ್ರಮಿಸಿಕೊಂಡಿದೆಯೋ ಆ ಆದಿದೇವನಾದ ವಿಷ್ಣುವನ್ನು ನಮಸ್ಕರಿಸುತ್ತೇನೆ.

೨೭. ಸರ್ವೇಶ್ವರನೂ ಅಪಾರಮಹಿಮನೂ ಆದ ಯಾವ ಭಗವಂತನನ್ನು ಘ್ರಾಣ, ನೇತ್ರ, ಶ್ರೋತ್ರ ಮೊದಲಾದ ಇಂದ್ರಿಯಗಳಿಂದ ತಿಳಿಯುವುದಕ್ಕೆ ಶಕ್ಯವಿಲ್ಲವೋ, ಯಾವನನ್ನು ಮನಸ್ಸಿನಿಂದ ಮಾತ್ರ ಭಾವಿಸಬಹುದೊ, ಆ ಸ್ತೋತ್ರಾರ್ಹನೂ, ರಕ್ಷಕನೂ ಆದ ಹರಿಯನ್ನು ನಮಸ್ಕರಿಸುತ್ತೇನೆ.

ಅಂಶಾವತೀರ್ಣೇನ ಚ ಯೇನ ಗರ್ಭೇ
ಹೃತಾನಿ ತೇಜಾಂಸಿ ಮಹಾಸುರಾಣಾಂ ।
ನಮಾಮಿ ತಂ ದೇವಮನಂತಮೀಶ
ಮಶೇಷಸಂಸಾರತರೋಃ ಕುಠಾರಂ ॥೨೮॥

ದೇವೋ ಜಗದ್ಯೋನಿರಯಂ ಮಹಾತ್ಮಾ
ಸಷೋಡಶಾಂಶೇನ ಮಹಾಸುರೇಂದ್ರ ।
ಸ ದೇವಮಾತುರ್ಜಠರಂ ಪ್ರವಿಷ್ಟೋ
ಹೃತಾನಿ ವಸ್ತೇನ ಬಲಾದ್ವಪೂಂಷಿ ॥೨೯॥

॥ ಬಲಿರುವಾಚ ॥

ತಾತ ಕೋಽಯಂ ಹರಿರ್ನಾಮ ಯತೋ ನೋ ಭಯಮಾಗತಂ ।
ಸಂತಿ ಮೇ ಶತಶೋ ದೈತ್ಯಾ ವಾಸುದೇವಬಲಾಧಿಕಾಃ ॥೩೦॥

---

೨೮. ಯಾವನು ಗರ್ಭದಲ್ಲಿ ಅವತಾರಮಾಡಿದ ಮಾತ್ರದಿಂದ ಮಹಾಸುರರ ತೇಜಸ್ಸನ್ನು ನಾಶಗೊಳಿಸಿದನೋ, ಸಂಸಾರವೆಂಬ ಮರಕ್ಕೆ ಕೊಡಲಿಯಂತಿರುವ ಅನಂತನೂ ಸರ್ವೇಶ್ವರನೂ ಆದ ಆ ಭಗವಂತನನ್ನು ನಮಸ್ಕರಿಸುತ್ತೇನೆ.

೨೯. ಎಲೈ ದೈತ್ಯೇಂದ್ರನೇ, ಜಗತ್ಕಾರಣನೂ ಮಹಾತ್ಮನೂ ಆದ ಈ ಭಗವಂತನು ತನ್ನ ಹದಿನಾರು ಕಲೆಗಳಿಂದ ಎಂದರೆ ಪೂರ್ಣಾಂಶದಿಂದ ದೇವ ಮಾತೆಯಾದ ಅದಿತಿಯ ಜಠರವನ್ನು ಪ್ರವೇಶಿಸಿದನು. ಅವನು ತನ್ನ ಬಲದಿಂದ ನಿಮ್ಮ ಶರೀರಗಳನ್ನು ನಿಸ್ತೇಜವನ್ನಾಗಿ ಮಾಡಿದನು.

೩೦. ಬಲಿಚಕ್ರವರ್ತಿ ಹೇಳಿದನು.—ಅಜ್ಜಾ, ನಮಗೀಗ ಭಯವನ್ನು ತಂದೊಡ್ಡಿರುವ ಈ ಹರಿಯೆಂಬವನು ಯಾರು? ಆ ವಾಸುದೇವನಿಗಿಂತಲೂ ಬಲಾಧಿಕಾರದ ನೂರಾರು ಜನ ದೈತ್ಯರು ನನ್ನ ವಶದಲ್ಲಿದ್ದಾರೆ.

ವಿಪ್ರಚಿತ್ತಿಃ ಶಿಬಿಃ ಶಂಕುರಯುಃ ಶಂಕುಸ್ತಥೈವ ಚ ।
ಅಯುಃಶಿರಾಶ್ಚಾಶ್ವಶಿರಾ ಭಂಗಕಾರೀ ಮಹಾಹನುಃ ॥೩೧॥

ಪ್ರತಾಪಃ ಪ್ರಘಸಃ ಶುಂಭಃ ಕುಕುರಶ್ಚ ಸದುರ್ಜಯಃ ।
ಏತೇ ಚಾನ್ಯೇ ಚ ಮೇ ಸಂತಿ ದೈತೇಯಾ ದಾನವಾಸ್ತಥಾ ॥೩೨॥

ಮಹಾಬಲಾ ಮಹಾವೀರ್ಯಾ ಭೂಭಾರೋದ್ಧರಣಕ್ಷಮಾಃ ।
ಏಷಾಮೇಕೈಕಶಃ ಕೃಷ್ಣೋ ನ ವೀರ್ಯಾರ್ಧೇನ ಸಂಮಿತಃ ॥೩೩॥

॥ ಶೌನಕ ಉವಾಚ ॥

ಪೌತ್ರಸ್ಯೈತದ್ವಚಃ ಶ್ರುತ್ವಾ ಪ್ರಹ್ಲಾದೋ ದೈತ್ಯಪುಂಗವಃ ।
ಧಿಗ್ಧಿಗಿತ್ಯಾಹ ಸ ಬಲಿಂ ವೈಕುಂಠಾಕ್ಷೇಪವಾದಿನಂ ॥೩೪॥

॥ ಪ್ರಹ್ಲಾದ ಉವಾಚ ॥

ವಿನಾಶಮುಪಯಾಸ್ಯಂತಿ ಮನ್ಯೇ ದೈತೇಯದಾನವಾಃ ।
ಯೇಷಾಂ ತ್ವಮೀದೃಶೋ ರಾಜಾ ದುರ್ಬುದ್ಧಿರವಿವೇಕವಾನ್ ॥೩೫॥

---

೩೧-೩೨. ವಿಪ್ರಚಿತ್ತಿ, ಶಿಬಿ, ಶಂಕುರಯು, ಶಂಕು, ಅಯುಃಶಿರ, ಅಶ್ವಶಿರ, ಭಂಗಕಾರಿ, ಮಹಾಹನು, ಪ್ರತಾಪ, ಪ್ರಘಸ, ಶುಂಭ, ಕುಕುರ, ಮತ್ತು ಸುದುರ್ಜಯರೆಂಬ ಇನ್ನೂ ಎಷ್ಟೋಜನ ದೈತ್ಯರೂ ದಾನವರೂ ನನ್ನ ವಶದಲ್ಲಿದ್ದಾರೆ.

೩೩. ಅವರೆಲ್ಲರೂ ಮಹಾಬಲಿಷ್ಠರು, ಮಹಾವೀರರು, ಭೂಭಾರವನ್ನಿಳಿಸಲು ಸಮರ್ಥರು. ಆ ಕೃಷ್ಣನಿಗೆ ಇವರಲ್ಲೊಬ್ಬೊಬ್ಬನ ಸಾಹಸದ ಅರೆಪಾಲಿನಷ್ಟು ಕೂಡ ಇಲ್ಲ.

೩೪. ಶೌನಕನು ಹೇಳಿದನು.—ದೈತ್ಯಶ್ರೇಷ್ಠನಾದ ಪ್ರಹ್ಲಾದನು ವಿಷ್ಣುವನ್ನು ನಿಂದಿಸಿದ ತನ್ನ ಮೊಮ್ಮಗನಾದ ಬಲಿಚಕ್ರವರ್ತಿಯ ಮಾತನ್ನು ಕೇಳಿ ಅವನನ್ನು "ಛೀ! ಛೀ!" ಎಂದು ಜರೆದನು.

೩೫. ಪ್ರಹ್ಲಾದನು ಹೇಳಿದನು.—ಇಂತಹ ದುರ್ಬುದ್ಧಿಯೂ ಅವಿವೇಕಿಯೂ ಆದ ನೀನು ರಾಜನಾಗಿರುವುದರಿಂದ ದೈತ್ಯರೂ ದಾನವರೂ ನಾಶವಾಗುವರೆಂದು ಊಹಿಸುತ್ತೇನೆ.

ದೇವದೇವಂ ಮಹಾಭಾಗಂ ವಾಸುದೇವಮಜಂ ವಿಭುಂ ।
ತ್ವಾಮೃತೇ ಪಾಪಸಂಕಲ್ಪಃ ಕೋಽನ್ಯ ಏವಂ ವದಿಷ್ಯತಿ ॥೩೬॥

ಯ ಏತೇ ಭವತಾ ಪ್ರೋಕ್ತಾಃ ಸಮಸ್ತಾ ದೈತ್ಯದಾನವಾಃ ।
ಸಬ್ರಹ್ಮಕಾಸ್ತಥಾ ದೇವಾಃ ಸ್ಥಾವರಾನಂತಮೂರ್ತಯಃ ॥೩೭॥

ತ್ವಂ ಚಾಹಂ ಚ ಜಗಚ್ಚೇದಂ ಸಾದ್ರಿದ್ರುಮನದೀನದಂ ।
ಸಮುದ್ರದ್ವೀಪಲೋಕಾಶ್ಚ ನ ಸಮಂ ಕೇಶವಸ್ಯ ಹಿ ॥೩೮॥

ಯಸ್ಯಾತಿವಂದ್ಯವಂದ್ಯಸ್ಯ ವ್ಯಾಪಿನಃ ಪರಮಾತ್ಮನಃ ।
ಏಕಾಂಶೇನ ಜಗತ್ಸರ್ವಂ ಕಸ್ತಮೇವಂ ಪ್ರವಕ್ಷ್ಯತಿ ॥೩೯॥

ಋತೇ ವಿನಾಶಾಭಿಮುಖಂ ತ್ವಾಮೇಕಮವಿವೇಕಿನಂ ।
ಕುಬುದ್ಧಿಮಜಿತಾತ್ಮಾನಂ ವೃದ್ಧಾನಾಂ ಶಾಸನಾತಿಗಂ ॥೪೦॥

---

೩೬. ದೇವದೇವನೂ, ಮಹಾಮಹಿಮಶಾಲಿಯೂ, ಜನ್ಮರಹಿತನೂ, ಸರ್ವವ್ಯಾಪಕನೂ ಆದ ವಾಸುದೇವನನ್ನು ನೀನಲ್ಲದೆ ಮತ್ತಾವ ಪಾಪಬುದ್ಧಿಯವನು ತಾನೆ ಹೀಗೆ ದೂಷಿಸುವನು ?

೩೭-೩೮. ನೀನು ಈಗ ಹೇಳಿದ ಎಲ್ಲ ದೈತ್ಯದಾನವರು, ಬ್ರಹ್ಮಾದಿ ದೇವತೆಗಳು, ಸ್ಥಾವರಾದಿ ಸಕಲಪದಾರ್ಥಗಳು, ನೀನು, ನಾನು, ಪರ್ವತವೃಕ್ಷ ನದೀನದಗಳಿಂದ ತುಂಬಿದ ಈ ಜಗತ್ತು, ಸಮುದ್ರಗಳು, ದ್ವೀಪಗಳು, ಲೋಕಗಳು ಇವೆಲ್ಲ ಸೇರಿದರೂ ಕೇಶವನಿಗೆ ಸಮನಾಗಲಾರವು.

೩೯-೪೦. ಕೇಡುಗಾಲವೊದಗಿದವನೂ, ಅವಿವೇಕಿಯೂ, ಕುಬುದ್ಧಿಯೂ ಚಂಚಲಚಿತ್ತನೂ, ಹಿರಿಯರ ಶಿಕ್ಷೆಗೆ ಒಳಪಡದವನೂ ಆದ ನಿನ್ನೊಬ್ಬನನ್ನು ಬಿಟ್ಟರೆ, ತನ್ನ ಶಕ್ತಿಯ ಏಕದೇಶದಿಂದ ಜಗತ್ತೆಲ್ಲವನ್ನೂ ವ್ಯಾಪಿಸಿರುವ, ಪರಮ ಪೂಜ್ಯನೆನಿಸಿದ ಆ ಪರಮಾತ್ಮನನ್ನು ಮತ್ತಾವನು ಹೀಗೆ ಹೇಳುವನು ?

ಶೋಚ್ಯೋऽಹಂ ಯಸ್ಯ ಮೇ ಗೇಹೇ ಜಾತಸ್ತವ ಪಿತಾऽಧಮಃ ।
ಯಸ್ಯ ತ್ವಮೀದೃಶಃ ಪುತ್ರೋ ದೇವದೇವಸ್ಯ ನಿಂದಕಃ ॥೪೧॥

ತಿಷ್ಠತ್ವೇಷಾ ಹಿ ಸಂಸಾರಸಂಭೃತಾಘವಿನಾಶಿನೀ ।
ಕೃಷ್ಣೇ ಭಕ್ತಿರಹಂ ತಾವದವೇಕ್ಷ್ಯೋ ಭವತಾ ನ ಕಿಂ ॥೪೨॥

ನ ಮೇ ಪ್ರಿಯತಮಃ ಕೃಷ್ಣಾದಪಿ ದೇಹೋ ಮಹಾತ್ಮನಃ ।
ಇತಿ ಜಾನಾತ್ಯಯಂ ಲೋಕೋ ನ ಭವಾನ್ ದಿತಿಜಾಧಮ ॥೪೩॥

ಜಾನನ್ನಪಿ ಪ್ರಿಯತರಂ ಪ್ರಾಣೇಭ್ಯೋऽಪಿ ಹರಿಂ ಮಮ ।
ನಿಂದಾಂ ಕರೋಷಿ ತಸ್ಯ ತ್ವಮಕುರ್ವನ್ ಗೌರವಂ ಮಮ ॥೪೪॥

ವಿರೋಚನಸ್ತವ ಗುರುರ್ಗುರುಸ್ತಸ್ಯಾಪ್ಯಹಂ ಬಲೇ ।
ಮಮಾಪಿ ಸರ್ವಜಗತಾಂ ಗುರೋರ್ನಾರಾಯಣೋ ಗುರುಃ ॥೪೫॥

---

೪೧. ನೀಚನಾದ ಆ ನಿನ್ನ ತಂದೆ ನನ್ನ ಮನೆಯಲ್ಲಿ ಹುಟ್ಟಿದನಲ್ಲಾ! ಆದಕ್ಕಾಗಿ ನಾನು ವ್ಯಸನಪಡಬೇಕಾಗಿದೆ. ದೇವಾಧಿದೇವನಾದ ವಿಷ್ಣುವನ್ನು ನಿಂದಿಸುವ ನೀನು ಅವನಿಗೆ ಮಗನಾಗಿ ಜನಿಸಿದೆ.

೪೨. ಕೃಷ್ಣನಲ್ಲಿಟ್ಟ ಭಕ್ತಿಯು ಸಂಸಾರದಲ್ಲಿ ತುಂಬಿರುವ ಪಾಪಗಳನ್ನೆಲ್ಲ ಪರಿಹರಿಸುವುದು. ಆ ವಿಷಯವಿರಲಿ; ನನ್ನನ್ನಾದರೂ ನೀನು ನೋಡಬೇಡವೇ?

೪೩. ಮಹಾತ್ಮನಾದ ಕೃಷ್ಣನಿಗಿಂತ ನನ್ನ ದೇಹವೂ ಕೂಡ ನನಗೆ ಪ್ರಿಯತರವಾದುದಲ್ಲ. ಈ ವಿಷಯವು ಈ ಲೋಕಕ್ಕೆಲ್ಲ ಗೊತ್ತಿದೆ. ಎಲೈ ದೈತ್ಯಾಧಮ, ನಿನಗೆ ತಿಳಿಯದೇ ಹೋಯಿತೇ?

೪೪. ಹರಿಯು ಪ್ರಾಣಗಳಿಗಿಂತಲೂ ನನಗೆ ಹೆಚ್ಚು ಪ್ರೀತಿಪಾತ್ರನೆಂದು ನಿನಗೆ ಗೊತ್ತಿದೆ. ಆದರೂ ನನ್ನನ್ನೂ ಗೌರವಿಸದೆ ಆತನನ್ನು ನಿಂದಿಸುತ್ತಿದ್ದೀಯೆ.

೪೫. ಎಲೈ ಬಲೀ, ವಿರೋಚನನು ನಿನಗೆ ಗುರು. ಅವನಿಗೂ ಗುರು ನಾನು. ನನಗೂ ಎಲ್ಲ ಜಗತ್ತುಗಳಿಗೂ ಯಾವನು ಗುರುವೋ ಆ ಬ್ರಹ್ಮನಿಗೂ ಕೂಡ ನಾರಾಯಣನು ಗುರು.

ನಿಂದಾಂ ಕರೋಷಿ ಯಸ್ತಸ್ಮಿನ್ ಕೃಷ್ಣೇ ಗುರುಗುರೋರ್ಗುರೌ ।
ಯಸ್ಮಾತ್ತಸ್ಮಾದಿಹೈಶ್ವರ್ಯಾದಚಿರಾದ್ಭ್ರಂಶಮೇಷ್ಯಸಿ ॥೪೬॥

ಮಮ ದೇವೋ ಜಗನ್ನಾಥೋ ಬಲೇ ತಾವಜ್ಜನಾರ್ದನಃ ।
ಭವತ್ವಹಮುಪೇಕ್ಷ್ಯಸ್ತೇ ಪ್ರೀತಿಮಾನಸ್ತು ಮೇ ಗುರುಃ ॥೪೭॥

ಏತಾವನ್ಮಾತ್ರಮಪ್ಯೇವಂ ನಿಂದಿತಸ್ತ್ರಿಜಗದ್ಗುರುಃ ।
ನಾವೇಕ್ಷಿತಂ ತ್ವಯಾ ಯಸ್ಮಾತ್ತಸ್ಮಾಚ್ಛಾಪಂ ದದಾಮಿ ತೇ ॥೪೮॥

ಯಥಾ ಮೇ ಶಿರಸಶ್ಛೇದಾದಿದಂ ಗುರುತರಂ ವಚಃ ।
ತ್ವಯೋಕ್ತಮಚ್ಯುತಾಕ್ಷೇಪಿ ರಾಜ್ಯಭ್ರಷ್ಟಸ್ತಥಾ ಪತ ॥೪೯॥

ಯಥಾ ಚ ಕೃಷ್ಣಾನ್ನ ಪರಂ ಪರಿತ್ರಾಣಂ ಭವಾರ್ಣವೇ ।
ತಥಾಽಚಿರೇಣ ಪಶ್ಯೇಯಂ ಭವಂತಂ ರಾಜ್ಯವಿಚ್ಯುತಂ ॥೫೦॥

---

೪೬. ಗುರುವಿನ ಗುರುವಿಗೂ ಗುರುವಾದ ಆ ಕೃಷ್ಣನನ್ನು ನೀನು ನಿಂದಿಸುತ್ತಿರುವೆ. ಆದುದರಿಂದ ಬೇಗನೆ ನಿನ್ನ ಈ ಐಶ್ವರ್ಯವೆಲ್ಲ ನಿನ್ನನ್ನು ಅಗಲುವುದು.

೪೭. ಓ ಬಲೀ, ನೀನು ನನ್ನನ್ನು ಕಡೆಗಣಿಸಿದರೂ ಬಾಧಕವಿಲ್ಲ. ಜಗತ್ತುಗಳ ರಕ್ಷಕನೂ ನನ್ನ ಗುರುವೂ ಆದ ಜನಾರ್ದನನು ನನ್ನಲ್ಲಿ ಅನುಗ್ರಹವನ್ನು ತೋರಲಿ.

೪೮. ಇದೆಲ್ಲ ಹೀಗಿರಲಿ ; ವಿಚಾರಮಾಡದೆ ಮೂರುಲೋಕಗಳಿಗೂ ಪೂಜ್ಯನೆನಿಸಿದ ವಿಷ್ಣುವನ್ನು ನೀನು ನಿಂದಿಸಿದ ಕಾರಣ ನಿನಗೆ ಶಾಪವನ್ನು ಕೊಡುತ್ತೇನೆ.

೪೯. ವಿಷ್ಣುವನ್ನು ನಿಂದಿಸಿ ನೀನಾಡಿದ ಈ ಮಾತು ನನ್ನ ತಲೆಯನ್ನು ಕತ್ತರಿಸಿದುದಕ್ಕಿಂತ ಪ್ರಬಲವಾದ ಅಪರಾಧವಾಗಿದೆ. ಆದುದರಿಂದ ನೀನು ರಾಜ್ಯವನ್ನು ಕಳೆದುಕೊಂಡು ಅಧೋಗತಿಗೆ ಬೀಳು.

೫೦. ಸಂಸಾರಸಾಗರದಲ್ಲಿ ಬಿದ್ದವನನ್ನು ರಕ್ಷಿಸಬಲ್ಲವನು ಕೃಷ್ಣನಲ್ಲದೆ ಮತ್ತೊಬ್ಬರಿಲ್ಲ. ಆದಕಾರಣ ಅತಿಶೀಘ್ರವಾಗಿಯೇ ನೀನು ರಾಜ್ಯಭ್ರಷ್ಟನಾಗುವುದನ್ನು ನಾನು ನೋಡುವೆನು.

|| ಶೌನಕ ಉವಾಚ ||

**ಇತಿ ದೈತ್ಯಪತಿಃ ಶ್ರುತ್ವಾ ಗುರೋರ್ವಚನಮಪ್ರಿಯಂ ।**
**ಪ್ರಸಾದಯಾಮಾಸ ಗುರುಂ ಪ್ರಣಿಪತ್ಯ ಪುನಃ ಪುನಃ ||೫೧||**

|| ಬಲಿರುವಾಚ ||

**ಪ್ರಸೀದ ತಾತ ಮಾ ಕೋಪಂ ಕುರು ಮೋಹಹತೇ ಮಯಿ ।**
**ಬಲಾವಲೇಪಮತ್ತೇನ ಮಯೈತದ್ವಾಕ್ಯಮೀರಿತಂ ||೫೨||**

**ಮೋಹೋಪಹತವಿಜ್ಞಾನಃ ಪಾಪೋಽಹಂ ದಿತಿಜೋತ್ತಮ ।**
**ಯಚ್ಛಪ್ತೋಽಸ್ಮಿ ದುರಾಚಾರಸ್ತತ್ಸಾಧು ಭವತಾ ಕೃತಂ ||೫೩||**

**ರಾಜ್ಯಭ್ರಂಶಂ ವಸುಭ್ರಂಶಂ ಸಂಪ್ರಾಪ್ಸ್ಯಾಮೀತಿ ನ ತ್ವಹಂ ।**
**ವಿಷಣ್ಣೋಽಸ್ಮಿ ಯಥಾ ತಾತ ತವೈವಾವಿನಯೇ ಕೃತೇ ||೫೪||**

---

೫೧. ಶೌನಕಮುನಿ ಹೇಳಿದನು.—ತನ್ನ ಪಿತಾಮಹನು ಆಡಿದ ಅಪ್ರಿಯವಾದ ಮಾತನ್ನು ಕೇಳಿ ಬಲಿಚಕ್ರವರ್ತಿಯು ಅವನನ್ನು ಪುನಃಪುನಃ ನಮಸ್ಕರಿಸಿ ಸಮಾಧಾನಪಡಿಸಿದನು.

೫೨. ಬಲಿಚಕ್ರವರ್ತಿ ಹೇಳಿದನು.—ತಾತಾ, ಪ್ರಸನ್ನನಾಗು. ಮೋಹವಶನಾದ ನನ್ನ ಮೇಲೆ ಕೋಪಮಾಡಬೇಡ. ಬಲದ ಗರ್ವದಿಂದ ಮೈಮರೆತು ನಾನು ಈ ಮಾತನ್ನಾಡಿದೆನು.

೫೩. ಮೋಹದಿಂದ ನನ್ನ ಬುದ್ಧಿ ಮಂಕಾಯಿತು. ಓ ದೈತ್ಯೋತ್ತಮಾ, ನಾನು ಪಾಪಿ, ದುರಾಚಾರಿ. ನನಗೆ ನೀನು ಶಾಪವನ್ನು ಕೊಟ್ಟುದು ಸರಿ.

೫೪. "ರಾಜ್ಯವು ಹೋಗುವುದು, ಐಶ್ವರ್ಯವು ನಷ್ಟವಾಗುವುದು" ಎಂದು ನಾನು ದುಃಖಿಸುವುದಿಲ್ಲ. ತಾತಾ, "ನಿನ್ನಲ್ಲಿ ಅವಿನಯವನ್ನು ತೋರಿಸಿದೆನಲ್ಲಾ!" ಎಂಬುದೇ ನನಗೆ ದೊಡ್ಡ ದುಃಖ.

ತ್ರೈಲೋಕ್ಯರಾಜ್ಯಮೈಶ್ವರ್ಯಮನ್ಯದ್ವಾ ನಾತಿದುರ್ಲಭಂ ।
ಸಂಸಾರೇ ದುರ್ಲಭಾಸ್ತೇ ತು ಗುರವೋ ಯೇ ಭವದ್ವಿಧಾಃ ॥೫೫॥

ತತ್ಪ್ರಸೀದ ನ ಮೇ ಕೋಪಂ ಕರ್ತುಮರ್ಹಸಿ ದೈತ್ಯಪ ।
ತ್ವತ್ಕೋಪದೃಷ್ಟ್ಯಾ ತಾತಾಹಂ ಪರಿತಪ್ಯೇ ನ ಶಾಪತಃ ॥೫೬॥

॥ ಪ್ರಹ್ಲಾದ ಉವಾಚ ॥

ವತ್ಸ ಕೋಪೇನ ಮೋಹೋ ಮೇ ಜನಿತಸ್ತೇನ ತೇ ಮಯಾ ।
ಶಾಪೋ ದತ್ತೋ ವಿವೇಕಶ್ಚ ಮೋಹೇನಾಪಹೃತೋ ಮಮ ॥೫೭॥

ಯದಿ ಮೋಹೇನ ಮೇ ಜ್ಞಾನಂ ನಾऽऽಕ್ಷಿಪ್ತಂ ಸ್ಯಾನ್ಮಹಾಸುರ ।
ತತ್ಕಥಂ ಸರ್ವಗಂ ಜಾನನ್ ಹರಿಂ ಕಂಚಿಚ್ಛಪಾಮ್ಯಹಂ ॥೫೮॥

---

೫೫. ಮೂರುಲೋಕದ ಒಡೆತನ, ಐಶ್ವರ್ಯ ಅಥವಾ ಮತ್ತಾವುದಾದರೂ ಭೋಗಸಾಧನ ಇದಾವುದೂ ದುರ್ಲಭವಲ್ಲ. ಆದರೆ ನಿಮ್ಮಂತಹ ಗುರುಗಳು ಈ ಪ್ರಪಂಚದಲ್ಲಿ ಸಿಕ್ಕುವುದು ಮಾತ್ರ ಕಷ್ಟ.

೫೬. ಆದುದರಿಂದ ಪ್ರಸನ್ನನಾಗು; ದೈತ್ಯರಾಜಾ, ನನ್ನ ಮೇಲೆ ಕೋಪ ಮಾಡಬೇಡ. ತಾತಾ, ನಿನ್ನ ಕೋಪವನ್ನು ಕಂಡು ನನಗೆ ಸಂಕಟವಾಗುತ್ತದೆ; ಶಾಪದಿಂದಲ್ಲ.

೫೭. ಪ್ರಹ್ಲಾದನು ಹೇಳಿದನು.—ಮಗೂ, ಕೋಪದಿಂದ ನನಗೆ ಮೋಹ ಹುಟ್ಟಿತು. ಅದರಿಂದ ಶಾಪಕೊಟ್ಟೆನು. ಮೋಹವು ನನ್ನ ವಿವೇಕವನ್ನೂ ಸಹ ಕಳೆದುಬಿಟ್ಟಿತು.

೫೮. ದೈತ್ಯೇಂದ್ರಾ, ಮೋಹವು ನನ್ನ ತಿಳುವಳಿಕೆಯನ್ನು ಓಡಿಸದಿದ್ದರೆ, ಹರಿಯು ಸರ್ವವ್ಯಾಪಿಯಾಗಿದ್ದಾನೆಂದು ತಿಳಿದಿದ್ದರೂ ಸಹ ನಾನು ಶಾಪ ಕೊಡುತ್ತಿದ್ದೆನೇ ?

**ಯೋಽಯಂ ಶಾಪೋ ಮಯಾ ದತ್ತೋ ಭವತೋಽಸುರಪುಂಗವ ।**
**ಭಾವ್ಯಮೇತೇನ ನೂನಂ ತೇ ತಸ್ಮಾನ್ಮಾ ತ್ವಂ ವಿಷೀದ ವೈ ॥೫೯॥**

**ಅದ್ಯ ಪ್ರಭೃತಿ ದೇವೇಶೇ ಭಗವತ್ಯಚ್ಯುತೇ ಹರೌ ।**
**ಭವೇಥಾ ಭಕ್ತಿಮಾನೀಶೇ ಸ ತೇ ತ್ರಾತಾ ಭವಿಷ್ಯತಿ ॥೬೦॥**

**ಶಾಪಂ ಪ್ರಾಪ್ಯಾಥ ಮಾಂ ವೀರ ಸಂಸ್ಮರೇಥಾಃ ಸ್ಮೃತಸ್ತ್ವಯಾ ।**
**ತಥಾ ತಥಾ ಯತಿಷ್ಯೇಽಹಂ ಶ್ರೇಯಸಾ ಯೋಕ್ಷ್ಯಸೇ ಯಥಾ ॥೬೧॥**

**ಏವಮುಕ್ತ್ವಾ ಸ ದೈತ್ಯೇಂದ್ರಂ ವಿರರಾಮ ಮಹಾಮತಿಃ ।**
**ಅಜಾಯತ ಸ ಗೋವಿಂದೋ ಭಗವಾನ್ ವಾಮನಾಕೃತಿಃ ॥೬೨॥**

**ಅವತೀರ್ಣೇ ಜಗನ್ನಾಥೇ ತಸ್ಮಿನ್ ಸರ್ವಾಮರೇಶ್ವರೇ ।**
**ದೇವಾಶ್ಚ ಮುಮುಚುರ್ದುಃಖಂ ದೇವಮಾತಾಽದಿತಿಸ್ತಥಾ ॥೬೩॥**

---

೫೯. ಅಸುರೋತ್ತಮಾ, ನಾನೇನೋ ನಿನಗೆ ಶಾಪವನ್ನು ಕೊಟ್ಟುಬಿಟ್ಟೆನು. ಅದು ಹಾಗೆ ನಡೆಯಬೇಕೆಂದೇ ದೈವಸಂಕಲ್ಪವಿತ್ತು. ಆದುದರಿಂದ ನೀನು ವಿಷಾದ ಪಡಬೇಡ.

೬೦. ದೇವತೆಗಳ ಅಧಿಪತಿಯೂ, ಷಾಡ್ಗುಣ್ಯಪರಿಪೂರ್ಣನೂ, ನಾಶ ರಹಿತನೂ, ಸರ್ವೇಶ್ವರನೂ ಆದ ವಿಷ್ಣುವಿನಲ್ಲಿ ಇನ್ನುಮುಂದೆ ಭಕ್ತಿಯನ್ನಿಡು. ಅವನು ನಿನ್ನನ್ನು ರಕ್ಷಿಸುವನು.

೬೧. ವೀರಾ, ನನ್ನಿಂದ ಶಾಪವನ್ನು ಪಡೆದಿರುವೆ. ಆದರೂ ನನ್ನನ್ನು ಸ್ಮರಿಸಿಕೋ, ನಿನಗೆ ಶ್ರೇಯಸ್ಸುಂಟಾಗುವಂತೆ ನಾನು ಪ್ರಯತ್ನಮಾಡುವೆನು.

೬೨. ದೈತ್ಯರಾಜನಾದ ಬಲಿಚಕ್ರವರ್ತಿಗೆ ಹೀಗೆ ಹೇಳಿ ವಿವೇಕಶಾಲಿಯಾದ ಆ ಪ್ರಹ್ಲಾದನು ಸುಮ್ಮನಾದನು. ಪೂಜ್ಯನಾದ ಗೋವಿಂದನು ವಾಮನರೂಪದಿಂದ ಜನಿಸಿದನು.

೬೩. ಸಕಲ ದೇವಾಧಿದೇವನಾದ ಆ ಮಹಾವಿಷ್ಣುವು ಅವತಾರಮಾಡಿದಾಗ ದೇವತೆಗಳೂ ಅವರ ಮಾತೆಯಾದ ಅದಿತಿಯೂ ದುಃಖವನ್ನು ಬಿಟ್ಟುಬಿಟ್ಟರು.

ವವುರ್ವಾತಾಃ ಸುಖಸ್ಪರ್ಶಾ ವಿರಜಸ್ಕಮಭೂನ್ನಭಃ ।
ಧರ್ಮೇ ಚ ಸರ್ವಭೂತಾನಾಂ ತದಾ ಮತಿರಜಾಯತ ॥೬೪॥

ನೋದ್ವೇಗಶ್ಚಾಪ್ಯಭೂತ್ತತ್ರ ಮನುಜೇಂದ್ರಾಸುರೇಷ್ವಪಿ ।
ತದಾದಿ ಸರ್ವಭೂತಾನಾಂ ಭೂಮ್ಯಂಬರದಿವೌಕಸಾಂ ॥೬೫॥

ತಂ ಜಾತಮಾತ್ರಂ ಭಗವಾನ್ ಬ್ರಹ್ಮಾ ಲೋಕಪಿತಾಮಹಃ ।
ಜಾತಕರ್ಮಾದಿಕಂ ಕೃತ್ವಾ ಕೃಷ್ಣಂ ದೃಷ್ಟ್ವಾ ಚ ಪಾರ್ಥಿವ ।
ತುಷ್ಟಾವ ದೇವದೇವೇಶಮೃಷೀಣಾಂ ಚೈವ ಶೃಣ್ವತಾಂ ॥೬೬॥

॥ ಬ್ರಹ್ಮೋವಾಚ ॥

ಜಯಾದ್ಯೇಶ ಜಯಾಜೇಯ ಜಯ ಸರ್ವಾತ್ಮಕಾತ್ಮಕ ।
ಜಯ ಜನ್ಮಜರಾಪೇತ ಜಯಾನಂತ ಜಯಾಚ್ಯುತ ॥೬೭॥

---

೬೪. ಆಗ ಗಾಳಿ ಹಿತಕರವಾಗಿ ಬೀಸಿತು. ಆಕಾಶವು ಧೂಳಿಲ್ಲದೆ ನಿರ್ಮಲವಾಯಿತು. ಸಕಲ ಜಂತುಗಳಿಗೂ ಧರ್ಮದಲ್ಲಿ ಬುದ್ಧಿ ಪ್ರವರ್ತಿಸಿತು.

೬೫. ರಾಜರು, ಅಸುರರು, ಅಷ್ಟೇ ಏಕೆ? ಭೂಮಿ, ಆಕಾಶ ಮತ್ತು ಸ್ವರ್ಗಗಳಲ್ಲಿ ವಾಸಿಸುವ ಸಕಲ ಪ್ರಾಣಿಗಳು ಇವೆಲ್ಲಕ್ಕೂ ಅದು ಮೊದಲು ಗಾಬರಿ ಹೋಯಿತು.

೬೬. ಅರ್ಜುನಾ, ವಾಮನಮೂರ್ತಿಯು ಜನಿಸಿದ ಕೂಡಲೇ ಲೋಕಪಿತಾಮಹನಾದ ಬ್ರಹ್ಮನು ಜಾತಕರ್ಮಾದಿ ಸಂಸ್ಕಾರಗಳನ್ನೆಸಗಿ, ದೇವದೇವನಾದ ಆ ಪರಮಾತ್ಮನನ್ನು ಕಣ್ದಣಿಯೆ ನೋಡಿ, ಋಷಿಗಳೆಲ್ಲರೂ ಕೇಳುತ್ತಿರಲು ಸ್ತೋತ್ರಮಾಡಿದನು.

೬೭. ಬ್ರಹ್ಮನು ಹೇಳಿದನು.—ಆದಿದೇವಾ, ನಿನಗೆ ಜಯವಾಗಲಿ; ಜಯಿಸಲಸಾಧ್ಯನಾದವನೇ, ನಿನಗೆ ಜಯವಾಗಲಿ. ಸರ್ವಾಂತರ್ಯಾಮೀ, ನಿನಗೆ ಜಯವಾಗಲಿ. ಹುಟ್ಟು ಮುಪ್ಪುಗಳಿಲ್ಲದವನೇ, ನಿನಗೆ ಜಯವಾಗಲಿ. ಕೊನೆಯಿಲ್ಲದವನೇ, ನಿನಗೆ ಜಯವಾಗಲಿ. ನಾಶರಹಿತನೇ, ನಿನಗೆ ಜಯವಾಗಲಿ.

ಜಯಾಜಿತ ಜಯಾಜೇಯ ಜಯಾವ್ಯಕ್ತಸ್ಥಿತೇ ಜಯ ।
ಪರಮಾರ್ಥಾರ್ಥ ಸರ್ವಜ್ಞ ಜ್ಞಾನಜ್ಞೇಯಾಽಽತ್ಮನಿಃಸೃತ ॥೧೮॥

ಜಯಾಶೇಷ ಜಗತ್ಸಾಕ್ಷಿಞ್ಜಗತ್ಕರ್ತರ್ಜಗದ್ಗುರೋ ।
ಜಗತೋಽಸ್ಯಾಂತಕೃದ್ದೇವ ಸ್ಥಿತಿಂ ಪಾಲಯಿತುಂ ಜಯ ॥೧೯॥

ಜಯ ಶೇಷ ಜಯಾಶೇಷ ಜಯಾಖಿಲಹೃದಿ ಸ್ಥಿತ ।
ಜಯಾದಿಮಧ್ಯಾಂತ ಜಯ ಸರ್ವಜ್ಞಾನನಿಧೇ ಜಯ ॥೨೦॥

ಮುಮುಕ್ಷುಭಿರನಿರ್ದೇಶ್ಯ ಸ್ವಯಂ ದೃಷ್ಟ ಜಯೇಶ್ವರ ।
ಯೋಗಿನಾಂ ಮುಕ್ತಿಫಲದ ದಮಾದಿಗುಣಭೂಷಣ ॥೨೧॥

---

೧೮. ಎಲೈ ಸ್ವತಂತ್ರನೇ, ನಿನಗೆ ಜಯವಾಗಲಿ; ಕಾಮಕ್ರೋಧಾದಿಗಳಿಗೆ ವಶನಾಗದವನೇ, ನಿನಗೆ ಜಯವಾಗಲಿ; ಅಗೋಚರವಾದ ಸ್ಥಿತಿಯುಳ್ಳವನೇ, ನಿನಗೆ ಜಯವಾಗಲಿ. ಸತ್ಯಸಂಕಲ್ಪಾ, ಸರ್ವಜ್ಞಾ, ಯೋಗಜ್ಞಾನಗೋಚರಾ, ಸೇಚ್ಛಾವತಾರಾ, ನಿನಗೆ ಜಯವಾಗಲಿ.

೧೯. ಎಲ್ಲ ಲೋಕಗಳಿಗೂ ಸಾಕ್ಷಿಭೂತನಾದವನೇ, ನಿನಗೆ ಜಯವಾಗಲಿ. ಜಗತ್ಕರ್ತಾ, ನಿನಗೆ ಜಯವಾಗಲಿ. ಜಗದ್ಗುರೂ, ನಿನಗೆ ಜಯವಾಗಲಿ. ಈ ಜಗತ್ತನ್ನು ಉಪಸಂಹರಿಸುವವನೇ, ನಿನಗೆ ಜಯವಾಗಲಿ. ದೇವಾ, ಲೋಕ ಮರ್ಯಾದೆಯನ್ನು ಪಾಲಿಸುವುದಕ್ಕಾಗಿ ನಿನಗೆ ಜಯವಾಗಲಿ.

೨೦. ಜಗತ್ತೆಲ್ಲ ನಾಶವಾದ ಮೇಲೆ ಉಳಿಯತಕ್ಕವನೇ, ನಿನಗೆ ಜಯವಾಗಲಿ. ಸಕಲವಸ್ತುರೂಪನೇ, ನಿನಗೆ ಜಯವಾಗಲಿ. ಎಲ್ಲರ ಹೃದಯದಲ್ಲಿ ನೆಲಸಿರುವಾತನೇ, ನಿನಗೆ ಜಯವಾಗಲಿ. ಜಗತ್ತಿನ ಆದಿಮಧ್ಯಾಂತಗಳಲ್ಲಿರುವವನೇ, ನಿನಗೆ ಜಯವಾಗಲಿ. ಸಕಲ ಜ್ಞಾನಗಳಿಗೂ ಆಶ್ರಯನೇ, ನಿನಗೆ ಜಯವಾಗಲಿ.

೨೧. ಈಶ್ವರಾ, ಬೇಡದಿದ್ದರೂ ನೀನು ಮೋಕ್ಷಾರ್ಹರಾದವರಿಗೆ ಮೋಕ್ಷವನ್ನು ಕೊಡುವೆ. ನಿನ್ನ ಮಹಿಮಾದಿಗಳೆಲ್ಲವೂ ನಿನಗೊಬ್ಬನಿಗೇ ಗೊತ್ತು. ಯೋಗಿಗಳಿಗೆ ಮುಕ್ತಿಫಲವನ್ನು ಕರುಣಿಸುವೆ. ಇಂದ್ರಿಯಜಯವೇ ಮೊದಲಾದ ಗುಣಗಳಿಂದ ಭೂಷಿತನಾಗಿರುವೆ.

ಜಯಾತಿಸೂಕ್ಷ್ಮ ದುರ್ಜ್ಞೇಯ ಜಯ ಸ್ಥೂಲಜಗನ್ಮಯ ।
ಜಯ ಸ್ಥೂಲಾತಿಸೂಕ್ಷ್ಮ ತ್ವಂ ಜಯಾತೀಂದ್ರಿಯ ಸೇಂದ್ರಿಯ ॥೭೨॥

ಜಯ ಸ್ವಮಾಯಾಯೋಗಸ್ಥ ಶೇಷಭೋಗಶಯಾಕ್ಷರ ।
ಜಯೈಕದಂಷ್ಟ್ರಾಪ್ರಾಂತಾಗ್ರಸಮುದ್ಧೃತವಸುಂಧರ ॥೭೩॥

ನೃಕೇಸರಿಙ್ಞ್ಯರಾತಿವಕ್ಷಃಸ್ಥಲವಿದಾರಣ ।
ಸಾಂಪ್ರತಂ ಜಯ ವಿಶ್ವಾತ್ಮಙ್ಞ್ಯ ವಾಮನ ಕೇಶವ ॥೭೪॥

ನಿಜಮಾಯಾಪಟಚ್ಛನ್ನಜಗನ್ಮೂರ್ತೇ ಜನಾರ್ದನ ।
ಜಯಾಚಿಂತ್ಯ ಜಯಾನೇಕಸ್ವರೂಪೈಕವಿಧ ಪ್ರಭೋ ॥೭೫॥

---

೭೨. ಅತಿಸೂಕ್ಷ್ಮರೂಪನೂ, ದುರ್ಜ್ಞೇಯನೂ, ಸ್ಥೂಲರೂಪನೂ, ಜಗನ್ಮಯನೂ ಆದ ದೇವಾ, ಜಯಶಾಲಿಯಾಗು ನೀನು ಸೂಕ್ಷ್ಮಕ್ಕಿಂತಲೂ ಸೂಕ್ಷ್ಮವಾಗಿರುವೆ. ದೊಡ್ಡದಕ್ಕಿಂತಲೂ ದೊಡ್ಡದಾಗಿರುವೆ. ನೀನು ಜೀವರಾಶಿಗಳ ಪ್ರಾಕೃತಮಯವಾದ ಇಂದ್ರಿಯಗಳಿಗೆ ಅಗೋಚರನಾಗಿರುವೆ. ಆದರೆ ಅಪ್ರಾಕೃತ ವಾದ ಇಂದ್ರಿಯಗಳಿಂದ ಕೂಡಿರುವೆ.

೭೩. ಸ್ವೇಚ್ಛೆಯಿಂದ ಪ್ರಕೃತಿಸಂಬಂಧವನ್ನು ಪಡೆಯುವಾತನೇ, ಆದಿಶೇಷನ ಮೇಲೆ ಪವಡಿಸಿದವನೇ, ನಿರ್ವಿಕಾರನೇ, ಜಯಶೀಲನಾಗು. ವರಾಹಾವತಾರದಲ್ಲಿ ಒಂದು ಕೋರೆಹಲ್ಲಿನ ತುದಿಯಿಂದ ಭೂಮಿಯನ್ನೆತ್ತಿದವನೇ, ಜಯಶಾಲಿಯಾಗು.

೭೪. ಶತ್ರುವಿನ ವಕ್ಷಃಸ್ಥಲವನ್ನು ಸೀಳಿದ ನೃಸಿಂಹರೂಪನೇ, ಜಯ ಶಾಲಿಯಾಗು. ವಿಶ್ವರೂಪಾ, ಪ್ರಕೃತದಲ್ಲಿ ವಾಮನಾವತಾರವನ್ನು ಮಾಡಿದ ಕೇಶವಾ, ಜಯಶಾಲಿಯಾಗು.

೭೫. ಜನಾರ್ದನಾ, ನೀನು ಮಾಯೆಯೆಂಬ ತೆರೆಯನ್ನು ಹಾಕಿಕೊಂಡು ಲೋಕಕ್ಕೆ ಗೋಚರಿಸದೆ ಮರೆಯಾಗಿರುವೆ. ನಿನಗೆ ಜಯವಾಗಲಿ. ಎಲೈ ಊಹಾ ತೀತನೇ, ಜಯಶಾಲಿಯಾಗು. ನಾನಾರೂಪಗಳನ್ನು ಧರಿಸುವಾತನೇ, ನಿರ್ವಿ ಕಾರನೇ, ಜಗನ್ನಾಥಾ, ಜಯಶಾಲಿಯಾಗು.

ವರ್ಧಸ್ವ ವರ್ಧಿತಾಶೇಷ ವಿಕಾರಪ್ರಕೃತೇ ಹರೇ ।
ತ್ವಯ್ಯೇಷಾ ಜಗತಾಮೀಶೇ ಸಂಸ್ಥಿತಾ ಧರ್ಮಪದ್ಧತಿಃ ॥೭೬॥

ನ ತ್ವಾಮಹಂ ನ ಚೇಶಾನೋ ನೇಂದ್ರಾದ್ಯಾಸ್ತ್ರಿದಶಾ ಹರೇ ।
ನ ಜ್ಞಾತುಮೀಶಾ ಮುನಯಃ ಸನಕಾದ್ಯಾ ನ ಯೋಗಿನಃ ॥೭೭॥

ತ್ವನ್ಮಾಯಾಪಟಸಂವೀತೋ ಜಗತ್ಯತ್ರ ಜಗತ್ಪತೇ ।
ಕಸ್ತ್ವಾಂ ವೇತ್ಸ್ಯತಿ ಸರ್ವೇಶ ತ್ವತ್ಪ್ರಸಾದಂ ವಿನಾ ನರಃ ॥೭೮॥

ತ್ವಮೇವಾಽಽರಾಧಿತೋ ಯೇನ ಪ್ರಸಾದಸುಮುಖ ಪ್ರಭೋ ।
ಸ ಏವ ಕೇವಲೋ ದೇವ ವೇತ್ತಿ ತ್ವಾಂ ನೇತರೇ ಜನಾಃ ॥೭೯॥

ನಂದೀಶ್ವರೇಶ್ವರೇಶಾನ ಪ್ರಭೋ ವರ್ಧಸ್ವ ವಾಮನ ।
ಪ್ರಭವಾಯಾಸ್ಯ ವಿಶ್ವಸ್ಯ ವಿಶ್ವಾತ್ಮನ್ ಪೃಥುಲೋಚನ ॥೮೦॥

---

೭೬. "ಪ್ರಕೃತಿಯ ವಿಕಾರವೆನಿಸಿದ ಚರಾಚರಾತ್ಮಕವಾದ ಸಕಲ ಪ್ರಪಂಚ ವನ್ನು ಪರಿಪೋಷಿಸುವ ಎಲೈ ಹರಿಯೇ, ನೀನು ಸರ್ವೋತ್ಕೃಷ್ಟನಾಗಿರು. ಈ ಸನಾತನಧರ್ಮದ ಮರ್ಯಾದೆಯು ಜಗದೀಶ್ವರನಾದ ನಿನ್ನಿಂದ ನಿಂತಿರುವುದು.

೭೭. ನಾನು, ಈಶ್ವರ, ಇಂದ್ರಾದಿದೇವತೆಗಳು, ಮುನಿಗಳು ಮತ್ತು ಸನಕಾದಿಯೋಗಿಗಳು ಯಾರೂ ನಿನ್ನ ಮಾಹಾತ್ಮ್ಯವು ಇಷ್ಟೇ ಸರಿಯೆಂದು ತಿಳಿಯಲಾರೆವು.

೭೮. ಜಗನ್ನಾಥಾ, ನಿನ್ನ ಮಾಯೆಯೆಂಬ ತೆರೆ ಈ ಲೋಕದಲ್ಲಿ ಎಲ್ಲರನ್ನೂ ಆವರಿಸಿಕೊಂಡಿದೆ. ಸರ್ವೇಶ್ವರಾ, ನಿನ್ನ ಅನುಗ್ರಹವಿಲ್ಲದೆ ಯಾವ ಮನುಷ್ಯನು ತಾನೆ ನಿನ್ನನ್ನರಿಯಬಲ್ಲನು ?

೭೯. ಭಕ್ತರಲ್ಲಿ ಅನುಗ್ರಹಗಳನ್ನು ತೋರುವ ಸೌಮ್ಯಮುಖನಾದ ಓ ದೇವಾ, ಯಾವನು ನಿನ್ನನ್ನು ಒಲಿಸುತ್ತಾನೋ, ಅವನೊಬ್ಬನೇ ನಿನ್ನನ್ನರಿಯಬಲ್ಲನು. ಉಳಿದ ಜನರು ಅರಿಯಲಾರರು.

೮೦. ಸರ್ವಾತ್ಮಾ, ವಿಶಾಲಾಕ್ಷಾ, ನಂದೀಶ್ವರ, ಈಶ್ವರ ಮತ್ತು ಈಶಾನ ಇವರೆಲ್ಲರ ಸ್ವರೂಪವೂ ನೀನೆ. ಪ್ರಭೂ, ವಾಮನಾ, ಈ ಜಗತ್ತಿನ ಶ್ರೇಯಸ್ಸಿಗಾಗಿ ನೀನು ಸರ್ವೋತ್ಕೃಷ್ಟನಾಗಿರು.

## || ಶೌನಕ ಉವಾಚ ||

ಏವಂ ಸ್ತುತೋ ಹೃಷೀಕೇಶಃ ಸ ತದಾ ವಾಮನಾಕೃತಿಃ |
ಪ್ರಹಸ್ಯ ಭಾವಗಂಭೀರಮುವಾಚಾಬ್ಜಸಮುದ್ಭವಂ ||೪೧||

ಸ್ತುತೋಽಹಂ ಭವತಾ ಪೂರ್ವಮಿಂದ್ರಾದ್ಯೈಃ ಕಶ್ಯಪೇನ ಚ |
ಮಯಾ ಚ ವಃ ಪ್ರತಿಜ್ಞಾತಮಿಂದ್ರಸ್ಯ ಭುವನತ್ರಯಂ ||೪೨||

ಭೂಯಶ್ಚಾಹಂ ಸ್ತುತೋಽದಿತ್ಯಾ ತಸ್ಯಾಶ್ಚಾಪಿ ಪ್ರತಿಶ್ರುತಂ |
ಯಥಾ ಶಕ್ರಾಯ ದಾಸ್ಯಾಮಿ ತ್ರೈಲೋಕ್ಯಂ ಹತಕಂಟಕಂ ||೪೩||

ಸೋಽಹಂ ತಥಾ ಕರಿಷ್ಯಾಮಿ ಯಥೇಂದ್ರೋ ಜಗತಃ ಪತಿಃ |
ಭವಿಷ್ಯತಿ ಸಹಸ್ರಾಕ್ಷಃ ಸತ್ಯಮೇತದ್ಬ್ರವೀಮಿ ವಃ ||೪೪||

ತತಃ ಕೃಷ್ಣಾಜಿನಂ ಬ್ರಹ್ಮಾ ಹೃಷೀಕೇಶಾಯ ದತ್ತವಾನ್ |
ಯಜ್ಞೋಪವೀತಂ ಭಗವಾನ್ ದದೌ ತಸ್ಮೈ ಬೃಹಸ್ಪತಿಃ ||೪೫||

---

೪೧. ಶೌನಕಮುನಿ ಹೇಳಿದನು.—ಬ್ರಹ್ಮನು ಹೀಗೆ ಸ್ತೋತ್ರಮಾಡಲು ವಾಮನರೂಪಧಾರಿಯಾದ ಮಹಾವಿಷ್ಣು ಗಂಭೀರಭಾವದಿಂದ ನಕ್ಕು ಇಂತೆಂದನು.

೪೨. ಪೂರ್ವದಲ್ಲಿ ನೀನೂ, ಇಂದ್ರಾದಿದೇವತೆಗಳೂ, ಕಶ್ಯಪನೂ ನನ್ನನ್ನು ಸ್ತುತಿಸಿದಿರಿ. ಇಂದ್ರನಿಗೆ ಮೂರುಲೋಕಗಳ ಒಡೆತನವನ್ನು ಕರುಣಿಸುವುದಾಗಿ ನಾನೂ ಮಾತುಕೊಟ್ಟೆನು.

೪೩. ಅದಿತಿಯು ಮತ್ತೆ ನನ್ನನ್ನು ಸ್ತುತಿಸಿದಳು. ಮೂರುಲೋಕಗಳನ್ನೂ ಕೂಡ ಶತ್ರುರಹಿತವಾಗಿ ಇಂದ್ರನಿಗೆ ಕೊಡುವೆನೆಂದು ಅವಳಿಗೆ ಭಾಷೆಯಿತ್ತೆನು.

೪೪. ಆದುದರಿಂದ ದೇವೇಂದ್ರನಿಗೆ ಜಗತ್ತಿನ ಒಡೆತನವು ಸಿಕ್ಕುವಂತೆ ಮಾಡುತ್ತೇನೆ. ನಾನು ಹೇಳುವುದು ಸತ್ಯ.

೪೫. ಬಳಿಕ ವಾಮನಮೂರ್ತಿಗೆ ಬ್ರಹ್ಮನು ಕೃಷ್ಣಾಜಿನವನ್ನೂ, ಪೂಜ್ಯನಾದ ಬೃಹಸ್ಪತಿ ಯಜ್ಞೋಪವೀತವನ್ನೂ ಕೊಟ್ಟರು.

ಆಷಾಢಮದದಾದ್ದಂಡಂ ಮರೀಚಿರ್ಬ್ರಹ್ಮಣಃ ಸುತಃ ।
ಕಮಂಡಲುಂ ವಸಿಷ್ಠಶ್ಚ ಕೌಶಂ ವೇದಮಥಾಂಗಿರಾಃ ॥೮೬॥

ಅಕ್ಷಸೂತ್ರಂ ಚ ಪುಲಹಃ ಪುಲಸ್ತ್ಯಃ ಸಿತವಾಸಸೀ ।
ಉಪತಸ್ಥುಶ್ಚ ತಂ ವೇದಾಃ ಪ್ರಣವಸ್ವರಭೂಷಣಾಃ ।
ಶಾಸ್ತ್ರಾಣ್ಯಶೇಷಾಣಿ ತಥಾ ಸಾಂಖ್ಯಯೋಗೋಕ್ತಯಶ್ಚ ಯಾಃ ॥೮೭॥

ಸ ವಾಮನೋ ಜಟೀ ದಂಡೀ ಛತ್ರೀ ಧೃತಕಮಂಡಲುಃ ।
ಸರ್ವವೇದಮಯೋ ಭೂಪ ಬಲೇರಧ್ವರಮಭ್ಯಗಾತ್ ॥೮೮॥

ಯತ್ರ ಯತ್ರ ಪದಂ ಭೂಮೌ ಭೂಭಾಗೇ ವಾಮನೋ ದದೌ ।
ದದಾತಿ ಭೂಮಿರ್ವಿವರಂ ತತ್ರ ತತ್ರಾತಿಪೀಡಿತಾ ॥೮೯॥

ಸ ವಾಮನೋ ಜಡಗತಿರ್ಮೃದು ಗಚ್ಛನ್ ಸಪರ್ವತಾಂ ।
ಸಾಬ್ಧಿದ್ವೀಪವತೀಂ ಸರ್ವಾಂ ಚಾಲಯಾಮಾಸ ಮೇದಿನೀಂ ॥೯೦॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ವಾಮನಪ್ರಾದುರ್ಭಾವೇ ವಾಮನೋತ್ಪತ್ತಿರ್ನಾಮ ಪಂಚಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಃ

---

೮೬. ಬ್ರಹ್ಮಪುತ್ರನಾದ ಮರೀಚಿ ಪಾಲಾಶದಂಡವನ್ನೂ, ವಸಿಷ್ಠನು ಕಮಂಡಲುವನ್ನೂ, ಅಂಗಿರಸನು ದರ್ಭೆಯ ಪವಿತ್ರವನ್ನೂ ಕೊಟ್ಟರು.

೮೭. ಪುಲಹನು ಜಪಸರವನ್ನೂ, ಪುಲಸ್ತ್ಯನು ಬಿಳಿಯ ಪಂಚೆಗಳನ್ನೂ ಕೊಟ್ಟರು ಪ್ರಣವಸ್ವರಸಹಿತವಾದ ಸಕಲ ವೇದಗಳೂ, ಸಕಲ ಶಾಸ್ತ್ರಗಳೂ, ಸಾಂಖ್ಯಯೋಗ ದರ್ಶನಗಳೂ ವಾಮನಮೂರ್ತಿಯನ್ನು ಆಶ್ರಯಿಸಿದುವು.

೮೮. ಅರ್ಜುನಾ, ಜಟೆ, ದಂಡ, ಛತ್ರ ಮತ್ತು ಕಮಂಡಲುಗಳನ್ನು ಧರಿಸಿ ಸಕಲ ವೇದಮಯನಾದ ಆ ವಾಮನನು ಬಲಿಚಕ್ರವರ್ತಿಯ ಯಾಗಕ್ಕೆ ಹೋದನು.

೮೯. ವಾಮನನು ಭೂಮಿಯ ಮೇಲೆ ಎಲ್ಲೆಲ್ಲಿ ಹೆಜ್ಜೆಯಿಡುತ್ತಾನೋ ಅಲ್ಲೆಲ್ಲ ಭಾರವನ್ನು ತಾಳಲಾರದೆ ನೆಲ ಬಿರುಕುಬಿಡುತ್ತಿತ್ತು.

೯೦. ಭಗವಂತನಾದ ವಾಮನನು ನಿಧಾನವಾಗಿ ನಡೆದನು. ಮೆಲ್ಲಗೆ ಹೆಜ್ಜೆಯೂರಿದರೆ ಪರ್ವತಗಳು, ಸಾಗರಗಳು ಮತ್ತು ದ್ವೀಪಗಳಿಂದ ಸಹಿತವಾದ ಭೂಮಂಡಲವೆಲ್ಲವೂ ನಡುಗುತ್ತಿತ್ತು.

## ಅಧ್ಯಾಯದ ಸಾರಾಂಶ

**ಈ ಅಧ್ಯಾಯದಲ್ಲಿ ವಾಮನಮೂರ್ತಿಯ ಅವತಾರವು ವರ್ಣಿಸಲ್ಪಟ್ಟಿದೆ.**

ದೈತ್ಯರು ನಿಸ್ತೇಜಸ್ಕರಾದುದನ್ನು ನೋಡಿ ಬಲಿಚಕ್ರವರ್ತಿ ತನ್ನ ಪಿತಾಮಹನಾದ ಪ್ರಹ್ಲಾದನನ್ನು ಇದಕ್ಕೆ ಕಾರಣವೇನೆಂದು ವಿಚಾರಿಸಿದನು. ಭಕ್ತಶ್ರೇಷ್ಠನಾದ ಆತನು ಧ್ಯಾನಯೋಗದಿಂದ ಚಿಂತಿಸಿ "ಮಹಾಮಹಿಮನಾದ ನಾರಾಯಣನು ಅದಿತಿಯ ಗರ್ಭದಲ್ಲಿ ಅವತರಿಸಿದ್ದಾನೆ. ಅದರಿಂದ ನಿಮ್ಮ ತೇಜಸ್ಸೆಲ್ಲ ಅಡಗಿ ಹೋಗಿದೆ" ಎಂದು ಉತ್ತರವಿತ್ತನು. "ನನ್ನ ದೈತ್ಯವೀರರ ಮುಂದೆ ವಿಷ್ಣುವಿನ ಪರಾಕ್ರಮವು ಏನು ದೊಡ್ಡದು''? ಎಂದು ಬಲಿ ಹಾಸ್ಯಮಾಡಿದನು. ಪ್ರಹ್ಲಾದನಿಗೆ ಕೋಪ ಬಂದಿತು. "ನಿನ್ನ ಈ ಅವಿನಯದಿಂದ ನಿನ್ನ ರಾಜ್ಯೈಶ್ವರ್ಯವೆಲ್ಲ ಶೀಘ್ರವಾಗಿ ನಾಶವಾಗುವುದು'' ಎಂದು ಅವನಿಗೆ ಶಾಪವಿತ್ತನು.

ಇತ್ತ ಅದಿತಿಯ ಗರ್ಭದಲ್ಲಿ ವಾಮನಮೂರ್ತಿಯು ಜನ್ಮತಾಳಿದನು. ಬ್ರಹ್ಮನು ಸಕಲ ದೇವತೆಗಳೊಡಗೂಡಿ ಬಂದು ಆತನನ್ನು ಸ್ತುತಿಸಿದನು. ಭಗವಂತನು ಮೆಚ್ಚಿ ದೈತ್ಯರನ್ನು ಧ್ವಂಸಮಾಡಿ ಇಂದ್ರನಿಗೆ ತ್ರೈಲೋಕ್ಯಾಧಿಪತ್ಯವನ್ನು ಕೊಡುತ್ತೇನೆಂದು ಭರವಸೆಯಿತ್ತನು. ಬ್ರಹ್ಮಾದಿದೇವತೆಗಳು ಆತನಿಗೆ ದಂಡ, ಛತ್ರ, ಕಮಂಡಲು ಮುಂತಾದುವುಗಳನ್ನು ಕೊಟ್ಟರು. ವಾಮನಮೂರ್ತಿಯು ಅವೆಲ್ಲವನ್ನೂ ಧರಿಸಿ ಬಲಿಚಕ್ರವರ್ತಿ ಯಾಗಮಾಡುತ್ತಿದ್ದಲ್ಲಿಗೆ ತೆರಳಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ವಾಮನಪ್ರಾದುರ್ಭಾವದಲ್ಲಿ
ವಾಮನೋತ್ಪತ್ತಿಯೆಂಬ ಇನ್ನೂರ ನಲವತ್ತೈದನೆಯ ಅಧ್ಯಾಯವು ಮುಗಿದುದು

## ಅಥ ಷಟ್ಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಃ

|| ಶೌನಕ ಉವಾಚ ||

ಸಪರ್ವತವನಾಮುರ್ವೀಂ ದೃಷ್ಟ್ವಾ ಸಂಕ್ಷೋಭಿತಾಂ ಬಲಿಃ ।
ಪಪ್ರಚ್ಛೋಶನಸಂ ಶುದ್ಧಂ ಪ್ರಣಿಪತ್ಯ ಕೃತಾಂಜಲಿಃ || ೧ ||

ಆಚಾರ್ಯ ಕ್ಷೋಭಮಾಯಾತಾ ಸಾಬ್ಧಿಭೂಭೃದ್ವನಾ ಮಹೀ ।
ಕಸ್ಮಾಚ್ಚ ನಾಽಽಸುರಾನ್ ಭಾಗಾನ್ ಪ್ರತಿಗೃಹ್ಣಂತಿ ವಹ್ನಯಃ || ೨ ||

ಇತಿ ಪೃಷ್ಟೋಽಥ ಬಲಿನಾ ಕಾವ್ಯೋ ವೇದವಿದಾಂ ವರಃ ।
ಉವಾಚ ದೈತ್ಯಾಧಿಪತಿಂ ಚಿರಂ ಧ್ಯಾತ್ವಾ ಮಹಾಮತಿಃ || ೩ ||

ಅವತೀರ್ಣೋ ಜಗದ್ಯೋನಿಃ ಕಶ್ಯಪಸ್ಯ ಗೃಹೇ ಹರಿಃ ।
ವಾಮನೇನೇಹ ರೂಪೇಣ ಜಗದಾತ್ಮಾ ಸನಾತನಃ || ೪ ||

---

೧. ಶೌನಕಮುನಿ ಹೇಳಿದನು.—ಪರ್ವತಗಳು, ಅರಣ್ಯಗಳು ಇವೆಲ್ಲವು ಗಳೊಡನೆ ಸಕಲ ಭೂಮಂಡವೂ ಅಲುಗಾಡಿದುದನ್ನು ಕಂಡು ಬಲಿಚಕ್ರವರ್ತಿ ಆಚಾರ್ಯನೂ ಪವಿತ್ರಾತ್ಮನೂ ಆದ ಶುಕ್ರಾಚಾರ್ಯನಿಗೆ ನಮಸ್ಕಾರಮಾಡಿ ಇಂತು ಪ್ರಶ್ನಿಸಿದನು.

೨. ಆಚಾರ್ಯಾ, ಸಾಗರಗಳಿಂದಲೂ ಪರ್ವತಗಳಿಂದಲೂ ಅರಣ್ಯಗಳಿಂದಲೂ ಕೂಡಿದ ಭೂಮಿ ನಡುಗುತ್ತಿದೆ. ಹೋಮಾಗ್ನಿಗಳು ಅಸುರರು ಅರ್ಪಿಸಿದ ಆಹುತಿಗಳನ್ನು ಸ್ವೀಕರಿಸುವುದಿಲ್ಲ. ಇದರ ಕಾರಣವೇನು ?

೩. ಬಲಿಚಕ್ರವರ್ತಿಯು ಹೀಗೆ ಪ್ರಶ್ನಿಸಲು, ವೇದಜ್ಞರಲ್ಲಿ ಅಗ್ರಗಣ್ಯನೂ ಮಹಾಪ್ರಾಜ್ಞನೂ ಆದ ಶುಕ್ರಾಚಾರ್ಯನು ಬಹಳ ಹೊತ್ತು ಆಲೋಚಿಸಿ ದೈತ್ಯೇಂದ್ರನಿಗೆ ಇಂತೆಂದನು.

೪. ಜಗತ್ಕಾರಣನೂ, ಸರ್ವಾಂತರ್ಯಾಮಿಯೂ, ಸನಾತನನೂ ಆದ ಹರಿಯು ಕಶ್ಯಪಮಹರ್ಷಿಯ ಮನೆಯಲ್ಲಿ ವಾಮನನ ರೂಪದಿಂದ ಅವತರಿಸಿದ್ದಾನೆ.

**ಸ ಏಷ ಯಜ್ಞಮಾಯಾತಿ ತವ ದಾನವಪುಂಗವ ।
ತತ್ಪಾದನ್ಯಾಸವಿಕ್ಷೇಪಾದಿಯಂ ಪ್ರಚಲಿತಾ ಮಹೀ ।
ಕಂಪಂತೇ ಗಿರಿಯಶ್ಚಾಮೀ ಕ್ಷುಭಿತೋ ಮಕರಾಲಯಃ ॥ ೫ ॥**

**ನೈನಂ ಭೂತಪತಿಂ ಭೂಮಿಃ ಸಮರ್ಥಾ ವೋಢುಮೀಶ್ವರಂ ।
ನ ದೇವಾಸುರಗಂಧರ್ವಯಕ್ಷರಾಕ್ಷಸಕಿನ್ನರಾಃ ॥ ೬ ॥**

**ಅನೇನೈವ ಧೃತಾ ಭೂಮಿರಾಪೋಽಗ್ನಿಃ ಪವನೋ ನಭಃ ।
ಧಾರಯತ್ಯಖಿಲಾನ್ ದೇವೋ ಮನ್ವಾದೀಂಶ್ಚ ಮಹಾಸುರ ॥ ೭ ॥**

**ಇಯಮೇವ ಜಗದ್ಧೇತೋರ್ಮಾಯಾ ಕೃಷ್ಣಸ್ಯ ಗಹ್ವರೀ ।
ಧಾರ್ಯಧಾರಕಭಾವೇನ ಯಯಾ ಸಂಪೀಡಿತಂ ಜಗತ್ ॥ ೮ ॥**

---

೫. ಓ ದಾನವೋತ್ತಮಾ, ಅವನು ಈಗ ನಿನ್ನ ಯಜ್ಞಕ್ಕೆ ಬರುತ್ತಿದ್ದಾನೆ. ಅವನು ಹೆಜ್ಜೆಯಿಡುವುದರಿಂದ ಈ ಭೂಮಿ ನಡುಗುತ್ತಿದೆ. ಬೆಟ್ಟಗಳು ಅಲ್ಲಾಡುತ್ತಿವೆ. ಸಾಗರವು ಅಲ್ಲೋಲಕಲ್ಲೋಲವಾಗುತ್ತಿದೆ.

೬. ದೇವತೆಗಳು, ಅಸುರರು, ಗಂಧರ್ವರು, ಯಕ್ಷರು, ರಾಕ್ಷಸರು ಮತ್ತು ಕಿನ್ನರರು ಇವರೆಲ್ಲರಿಗೂ ಆಶ್ರಯವನ್ನು ಕೊಟ್ಟಿರುವ ಭೂಮಿಯು ಸರ್ವೇಶ್ವರನೂ ಸರ್ವಭೂತಗಳ ಅಧಿಪತಿಯೂ ಆದ ಈ ಭಗವಂತನನ್ನು ಹೊರಲಾರದು.

೭. ಅಸುರೋತ್ತಮಾ, ಭೂಮಿ, ಜಲ, ಅಗ್ನಿ, ವಾಯು, ಆಕಾಶಗಳೆಂಬ ಪಂಚಭೂತಗಳನ್ನೂ, ಮನುವೇ ಮುಂತಾದ ಸಕಲ ದೇವತೆಗಳನ್ನೂ ಈ ದೇವನೇ ಧರಿಸಿದ್ದಾನೆ.

೮. ಜಗತ್ತಿನ ವ್ಯಾಪಾರವು ನಡೆಯುವ ಸಲುವಾಗಿ ಕೃಷ್ಣನು ತನ್ನ ಮಾಯೆಯನ್ನು ಬೀರಿದ್ದಾನೆ. ಅದನ್ನು ತಿಳಿಯುವುದು ಅಸಾಧ್ಯ. ಅದು ಭಗವಂತನನ್ನು ಆಶ್ರಯಿಸಿಕೊಂಡು ಲೋಕಕ್ಕೆಲ್ಲ ತಾನು ಆಧಾರವಾಗಿದೆ. ಜಗತ್ತೆಲ್ಲ ಮೋಹಗೊಂಡಿರುವುದು ಅದರಿಂದಲೇ.

ತತ್ಸಂನಿಧಾನಾದಸುರಾ ಭಾಗಾರ್ಹಾ ನಾಸುರೋತ್ತಮ ।
ಭುಂಜತೇ ನಾಸುರಾನ್ ಭಾಗಾನಮೀ ತೇನೈವ ಚಾಗ್ನಯಃ ॥ ೯ ॥

॥ ಬಲಿರುವಾಚ ॥

ಧನ್ಯೋಽಹಂ ಕೃತಪುಣ್ಯಶ್ಚ ಯನ್ಮೇ ಯಜ್ಞಪತಿಃ ಸ್ವಯಂ ।
ಯಜ್ಞಮಭ್ಯಾಗತೋ ಬ್ರಹ್ಮನ್ ಮತ್ತಃ ಕೋನ್ಯೋಽಧಿಕಃ ಪುಮಾನ್ ॥೧೦॥

ಯಂ ಯೋಗಿನಃ ಸದಾ ಯುಕ್ತಾಃ ಪರಮಾತ್ಮಾನಮವ್ಯಯಂ ।
ದ್ರಷ್ಟುಮಿಚ್ಛಂತಿ ದೇವೇಶಂ ಸ ಮೇಽಧ್ವರಮುಪೈಷ್ಯತಿ ॥೧೧॥

ಹೋತಾ ಭಾಗಪ್ರದೋಽಯಂ ಚ ಯಮುದ್ಗಾತಾ ಚ ಗಾಯತಿ ।
ತಮಧ್ವರೇಶ್ವರಂ ವಿಷ್ಣುಂ ಮತ್ತಃ ಕೋಽನ್ಯ ಉಪೈಷ್ಯತಿ ॥೧೨॥

---

೯. ದೈತ್ಯೇಂದ್ರಾ, ಆ ವಿಷ್ಣುವಿನ ತಂತ್ರದಿಂದ ಅಸುರರಿಗೆ ಯಜ್ಞಭಾಗವು ತಪ್ಪಿಹೋಗಿದೆ. ಅವನಿಂದಲೇ ಈ ಹೋಮಾಗ್ನಿಗಳು ಅಸುರರು ಕೊಡುವ ಯಜ್ಞ ಭಾಗಗಳನ್ನು ಸ್ವೀಕರಿಸುತ್ತಿಲ್ಲ.

೧೦. ಬಲಿಚಕ್ರವರ್ತಿ ಹೇಳಿದನು.—ಬ್ರಾಹ್ಮಣೋತ್ತಮಾ, ನಾನು ಧನ್ಯ; ಪುಣ್ಯವಂತ. ಏಕೆಂದರೆ, ಯಜ್ಞಗಳ ಅಧಿದೇವತೆಯೆನಿಸಿದ ಸಾಕ್ಷಾದ್ವಿಷ್ಣುವೇ ನನ್ನ ಯಜ್ಞಕ್ಕೆ ಬಂದಿದ್ದಾನೆ. ನನಗಿಂತ ಮೇಲಾದವರು ಯಾರು?

೧೧. ನಿರ್ವಿಕಾರನೆನಿಸಿದ ಯಾವ ಪರಮಾತ್ಮನನ್ನು ಯೋಗಿಗಳು ಜಿತ ಮನಸ್ಸಿನಿಂದ ಸದಾ ನೋಡಬಯಸುತ್ತಾರೆಯೋ, ಆ ದೇವದೇವನು ನನ್ನ ಯಜ್ಞಕ್ಕೆ ಬರುತ್ತಾನೆ.

೧೨. ಈ ಹೋತೃವು ಯಜ್ಞಭಾಗವನ್ನು ಯಾರಿಗೋಸ್ಕರ ಕೊಡುತ್ತಾನೆಯೋ, ಉದ್ಗಾತೃವು ಯಾರನ್ನು ಉದ್ದೇಶಿಸಿ ಗಾನಮಾಡುತ್ತಾನೋ, ಆ ಯಜ್ಞಪತಿಯಾದ ವಿಷ್ಣುವಿನ ಬಳಿಗೆ ನಾನಲ್ಲದೆ ಮತ್ತಾರು ಹೋಗುವರು?

ಸರ್ವೇಶ್ವರೇಶ್ವರೇ ಕೃಷ್ಣೇ ಮದಧ್ವರಮುಪಾಗತೇ ।
ಯನ್ಮಯಾ ಕಾರ್ಯ ಕರ್ತವ್ಯಂ ತನ್ಮಮಾದೇಷ್ಟುಮರ್ಹಸಿ ॥೧೩॥

॥ ಶುಕ್ರ ಉವಾಚ ॥

ಯಜ್ಞಭಾಗಭುಜೋ ದೇವಾ ವೇದಪ್ರಾಮಾಣ್ಯತೋಽಸುರ ।
ತ್ವಯಾ ತು ದಾನವಾ ದೈತ್ಯಾ ಮಖಭಾಗಭುಜಃ ಕೃತಾಃ ॥೧೪॥

ಅಯಂ ಚ ದೇವಃ ಸತ್ವಸ್ಥಃ ಕರೋತಿ ಸ್ಥಿತಿಪಾಲನಂ ।
ವಿಸೃಷ್ಟೇರನು ಚಾಂತೇ ಚ ಸ್ವಯಮತ್ತಿ ಪ್ರಜಾಃ ಪ್ರಭುಃ ॥೧೫॥

ತ್ವತ್ಕೃತೇ ಭವಿತಾ ನೂನಂ ದೇವೋ ವಿಷ್ಣುಃ ಸ್ಥಿತೌ ಸ್ಥಿತಃ ।
ವಿದಿತ್ವೈತನ್ಮಹಾಭಾಗ ಕುರು ಯತ್ತೇ ಮನೋಗತಂ ॥೧೬॥

---

೧೩. ಪ್ರಭುಗಳೆಲ್ಲರಿಗೂ ಪ್ರಭುವಾದ ಆ ಕೃಷ್ಣನು ನನ್ನ ಯಾಗಕ್ಕೆ ಬಂದಾಗ ನಾನು ಮಾಡಬೇಕಾದುದೇನು ? ಎಲೈ ಶುಕ್ರಾಚಾರ್ಯನೇ, ಅದನ್ನು ನನಗೆ ತಿಳಿಸಿಕೊಡು.

೧೪. ಶುಕ್ರಾಚಾರ್ಯನು ಹೇಳಿದನು.—ದೈತ್ಯೇಂದ್ರಾ, ವೇದದ ಪ್ರಮಾಣ ದಂತೆ ದೇವತೆಗಳಿಗೆ ಯಜ್ಞದಲ್ಲಿ ಭಾಗವು ಸಲ್ಲಬೇಕು. ನೀನಾವರೋ ಈಗ ದೈತ್ಯ ರನ್ನೂ ದಾನವರನ್ನೂ ಯಜ್ಞಭಾಗಿಗಳನ್ನಾಗಿ ಮಾಡಿರುವೆ.

೧೫. ನಾನಾವಿಧವಾದ ಸೃಷ್ಟಿ ನಡೆದ ತರುವಾಯ ಸತ್ವ ಗುಣಪೂರ್ಣನಾದ ಈ ದೇವನು ಧರ್ಮದ ಎಲ್ಲೆಕಟ್ಟನ್ನು ರಕ್ಷಿಸುವನು. ಪ್ರಪಂಚದ ಕೊನೆಗಾಲವು ಬಂತೆಂದರೆ ಈ ಪ್ರಭುವೇ ಸಕಲ ಜೀವರಾಶಿಗಳನ್ನೂ ತನ್ನಲ್ಲಿ ಉಪಸಂಹರಿಸಿ ಕೊಳ್ಳುವನು.

೧೬. ಸ್ಥಿತಿಪಾಲನಕಾರ್ಯದಲ್ಲಿ ನಿರತನಾದ, ಲೀಲಾಪೂರ್ಣನಾದ ಮಹಾ ವಿಷ್ಣು ನಿನ್ನ ಸಲುವಾಗಿ ಈಗ ಯಜ್ಞಗೃಹಕ್ಕೆ ಬರುತ್ತಿರುವನು. ಓ ಮಹಾತ್ಮಾ, ಇದನ್ನರಿತು ನಿನ್ನ ಮನಸ್ಸಿಗೆ ಯುಕ್ತವಾಗಿ ತೋರಿದಂತೆ ಯತ್ನಿಸು.

ತ್ವಯಾ ಹಿ ದೈತ್ಯಾಧಿಪತೇ ಸ್ವಲ್ಪಕೇಽಪಿ ಹಿ ವಸ್ತುನಿ ।
ಪ್ರತಿಜ್ಞಾ ನ ಹಿ ವೋಢವ್ಯಾ ವಾಚ್ಯಂ ಸಾಮ ವೃಥಾಫಲಂ ॥೧೭॥

ನಾಲಂ ದಾತುಮಹಂ ದೇವ ದೈತ್ಯ ವಾಚ್ಯಂ ತ್ವಯಾ ವಚಃ ।
ಕೃಷ್ಣಸ್ಯ ದೇವಭೂತ್ಯರ್ಥಂ ಪ್ರವೃತ್ತಸ್ಯ ಮಹಾಸುರ ॥೧೮॥

॥ ಬಲಿರುವಾಚ ॥

ಬ್ರಹ್ಮನ್ ಕಥಮಹಂ ಬ್ರೂಯಾಮನ್ಯೇನಾಪಿ ಹಿ ಯಾಚಿತಃ ।
ನಾಸ್ತೀತಿ ಕಿಮು ದೇವೇನ ಸಂಸಾರಾಘೌಘಹಾರಿಣಾ ॥೧೯॥

ವ್ರತೋಪವಾಸೈರ್ವಿವಿಧೈಃ ಪ್ರತಿಸಂಗ್ರಾಹ್ಯತೇ ಹರಿಃ ।
ಸ ಚೇದ್ವಕ್ಷ್ಯತಿ ದೇಹೀತಿ ಗೋವಿಂದಃ ಕಿಮತೋಽಧಿಕಂ ॥೨೦॥

---

೧೭. ದೈತ್ಯರಾಜಾ, ಎಂತಹ ಅಲ್ಪವಿಷಯಕ್ಕೇ ಆಗಲಿ, ನೀನು ಪ್ರತಿಜ್ಞೆಯನ್ನು ಮಾಡಿ ಮಾತಿಗೆ ಸಿಕ್ಕಿಕೊಳ್ಳಬೇಡ. ನಿಷ್ಪ್ರಯೋಜನವಾದ ಮೃದು ವಚನಗಳನ್ನು ಆಡುತ್ತಿರು.

೧೮. ದೈತ್ಯವರ್ಯಾ, ಆ ಕೃಷ್ಣನು ದೇವತೆಗಳ ಹಿತಸಾಧನೆಯಲ್ಲಿ ಆಸಕ್ತನಾಗಿದ್ದಾನೆ. ಆತನು ನಿನ್ನ ಬಳಿಗೆ ಬಂದು ಕೇಳಿದಾಗ " ದೇವಾ, ನಿನಗೆ ನಾನೇನು ಕೊಟ್ಟೇನು ? ನನಗೆ ಆ ಸಾಮರ್ಥ್ಯವೆಲ್ಲಿ ಬಂದೀತು ?" ಎಂದು ನೀನು ಹೇಳಬೇಕು.

೧೯. ಬಲಿಚಕ್ರವರ್ತಿ ಹೇಳಿದನು.— ದ್ವಿಜೋತ್ತಮಾ, ಸಾಮಾನ್ಯನಾದ ಯಾವನೊಬ್ಬ ಮನುಷ್ಯನು ಬೇಡಿದರೂ ಇಲ್ಲವೆಂದು ನಾನು ಹೇಳಲಾರೆ. ಹೀಗಿರುವಾಗ ಸಂಸಾರದಲ್ಲಿ ಒದಗುವ ಪಾಪಗಳ ರಾಶಿಯನ್ನೆಲ್ಲ ಪರಿಹರಿಸುವ ಆ ದೇವದೇವನು ಯಾಚಿಸಿದರೆ ಇಲ್ಲವೆಂದು ಹೇಳಲು ಬಾಯಿ ತಾನೆ ಹೇಗೆ ಬಂದೀತು ?

೨೦. ಬಗೆಬಗೆಯ ವ್ರತಗಳನ್ನೂ ಉಪವಾಸಗಳನ್ನೂ ಮಾಡಿ ಹರಿಯನ್ನು ಒಲಿಸಿಕೊಳ್ಳುತ್ತಾರೆ. ಆ ಗೋವಿಂದನೇ ಬಂದು ಕೈಯೊಡ್ಡಿ "ಕೊಡು" ಎಂದು ಕೇಳಿದರೆ, ಅದಕ್ಕಿಂತಲೂ ಮಿಗಿಲಾದ ಭಾಗ್ಯವುಂಟೆ ?

ಯದರ್ಥಮುಪಹಾರಾಢ್ಯಾಸ್ತಪಃಶೌಚಗುಣಾನ್ವಿತೈಃ ।
ಯಜ್ಞಾಃ ಕ್ರಿಯಂತೇ ದೇವೇಶಃ ಸ ಮಾಂ ದೇಹೀತಿ ವಕ್ಷ್ಯತಿ ॥೨೧॥

ತತ್ಸಾಧು ಸುಕೃತಂ ಕರ್ಮ ತಪಃ ಸುಚರಿತಂ ಮಮ ।
ಯನ್ಮಯಾ ದತ್ತಮೀಶೇಶಃ ಸ್ವಯಮಾದಾಸ್ಯತೇ ಹರಿಃ ॥೨೨॥

ನಾಸ್ತಿ ನಾಸ್ತೀತ್ಯಹಂ ವಕ್ಷ್ಯೇ ತಮುಪ್ಯಾಗತಮೀಶ್ವರಂ ।
ಯದಿ ವಂಚಾಮಿ ತಂ ಪ್ರಾಪ್ತಂ ವೃಥಾ ಸ್ಯಾಜ್ಜನ್ಮನಃ ಫಲಂ ॥೨೩॥

ಯಜ್ಞೇಽಸ್ಮಿನ್ ಯದಿ ಯಜ್ಞೇಶೋ ಯಾಚತೇ ಮಾಂ ಜನಾರ್ದನಃ ।
ನಿಜಮೂರ್ಧಾನಮಪ್ಯತ್ರ ತದ್ದಾಸ್ಯಾಮ್ಯವಿಚಾರಿತಂ ॥೨೪॥

---

೨೧. ತಪಸ್ಸು, ಇಂದ್ರಿಯಶುದ್ಧಿ ಮುಂತಾದ ಸದ್ಗುಣಗಳಿಂದ ಪೂರ್ಣರಾದ ಮಹಾತ್ಮರು ಯಾರ ಪ್ರೀತಿಗೋಸ್ಕರ ವಿಧವಿಧವಾದ ಉಪಹಾರಗಳನ್ನು ಸಮರ್ಪಿಸಿ ಯಜ್ಞಗಳನ್ನು ಮಾಡುತ್ತಾರೋ, ಆ ದೇವೇಶನೇ ನನ್ನ ಬಳಿಗೆ ಬಂದು "ದೇಹಿ" ಎನ್ನುತ್ತಾನಲ್ಲವೆ!

೨೨. ಆದುದರಿಂದ ನನ್ನ ಪುಣ್ಯವು ಸಾರ್ಥಕವಾಯಿತು. ನಾನು ಮಾಡಿದ ತಪಸ್ಸು ಸಫಲವಾಯಿತು. ಏಕೆಂದರೆ ನಾನು ಕೊಟ್ಟುದನ್ನು ಸರ್ವೇಶ್ವರನಾದ ಹರಿಯು ಕೈಯಾರ ತೆಗೆದುಕೊಳ್ಳುವನಷ್ಟೆ!

೨೩. "ನನ್ನಲ್ಲಿ ಏನೂ ಇಲ್ಲ; ನನ್ನಲ್ಲಿ ಏನೂ ಇಲ್ಲ" ಎಂದು ನಾನು ಹೇಳಲೇ? ನನ್ನ ಬಳಿಗೆ ಪ್ರಯತ್ನಪೂರ್ವಕವಾಗಿ ಬಂದ ಆ ದೇವಾಧಿದೇವನಿಗೂ ಮೋಸಮಾಡಿದ ಮೇಲೆ ನಾನು ಜೀವಿಸಿದ್ದು ತಾನೆ ಫಲವೇನು?

೨೪. ಯಜ್ಞೇಶ್ವರನೆಂದು ಪ್ರಖ್ಯಾತನಾದ ಆ ಜನಾರ್ದನನು ಈ ನನ್ನ ಯಜ್ಞದ ಸಮಯದಲ್ಲಿ ನನ್ನನ್ನು ಯಾಚಿಸಿದರೆ ನನ್ನ ತಲೆಯನ್ನಾದರೂ ಒಪ್ಪಿಸಿ ಬಿಡುವೆನು. ಮತ್ತಾವ ವಿಚಾರವನ್ನೂ ಮಾಡೆನು.

ನಾಸ್ತೀತಿ ಯನ್ಮಯಾ ನೋಕ್ತಮನ್ಯೇಷಾಮಪಿ ಯಾಚತಾಂ ।
ವಕ್ಷ್ಯಾಮಿ ಕಥಮಾಯಾತೇ ತದನಭ್ಯಸ್ತಮಚ್ಯುತೇ ॥೨೫॥

ಶ್ಲಾಘ್ಯ ಏವ ಹಿ ವೀರಾಣಾಂ ದಾನಾದಾಪತ್ಸಮಾಗಮಃ ।
ನಾಬಾಧಕಾರಿ ಯದ್ದಾನಂ ತದಂಗಮಲವತ್ಸ್ಮೃತಂ ॥೨೬॥

ಮದ್ರಾಜ್ಯೇ ನಾಸುಖೀ ಕಶ್ಚಿನ್ನ ದರಿದ್ರೋ ನ ಚಾತುರಃ ।
ನಾಭೂಷಿತೋ ನಚೋದ್ವಿಗ್ನೋ ನ ಸ್ರಗಾದಿವಿವರ್ಜಿತಃ ॥೨೭॥

ಹೃಷ್ಟಸ್ತುಷ್ಟಃ ಸುಗಂಧಿಶ್ಚ ತೃಪ್ತಃ ಸರ್ವಸುಖಾನ್ವಿತಃ ।
ಜನಃ ಸರ್ವೋ ಮಹಾಭಾಗ ಕಿಮುತಾಹಂ ಸದಾ ಸುಖೀ ॥೨೮॥

---

೨೫. ನಾಡಾಡಿಗಳಾದ ಭಿಕ್ಷುಕರಿಗೆ ಕೂಡ ಇದುವರಿಗೆ ನಾನು "ನಾಸ್ತಿ" ಎಂದು ಹೇಳಿಲ್ಲ. ನನಗೆ ಆ ಉತ್ತರವನ್ನು ಕೊಟ್ಟೇ ಅಭ್ಯಾಸವಿಲ್ಲ. ಅವಾಪ್ತಸಮಸ್ತಕಾಮನಾದ ಆ ವಿಷ್ಣು ಬಂದು ಕೇಳಿದ ಮೇಲೆ ಆ ಮಾತನ್ನು ಅವನಿಗೆ ಹೇಗೆ ತಾನೆ ಹೇಳಲಿ ?

೨೬. ದಾನದಿಂದ ವಿಪತ್ತು ಸಂಭವಿಸಿದರೆ ವೀರರಿಗೆ ಅದು ಶ್ಲಾಘ್ಯವೇ ಸರಿ. ಯಾವ ವಿಧವಾದ ತ್ಯಾಗವೂ ಇಲ್ಲದ ದಾನವು ಅಷ್ಟೇನೂ ದೊಡ್ಡದಲ್ಲ ; ಮೈಯ ಕೊಳೆಯನ್ನು ಕಳೆದಂತೆ ಅದೊಂದು ಅಲ್ಪವಿಷಯ.

೨೭. ನನ್ನ ರಾಜ್ಯದಲ್ಲಿ ಸುಖಹೀನನಾಗಲಿ, ದರಿದ್ರನಾಗಲಿ, ರೋಗಿಯಾಗಲಿ, ಅಲಂಕಾರರಹಿತನಾಗಲಿ, ಹೆದರಿದವನಾಗಲಿ, ಪುಷ್ಪಹಾರಾದಿ ಭೋಗಸಾಧನವಿಲ್ಲದವನಾಗಲಿ ಒಬ್ಬನೂ ಇಲ್ಲ.

೨೮. ಓ ಮಹಾತ್ಮಾ, ನನ್ನ ರಾಜ್ಯದಲ್ಲಿ ಪ್ರಜೆಗಳೆಲ್ಲರೂ ಹರ್ಷದಿಂದಿದ್ದಾರೆ. ತೃಪ್ತರಾಗಿದ್ದಾರೆ. ಎಲ್ಲ ಸುಖಗಳಿಂದಲೂ ಪೂರ್ಣರಾಗಿದ್ದಾರೆ. ಇನ್ನೇನು ಬೇಕು ? ನಾನು ಯಾವಾಗಲೂ ಸುಖವಾಗಿಯೇ ಇದ್ದೇನೆ.

ಏತದ್ವಿಸೃಷ್ಟಮಾತ್ರಂ ಯದ್ದಾನಬೀಜಂ ಮಹಾಫಲಂ ।
ವಿದಿತಂ ಭೃಗುಶಾರ್ದೂಲ ಮಯ್ಯೈತತ್ತ್ವತ್ಪ್ರಸಾದತಃ ॥ ॥೨೯॥

ಏತದ್ವಿಜಾನತೋ ದಾನಬೀಜಂ ಪತತಿ ಚೇದ್ಗುರೋ ।
ಜನಾರ್ದನಮಹಾಪಾತ್ರೇ ಕಿಂ ನ ಪ್ರಾಪ್ತಂ ತತೋ ಮಯಾ ॥೩೦॥

ಮತ್ತೋ ದಾನಮವಾಪ್ಯೇಶೋ ಯದಿ ಪುಷ್ಣಾತಿ ದೇವತಾಃ ।
ಉಪಭೋಗಾದ್ದಶಗುಣಂ ದಾನಂ ಶ್ಲಾಘ್ಯತಮಂ ಮಮ ॥೩೧॥

ಮತ್ಪ್ರಸಾದಪರೋ ನೂನಂ ಯಜ್ಞೇನಾರಾಧಿತೋ ಹರಿಃ ।
ತೇನಾಭ್ಯೇತಿ ನ ಸಂದೇಹೋ ದರ್ಶನಾದುಪಕಾರಕೃತ್ ॥೩೨॥

---

೨೯. ಈ ಕೃಷ್ಣನ ಕೈಯಲ್ಲಿ ಬಿದ್ದರೆ ಸಾಕು ; ನಾನು ಕೊಡುವ ಅಲ್ಪವಾದ ದಾನವೆಂಬ ಬೀಜವು ಅನಂತವಾದ ಫಲವನ್ನು ಕೊಡುತ್ತದೆ. ಎಲೈ ಭೃಗು ವಂಶೋತ್ತಮಾ, ನಿನ್ನ ಅನುಗ್ರಹದಿಂದ ನನಗೆ ಇದು ಗೊತ್ತಾಯಿತು.

೩೦. ಆಚಾರ್ಯಾ, ಲೋಕದಲ್ಲಿ ಜನಾರ್ದನನಿಗಿಂತಲೂ ಶ್ರೇಷ್ಠವಾದ ಪಾತ್ರವಿಲ್ಲ. ಇದನ್ನು ನಾನು ಬಲ್ಲೆ. ನನ್ನ ಅತ್ಯಲ್ಪವಾದ ದಾನವು ಅವನ ಕೈಯನ್ನು ಸೇರಿದ ಬಳಿಕ ನನಗೆ ಯಾವ ಫಲವು ತಾನೆ ದೊರಕದು ?

೩೧. ವಿಷ್ಣುವು ನನ್ನಿಂದ ದಾನವನ್ನು ಪಡೆದು ದೇವತೆಗಳನ್ನು ಸಲಹಿದರೆ, ಅವರ ಉಪಭೋಗದಿಂದ ನನಗೆ ಬರುತ್ತಿದ್ದ ಫಲಕ್ಕಿಂತ ಹತ್ತರಷ್ಟು ಫಲವನ್ನು ಅದು ನನಗೆ ಕೊಡುತ್ತದೆ. ಆ ದಾನವೇ ಅತ್ಯಂತ ಶ್ಲಾಘ್ಯವಾದುದೆಂದು ನಾನು ತಿಳಿಯುತ್ತೇನೆ.

೩೨. ನನ್ನ ಯಜ್ಞದಿಂದ ಆರಾಧಿತನಾಗಿ ಹರಿಯು ನನಗೆ ಅನುಗ್ರಹವನ್ನು ಮಾಡಬೇಕೆಂದು ಬಯಸುತ್ತಾನೆ. ಆದುದರಿಂದ ದರ್ಶನವನ್ನಿತ್ತು ಉಪಕಾರ ಮಾಡಲೋಸುಗವೇ ಅವನು ಇಲ್ಲಿಗೆ ಬರುತ್ತಾನೆ.

**ಅಥ ಕೋಽಪೇನ ಚಾಭ್ಯೇತಿ ದೇವಭಾಗೋಽಪರೋಧಿನಂ ।**
**ಮಾಂ ನಿಹಂತುಮನಾಶ್ಚೈವ ವಧಃ ಶ್ಲಾಘ್ಯತರೋಽಚ್ಯುತಾತ್ ॥೩೩॥**

**ತನ್ಮಯಂ ಸರ್ವಮೇವೇದಂ ನಾಪ್ರಾಪ್ಯಂ ಯಸ್ಯ ವಿದ್ಯತೇ ॥**
**ಸ ಮಾಂ ಯಾಚಿತುಮಭ್ಯೇತಿ ನಾನುಗ್ರಹಮೃತೇ ಹರಿಃ ॥೩೪॥**

**ಯಃ ಸೃಜತ್ಯಾತ್ಮಭೂಃ ಸರ್ವಂ ಚೇತಸ್ಯೈವ ಚ ಸಂಹರೇತ್ ।**
**ಸ ಮಾಂ ಹಂತುಂ ಹೃಷೀಕೇಶಃ ಕಥಂ ಸ್ವಯಮುಪೇಷ್ಯತಿ ॥೩೫॥**

**ಏತದ್ವಿದಿತ್ವಾ ನ ಗುರೋ ದಾನವಿಘ್ನಕರೇಣ ಮೇ**
**ತ್ವಯಾ ಭಾವ್ಯಂ ಜಗನ್ನಾಥೇ ಗೋವಿಂದೇ ಸಮುಪಸ್ಥಿತೇ ॥೩೬॥**

**॥ ಶೌನಕ ಉವಾಚ ॥**

**ಇತ್ಯೇವಂ ವದತಸ್ತಸ್ಯ ಸಂಪ್ರಾಪ್ತಃ ಸ ಜಗತ್ಪತಿಃ ।**
**ಸರ್ವದೇವಮಯೋಽಚಿಂತ್ಯೋ ಮಾಯಾವಾಮನರೂಪಧೃಕ್ ॥೩೭॥**

---

೩೩. ಹಾಗಲ್ಲದೆ ದೇವತೆಗಳಿಗೆ ಯಜ್ಞಭಾಗವನ್ನು ನಾನು ತಪ್ಪಿಸಿದೆನೆಂದು ಕೋಪಗೊಂಡು ನನ್ನನ್ನು ಕೊಲ್ಲುವುದಕ್ಕೆ ಬಂದರೂ, ಆ ಅಚ್ಯುತನ ಕೈಯಲ್ಲಿ ಸತ್ತರೆ ನನಗೆ ಮತ್ತಷ್ಟು ಶ್ರೇಯಸ್ಸೇ ಆಗುವುದು.

೩೪. ಲೋಕದಲ್ಲಿರುವ ಇದೆಲ್ಲವೂ ಅವನದೇ; ಅವನಿಗೆ ದುರ್ಲಭವಾದುದು ಯಾವುದೂ ಇಲ್ಲ. ಹೀಗಿರುವಾಗ ಅವನು ನನ್ನಲ್ಲಿ ಯಾಚನೆಗಾಗಿ ಬರುವುದೆಂದರೆ, ನನ್ನನ್ನು ಅನುಗ್ರಹಿಸುವುದಕ್ಕೋಸ್ಕರವಲ್ಲದೆ ಬೇರೆ ಯಾವುದಕ್ಕೂ ಅಲ್ಲ.

೩೫. ಸ್ವೇಚ್ಛಾವತಾರಿಯಾದ ಯಾವ ಮಹಾವಿಷ್ಣುವು ಸಂಕಲ್ಪಮಾತ್ರದಿಂದ ಸೃಷ್ಟಿಯನ್ನೂ ಸಂಹಾರವನ್ನೂ ಮಾಡಬಲ್ಲನೋ ಅವನು ನನ್ನನ್ನು ಕೊಲ್ಲುವುದಕ್ಕೋಸ್ಕರ ತಾನೇ ಬರಬೇಕೇನು ?

೩೬. ಆಚಾರ್ಯ, ಇದೆಲ್ಲವನ್ನೂ ಮನಸ್ಸಿಗೆ ತಂದುಕೋ. ಜಗನ್ನಾಥನಾದ ಗೋವಿಂದನು ಬಂದಿರುವಾಗ ನೀನು ನನ್ನ ದಾನಕ್ಕೆ ವಿಘ್ನವನ್ನು ಮಾಡಬೇಡ.

೩೭. ಶೌನಕಮುನಿ ಹೇಳಿದನು.—ಬಲಿಚಕ್ರವರ್ತಿ ಹೀಗೆ ಹೇಳುತ್ತಿರುವಾಗಲೇ ಅಚಿಂತ್ಯನೂ, ಜಗತ್ಪತಿಯೂ, ಮಾಯೆಯಿಂದ ವಾಮನನ (ಕುಳ್ಳನು) ರೂಪವನ್ನು ಧರಿಸಿದವನೂ, ಸಕಲ ದೇವತಾಸ್ವರೂಪನೂ ಆದ ವಿಷ್ಣು ಅಲ್ಲಿಗೆ ಬಂದನು.

ತಂ ದೃಷ್ಟ್ವಾ ಯಜ್ಞವಾಟಾಂತಃಪ್ರವಿಷ್ಟಮಸುರಾಃ ಪ್ರಭುಂ ।
ಜಗ್ಮುಃ ಸಭಾಸದಃ ಕ್ಷೋಭಂ ತೇಜಸಾ ತಸ್ಯ ನಿಷ್ಪ್ರಭಾಃ ॥೩೮॥

ಜೇಪುಶ್ಚ ಮುನಯಸ್ತತ್ರ ಯೇ ಸಮೇತಾ ಮಹಾಧ್ವರೇ ।
ಬಲಿಶ್ಚೈವಾಖಿಲಂ ಜನ್ಮ ಮೇನೇ ಸಫಲಮಾತ್ಮನಃ ॥೩೯॥

ತತಃ ಸಂಕ್ಷೋಭಮಾಪನ್ನೋ ನ ಕಶ್ಚಿತ್ಕಿಂಚಿದುಕ್ತವಾನ್ ।
ಪ್ರತ್ಯೇಕಂ ದೇವದೇವೇಶಂ ಪೂಜಯಾಮಾಸ ಚೇತಸಾ ॥೪೦॥

ಅಥಾಸುರಪತಿಂ ಪ್ರಹ್ವಂ ದೃಷ್ಟ್ವಾ ಮುನಿವರಾಂಶ್ಚ ತಾನ್ ।
ದೇವದೇವಪತಿಃ ಸಾಕ್ಷಾದ್ವಿಷ್ಣುರ್ವಾಮನರೂಪಧೃಕ್ ॥೪೧॥

ತುಷ್ಟಾವ ಯಜ್ಞವಹ್ನಿಂ ಚ ಯಜಮಾನಮಥರ್ತ್ವಿಜಃ ।
ಯಜ್ಞಕರ್ಮಾಧಿಕಾರಸ್ಥಾನ್ ಸದಸ್ಯಾನ್ ದ್ರವ್ಯಸಂಪದಃ ॥೪೨॥

---

೩೮. ಯಜ್ಞಶಾಲೆಯೊಳಕ್ಕೆ ಪ್ರವೇಶಿಸಿದ ಆ ಜಗತ್ಪ್ರಭುವನ್ನು ಕಂಡು, ಸಭೆಯಲ್ಲಿ ಕುಳಿತಿದ್ದ ಅಸುರರು ಅವನ ತೇಜಸ್ಸಿನಿಂದ ಕಾಂತಿಹೀನರಾಗಿ ಪರದಾಡಿದರು.

೩೯. ಆ ಮಹಾಯಾಗದಲ್ಲಿ ನೆರೆದಿದ್ದ ಮುನಿಗಳು ಭೀತಿಯಿಂದ ಮಂತ್ರಗಳನ್ನು ಜಪಿಸಿದರು. ಬಲಿಚಕ್ರವರ್ತಿಯಾದರೋ ತನ್ನ ಜನ್ಮಗಳೆಲ್ಲ ಸಾರ್ಥಕವಾದುವೆಂದು ತಿಳಿದನು.

೪೦. ಅಲ್ಲಿ ನೆರೆದಿದ್ದವರಲ್ಲಿ ಯಾರೂ ಏನೂ ಹೇಳಲಾರದೆ ಹೋದರು. ಎಲ್ಲರಿಗೂ ಗಾಬರಿ. ಆದರೂ ಆ ದೇವಾಧಿದೇವನನ್ನು ಪ್ರತಿಯೊಬ್ಬರೂ ತಮ್ಮ ತಮ್ಮ ಮನಸ್ಸಿನಲ್ಲಿಯೇ ಪೂಜಿಸಿದರು.

೪೧-೪೨. ಬಳಿಕ ದೇವದೇವನೂ ವಾಮನರೂಪಧಾರಿಯೂ ಆದ ಮಹಾವಿಷ್ಣು ನಮ್ರನಾಗಿರುವ ಬಲಿಚಕ್ರವರ್ತಿಯನ್ನೂ ಆ ಮಹಾಮುನಿಗಳನ್ನೂ ನೋಡಿದನು. ಯಜ್ಞದ ಅಗ್ನಿಯನ್ನೂ, ಯಜಮಾನನನ್ನೂ, ಋತ್ವಿಕ್ಕುಗಳನ್ನೂ, ಯಜ್ಞಕರ್ಮದಲ್ಲಿ ಭಾಗವಹಿಸಿದ ಉಳಿದವರನ್ನೂ, ಸದಸ್ಯರನ್ನೂ, ಯಾಗಕ್ಕೋಸ್ಕರವಾಗಿ ಶೇಖರಿಸಿದ್ದ ದ್ರವ್ಯಗಳ ಅತಿಶಯವನ್ನೂ ಶ್ಲಾಘಿಸಿದನು.

ತತಃ ಪ್ರಸನ್ನಾಸ್ತ್ವಖಿಲಾ ವಾಮನಂ ಪ್ರತಿ ತತ್ಕ್ಷಣಾತ್ ।
ಯಜ್ಞವಾಟಸ್ಥಿತಂ ವೀರಃ ಸಾಧು ಸಾಧ್ವಿತ್ಯುದೀರಯನ್ ॥೪೩॥

ಸ ಚಾರ್ಘಮಾದಾಯ ಬಲಿಃ ಪ್ರೋದ್ಭೂತಪುಲಕಸ್ತದಾ ।
ಪೂಜಯಾಮಾಸ ಗೋವಿಂದಂ ಪ್ರಾಹ ಚೇದಂ ಮಹಾಸುರಃ ॥೪೪॥

॥ ಬಲಿರುವಾಚ ॥

ಸುವರ್ಣರತ್ನಸಂಘಾತಂ ಗಜಾಶ್ವಮಮಿತಂ ತಥಾ ।
ಸ್ತ್ರಿಯೋ ವಸ್ತ್ರಾಣ್ಯಲಂಕಾರಾಂಸ್ತಥಾ ಗ್ರಾಮಾಂಶ್ಚ ಪುಷ್ಕಲಾನ್ ॥೪೫॥

ಸರ್ವಸ್ವಂ ಸಕಲಾಮುರ್ವೀಂ ಭವತೋ ವಾ ಯದೀಪ್ಸಿತಂ ।
ತದ್ದದಾಮಿ ವೃಣುಷ್ವ ತ್ವಂ ಯೇನಾರ್ಥೀ ವಾಮನಃ ಪ್ರಿಯಃ ॥೪೬॥

॥ ಶೌನಕಉವಾಚ ॥

ಇತ್ಯುಕ್ತೋ ದೈತ್ಯಪತಿನಾ ಪ್ರೀತಿಗರ್ಭಾನ್ವಿತಂ ವಚಃ ।
ಪ್ರಾಹ ಸಸ್ಮಿತಗಂಭೀರಂ ಭಗವಾನ್ ವಾಮನಾಕೃತಿಃ ॥೪೭॥

---

೪೩-೪೪. ತರುವಾಯ ಆ ಗಳಿಗೆಯಲ್ಲೇ ಯಜ್ಞಶಾಲೆಯಲ್ಲಿ ಸೇರಿದ್ದವರೆಲ್ಲರಿಗೂ ವಾಮನಮೂರ್ತಿಯ ವಿಷಯದಲ್ಲಿ ಪೂಜ್ಯಬುದ್ಧಿ ಹುಟ್ಟಿತು. ದೈತ್ಯರಾಜನೂ ಮಹಾವೀರನೂ ಆದ ಬಲಿಚಕ್ರವರ್ತಿಯು ಪೂಜಾಸಾಮಗ್ರಿಗಳನ್ನು ತಂದು, ಮೈಯಲ್ಲಿ ರೋಮಾಂಚವೇಳುತ್ತಿರಲು, ಗೋವಿಂದನನ್ನು ಪೂಜಿಸಿ ಇಂತೆಂದನು.

೪೫-೪೬. ಬಲಿಚಕ್ರವರ್ತಿ ಹೇಳಿದನು.—ಚಿನ್ನದರಾಶಿ, ರತ್ನದರಾಶಿ, ಲೆಕ್ಕವಿಲ್ಲದಷ್ಟು ಆನೆ ಕುದುರೆಗಳು, ಸ್ತ್ರೀಯರು, ವಸ್ತ್ರಗಳು, ಒಡವೆಗಳು, ಸಂಪತ್ಸಮೃದ್ಧವಾದ ಗ್ರಾಮಗಳು, ಎಲ್ಲ ವಿಧವಾದ ಐಶ್ವರ್ಯ, ಸಪ್ತದ್ವೀಪಸಹಿತವಾದ ಭೂಮಿ, ಅಥವಾ ನಿನಗೆ ಬೇಕಾದುದು ಇನ್ನಾವುದುಂಟೋ ಅದೆಲ್ಲವನ್ನೂ ಕೊಡುವೆನು. ವಾಮನರೂಪಧಾರಿಯಾದ ನೀನು ಏನನ್ನು ಬಯಸುವೆಯೋ, ಏತರಿಂದ ಸಂತುಷ್ಟನಾಗುವೆಯೋ ಹೇಳು.

೪೭. ಶೌನಕಮುನಿ ಹೇಳಿದನು.—ದೈತ್ಯರಾಜನಾದ ಬಲಿಚಕ್ರವರ್ತಿಯು ಪ್ರೀತಿಯಿಂದ ಆಡಿದ ಈ ಮಾತನ್ನು ಕೇಳಿ ಭಗವಂತನಾದ ವಾಮನನು ಗಂಭೀರವಾಗಿ ನಕ್ಕು ಇಂತೆಂದನು.

|| ವಾಮನ ಉವಾಚ ||

ಮಮಾಗ್ನಿಶರಣಾರ್ಥಾಯ ದೇಹಿ ರಾಜನ್ ಪದತ್ರಯಂ ।
ಸುವರ್ಣಗ್ರಾಮರತ್ನಾನಿ ತದರ್ಥಿಭ್ಯಃ ಪ್ರದೀಯತಾಂ ||೪೮||

|| ಬಲಿರುವಾಚ ||

ತ್ರಿಭಿಃ ಪ್ರಯೋಜನಂ ಕಿಂ ತೇ ಪದೈಃ ಪದವತಾಂ ವರ ।
ಶತಂ ಶತಸಹಸ್ರಾಣಾಂ ಪದಾನಾಂ ಮಾರ್ಗತಾಂ ಭವಾನ್ ||೪೯||

|| ವಾಮನ ಉವಾಚ ||

ಧರ್ಮಬುಧ್ಯಾ ದೈತ್ಯಪತೇ ಕೃತಕೃತ್ಯೋಽಸ್ಮಿ ತಾವತಾ ।
ಅನ್ಯೇಷಾಮರ್ಥಿನಾಂ ವಿತ್ತಮೀಹಿತಂ ದಾಸ್ಯತೇ ಭವಾನ್ ||೫೦||

|| ಶೌನಕ ಉವಾಚ ||

ಏತಚ್ಛ್ರುತ್ವಾ ತು ಗದಿತಂ ವಾಮನಸ್ಯ ಮಹಾತ್ಮನಃ ।
ದದೌ ತಸ್ಮೈ ಮಹಾಬಾಹುರ್ವಾಮನಾಯ ಪದತ್ರಯಂ ||೫೧||

---

೪೮. ವಾಮನಮೂರ್ತಿ ಹೇಳಿದನು.—ರಾಜಾ, ಅಗ್ನಿಯನ್ನಿಟ್ಟುಕೊಂಡು ಕಾಪಾಡುವುದಕ್ಕಾಗಿ ಮೂರುಹೆಜ್ಜೆ ನೆಲವನ್ನು ನನಗೆ ಕೊಡು. ಸುವರ್ಣ, ಗ್ರಾಮ, ರತ್ನ ಇವುಗಳನ್ನು, ಅವು ಯಾರಿಗೆ ಬೇಕೋ ಅಂತಹವರಿಗೆ ಕೊಡು.

೪೯. ಬಲಿಚಕ್ರವರ್ತಿ ಹೇಳಿದನು.—ಓ ಪುರುಷೋತ್ತಮಾ, ಮೂರು ಹೆಜ್ಜೆ ನೆಲದಿಂದ ನಿನಗೆ ಯಾವ ಪ್ರಯೋಜನವು ತಾನೆ ಆದೀತು ? ಒಂದುಕೋಟಿ ಹೆಜ್ಜೆಯಷ್ಟು ಭೂಮಿಯನ್ನು ಕೇಳು.

೫೦. ವಾಮನಮೂರ್ತಿ ಹೇಳಿದನು.—ದೈತ್ಯೇಂದ್ರಾ, ಧರ್ಮಬುದ್ಧಿಯಿಂದ ಕೊಟ್ಟರೆ ನಾನು ಅಷ್ಟರಿಂದಲೇ ತೃಪ್ತನಾಗುವೆನು. ಉಳಿದ ಯಾಚಕರಿಗೆ ಅವರು ಬಯಸಿದ ಐಶ್ವರ್ಯವನ್ನು ನೀನು ಕೊಡುವೆಯಂತೆ.

೫೧. ಶೌನಕಮುನಿ ಹೇಳಿದನು.—ಮಹಾಧೀರನಾದ ಬಲಿಚಕ್ರವರ್ತಿಯು ವಾಮನ ಭಗವಂತನ ಮಾತನ್ನು ಕೇಳಿ ಅವನಿಗೆ ಮೂರು ಹೆಜ್ಜೆ ನೆಲವನ್ನು ದಾನ ಮಾಡಿದನು.

ಪಾಣೌ ತು ಪತಿತೇ ತೋಯೇ ವಾಮನೋಽದ್ಭುತವಾಮನಃ ।
ಸರ್ವದೇವಮಯಂ ರೂಪಂ ದರ್ಶಯಾಮಾಸ ತತ್ಕ್ಷಣಾತ್ ॥೫೨॥

ಚಂದ್ರಸೂರ್ಯೌ ಚ ನಯನೇ ದ್ಯೌ ಮೂರ್ಧಾ ಚರಣೌ ಕ್ಷಿತಿಃ ।
ಪಾದಾಂಗುಲ್ಯಃ ಪಿಶಾಚಾಸ್ತು ಹಸ್ತಾಂಗುಲ್ಯಶ್ಚ ಗುಹ್ಯಕಾಃ ॥೫೩॥

ವಿಶ್ವೇದೇವಾಶ್ಚ ಜಾನುಸ್ಥಾ ಜಂಘೇ ಸಾಧ್ಯಾಃ ಸುರೋತ್ತಮಾಃ
ಯಕ್ಷಾ ನಖೇಷು ಸಂಭೂತಾ ರೇಖಾಶ್ಚಾಪ್ಸರಸಸ್ತಥಾ ॥೫೪॥

ದೃಷ್ಟಿ ಋಕ್ಷಾಣ್ಯಶೇಷಾಣಿ ಕೇಶಾಃ ಸೂರ್ಯಾಂಶವಃ ಪ್ರಭೋಃ ।
ತಾರಕಾ ರೋಮಕೂಪಾಣಿ ರೋಮಾಣಿ ಚ ಮಹರ್ಷಯಃ ॥೫೫॥

ಬಾಹವೋ ವಿದಿಶಸ್ತಸ್ಯ ದಿಶಃ ಶ್ರೋತ್ರೇ ಮಹಾತ್ಮನಃ ।
ಅಶ್ವಿನೌ ಶ್ರವಣೇ ತಸ್ಯ ನಾಸಾ ವಾಯುರ್ಮಹಾತ್ಮನಃ ॥೫೬॥

---

೫೨. ಕೈಯಲ್ಲಿ ದಾನೋದಕವು ಬಿದ್ದ ಗಳಿಗೆಯಲ್ಲಿಯೇ ಮಹಾಮಾಯಾವಿಯಾದ ಆ ವಾಮನಮೂರ್ತಿಯು ಸಕಲದೇವತಾಮಯವಾದ ತನ್ನ ದಿವ್ಯರೂಪವನ್ನು ತೋರಿಸಿದನು.

೫೩. ಆ ಪುರುಷೋತ್ತಮನು ಪ್ರದರ್ಶಿಸಿದ ದಿವ್ಯರೂಪವು ಈ ತೆರನಾಗಿತ್ತು. ಚಂದ್ರಸೂರ್ಯರು ಅವನ ಎರಡು ಕಣ್ಣುಗಳು, ಅಂತರಿಕ್ಷವು ತಲೆ, ಭೂಮಿ ಪಾದಗಳು, ಪಿಶಾಚರು ಕಾಲ್ಬೆರಳುಗಳು, ಗುಹ್ಯಕರು ಕೈಬೆರಳುಗಳು.

೫೪. ಮೊಣಕಾಲುಗಳಲ್ಲಿ ವಿಶ್ವೇದೇವರು, ಮಂಡಿಗಳಲ್ಲಿ ಸುರಶ್ರೇಷ್ಠರಾದ ಸಾಧ್ಯರು, ಉಗುರುಗಳಲ್ಲಿ ಯಕ್ಷರು, ಮತ್ತು ರೇಖೆಗಳಲ್ಲಿ ಅಪ್ಸರಸ್ತ್ರೀಯರು ಗೋಚರರಾದರು.

೫೫ ಸಕಲ ನಕ್ಷತ್ರಗಳೂ ಆ ದೇವದೇವನ ನೋಟದಲ್ಲಿ ನೆಲಸಿದ್ದುವು. ಸೂರ್ಯನ ಕಿರಣಗಳು ಆತನ ತಲೆಗೂದಲಾಗಿದ್ದುವು. ತಾರೆಗಳು ರೋಮಕೂಪಗಳೂ ಮಹರ್ಷಿಗಳು ರೋಮಗಳೂ ಆದರು.

೫೬. ಅಗ್ನೇಯಾದಿ ಮಧ್ಯದಿಕ್ಕುಗಳು ಆ ಮಹಾತ್ಮನ ತೋಳುಗಳಾಗಿದ್ದುವು. ಪೂರ್ವಾದಿ ದಿಕ್ಕುಗಳು ಕಿವಿಗಳಾದುವು. ಅಶ್ವಿನೀದೇವತೆಗಳು ಶ್ರೋತ್ರೇಂದ್ರಿಯದಲ್ಲೂ ವಾಯು ಘ್ರಾಣೇಂದ್ರಿಯದಲ್ಲೂ ನಿಂತರು.

ಪ್ರಸಾದಶ್ಚಂದ್ರಮಾ ದೇವೋ ಮನೋ ಧರ್ಮಃ ಸಮಾಶ್ರಿತಃ ।
ಸತ್ಯಂ ತಸ್ಯಾಭವದ್ವಾಣೀ ಜಿಹ್ವಾ ದೇವೀ ಸರಸ್ವತೀ ॥೫೭॥

ಗ್ರೀವಾ ದಿತಿರ್ದೇವಮಾತಾ ವಿದ್ಯಾಸ್ತದ್ವಲಯಸ್ತಥಾ ।
ಸ್ವರ್ಗದ್ವಾರಮಭೂನ್ಮೈತ್ರಂ ತ್ವಷ್ಟಾ ಪೂಷಾ ಚ ವೈ ಭ್ರುವೌ ॥೫೮॥

ಮುಖಂ ವೈಶ್ವಾನರಶ್ಚಾಸ್ಯ ವೃಷಣೌ ತು ಪ್ರಜಾಪತಿಃ ।
ಹೃದಯಂ ಚ ಪರಂ ಬ್ರಹ್ಮ ಪುಂಸ್ತ್ವಂ ವೈ ಕಾಶ್ಯಪೋ ಮುನಿಃ ॥೫೯॥

ಪೃಷ್ಠೇಽಸ್ಯ ವಸವೋ ದೇವಾ ಮರುತಃ ಸರ್ವಸಂಧಿಷು ।
ಸರ್ವಸೂಕ್ತಾನಿ ದಶನಾ ಜ್ಯೋತೀಂಷಿ ವಿಮಲಪ್ರಭಾಃ ॥೬೦॥

ವಕ್ಷಃಸ್ಥಲೇ ಮಹಾದೇವೋ ಧೈರ್ಯೇ ಚಾಸ್ಯ ಮಹಾರ್ಣವಾಃ ।
ಉದರೇ ಚಾಸ್ಯ ಗಂಧರ್ವಾಃ ಸಂಭೂತಾಶ್ಚ ಮಹಾಬಲಾಃ ॥೬೧॥

---

೫೭. ಪೂಜ್ಯನಾದ ಚಂದ್ರನು ವಾಮನಮೂರ್ತಿಯ ಮನೋನೈರ್ಮಲ್ಯದಲ್ಲಿಯೂ, ಧರ್ಮವು ಮನಸ್ಸಿನಲ್ಲಿಯೂ, ಸತ್ಯವು ವಾಣಿಯಲ್ಲಿಯೂ, ಸರಸ್ವತೀ ದೇವಿಯು ನಾಲಗೆಯಲ್ಲಿಯೂ ಕಂಗೊಳಿಸಿದರು.

೫೮. ದೇವಮಾತೆಯಾದ ಅದಿತಿಯು ಕಂಠವೂ, ವಿದ್ಯೆಗಳು ಅಲ್ಲಿನ ವಳಿಗಳೂ (ಮಡಿಕೆಗಳು) ಆದುವು. ಸ್ವರ್ಗದ್ವಾರವು ಗುದವಾಯಿತು. ತ್ವಷ್ಟ, ಪೂಷ ಇವರಿಬ್ಬರೂ ಹುಬ್ಬುಗಳಾದರು.

೫೯. ಅಗ್ನಿಯು ಆ ದೇವದೇವನ ಮುಖವಾಗಿಯೂ, ಪ್ರಜಾಪತಿಯು ವೃಷಣಗಳಾಗಿಯೂ, ಪರಬ್ರಹ್ಮನು ಹೃದಯವಾಗಿಯೂ, ಕಾಶ್ಯಪಮುನಿಯು ಪುರುಷತ್ವವಾಗಿಯೂ ವಿರಾಜಿಸಿದರು.

೬೦. ಆತನ ಪೃಷ್ಠದಲ್ಲಿ ವಸುಗಳು, ಕೀಲುಗಳಲ್ಲಿ ಮರತ್ತುಗಳು, ಹಲ್ಲುಗಳಲ್ಲಿ ಸಕಲವಿಧವಾದ ಸೂಕ್ತಗಳು, ದಿವ್ಯಕಾಂತಿಯಲ್ಲಿ ಗ್ರಹನಕ್ಷತ್ರಗಳು ಬೆಳಗಿದುವು.

೬೧. ವಕ್ಷಃಸ್ಥಲದಲ್ಲಿ ಮಹಾದೇವನೂ, ಧೈರ್ಯದಲ್ಲಿ ಮಹಾಸಾಗರಗಳೂ, ಉದರದಲ್ಲಿ ಅತ್ಯಂತಬಲಶಾಲಿಗಳಾದ ಗಂಧರ್ವರೂ ಗೋಚರಿಸಿದರು.

ಲಕ್ಷ್ಮೀರ್ಮೇಧಾ ಧೃತಿಃ ಕಾಂತಿಃ ಸರ್ವವಿದ್ಯಾಶ್ಚ ವೈ ಕಟಿಃ।
ಸರ್ವಜ್ಯೋತೀಂಷಿ ಜಾನೀಹಿ ತಸ್ಯ ತತ್ಪರಮಂ ಮಹಃ ॥೬೨॥

ತಸ್ಯ ದೇವಾಧಿದೇವಸ್ಯ ತೇಜಃ ಪ್ರೋದ್ಭೂತಮುತ್ತಮಂ।
ಸ್ತನೌ ಕುಕ್ಷೀ ಚ ವೇದಾಶ್ಚ ಉದರಂ ಚ ಮಹಾಮಖಾಃ ॥೬೩॥

ಇಷ್ಟಯಃ ಪಶುಬಂಧಾಶ್ಚ ದ್ವಿಜಾನಾಂ ಚೇಷ್ಟಿತಾನಿ ಚ।
ತಸ್ಯ ದೇವಮಯಂ ರೂಪಂ ದೃಷ್ಟ್ವಾ ವಿಷ್ಣೋರ್ಮಹಾಬಲಾಃ ॥೬೪॥

ಉಪಾಸರ್ಪಂತ ದೈತ್ಯೇಂದ್ರಾಃ ಪತಂಗಾ ಇವ ಪಾವಕಂ।
ಪ್ರಮಥ್ಯ ಸರ್ವಾನಸುರಾನ್ ಪಾದಹಸ್ತತಲೈರ್ವಿಭುಃ ॥೬೫॥

ಕೃತ್ವಾ ರೂಪಂ ಮಹಾಕಾಯಂ ಜಹಾರಾಶು ಸ ಮೇದಿನೀಂ।
ತಸ್ಯ ವಿಕ್ರಮತೋ ಭೂಮಿಂ ಚಂದ್ರಾದಿತ್ಯೌ ಸ್ತನಾಂತರೇ ॥೬೬॥

---

೬೨. ಲಕ್ಷ್ಮಿ, ಬುದ್ಧಿ, ಧೈರ್ಯ, ಕಾಂತಿ ಸಕಲವಿದ್ಯೆ ಇವುಗಳು ಆತನ ಮಧ್ಯ ಪ್ರದೇಶವಾದುವು. ಓ ಅರ್ಜುನಾ, ಸಕಲತೇಜೋಮಂಡಲಗಳೂ ಆ ಮಹಾ ಪುರುಷನ ಅದ್ಭುತತೇಜಸ್ಸಿನ ರೂಪವನ್ನು ತಾಳಿದುವು.

೬೩. ಆ ದೇವಾಧಿದೇವನ ತೇಜಸ್ಸು ಅತ್ಯದ್ಭುತವಾಯಿತು. ವೇದಗಳು ಆತನ ಸ್ತನಗಳೂ ಕೆಳಹೊಟ್ಟೆಯೂ ಆದುವು. ಮಹಾಯಜ್ಞಗಳು, ಇಷ್ಟಿಗಳು, ಪಶುಬಂಧಗಳು, ದ್ವಿಜರ ಕರ್ಮಗಳು ಇವೆಲ್ಲ ಉದರವಾದುವು.

೬೪. ವಿಷ್ಣುವಿನ ಸಕಲ ದೇವತಾಮಯವಾದ ರೂಪವನ್ನು ನೋಡಿ ಮಹಾಬಲಿಷ್ಠರಾದ ದೈತ್ಯವೀರರು ಅಗ್ನಿಯನ್ನು ಮುತ್ತಲು ಬರುವ ಪತಂಗಗಳಂತೆ ಅವನ ಬಳಿಗೆ ಬಂದರು.

೬೫. ಸರ್ವವ್ಯಾಪಕನಾದ ಆ ಭಗವಂತನು ತನ್ನ ಪಾದಗಳಿಂದಲೂ ಹಸ್ತ ಗಳಿಂದಲೂ ಪ್ರಹರಿಸಿ ಅಸುರರನ್ನೆಲ್ಲ ಧ್ವಂಸಮಾಡಿದನು; ಬಲು ದೊಡ್ಡ ದೇಹವನ್ನು ತಳೆದು ಭೂಮಿಯನ್ನೆಲ್ಲ ಆಕ್ರಮಿಸಿದನು.

೬೬-೬೭. ಅರ್ಜುನಾ, ದೇವತೆಗಳನ್ನು ರಕ್ಷಿಸುವ ಸಲುವಾಗಿ ದೊಡ್ಡ ರೂಪವನ್ನೆತ್ತಿ, ಕ್ರಮವಾಗಿ ಬೆಳೆಯುತ್ತ ಆ ವಿಷ್ಣು ಭೂಮಿಯನ್ನು ಅಳೆಯುತ್ತಿರು

ನಾಭೌ ವಿಕ್ರಮಮಾಣಸ್ಯ ಸಕ್ಥಿದೇಶಸ್ಥಿತಾವುಭೌ ।
ಪರಂ ವಿಕ್ರಮತಸ್ತಸ್ಯ ಜಾನುಮೂಲೇ ಪ್ರಭಾಕರೌ ॥೬೭॥

ವಿಷ್ಣೋರಾಸ್ತಾಂ ಮಹೀಪಾಲ ದೇವಪಾಲನಕರ್ಮಣಿ ।
ಜಿತ್ವಾ ಲೋಕತ್ರಯಂ ಕೃತ್ಸ್ನಂ ಹತ್ವಾ ಚಾಸುರಪುಂಗವಾನ್ ॥೬೮॥

ಪುರಂದರಾಯ ತ್ರೈಲೋಕ್ಯಂ ದದೌ ವಿಷ್ಣುರುರುಕ್ರಮಃ ।
ಸುತಲಂ ನಾಮ ಪಾತಾಲಮಧಸ್ತಾದ್ವಸುಧಾತಲಾತ್ ॥೬೯॥

ಬಲೇರ್ದತ್ತಂ ಭಗವತಾ ವಿಷ್ಣುನಾ ಪ್ರಭವಿಷ್ಣುನಾ ।
ಅಥ ದೈತ್ಯೇಶ್ವರಂ ಪ್ರಾಹ ವಿಷ್ಣುಃ ಸರ್ವೇಶ್ವರೇಶ್ವರಃ ॥೭೦॥

॥ ಭಗವಾನುವಾಚ ॥

ಯತ್ತ್ವಯಾ ಸಲಿಲಂ ದತ್ತಂ ಗೃಹೀತಂ ಪಾಣಿನಾ ಮಯಾ ।
ಕಲ್ಪಪ್ರಮಾಣಂ ತಸ್ಮಾತ್ತೇ ಭವಿಷ್ಯತ್ಯಾಯುರುತ್ತಮಂ ॥೭೧॥

---

ವಾಗ, ಚಂದ್ರಸೂರ್ಯರು ಮೊದಲು ಅವನ ಎದೆಯ ಮಟ್ಟದಲ್ಲೂ, ಬಳಿಕ ಹೊಕ್ಕುಳಿನ ಬಳಿಯಲ್ಲೂ, ತರುವಾಯ ತೊಡೆಯ ಹತ್ತಿರದಲ್ಲೂ ಕೊನೆಗೆ ಮೊಣಕಾಲಿನ ಸಮೀಪವಲ್ಲೂ ಬಂದರು.

೬೮. ತ್ರಿವಿಕ್ರಮಾವತಾರದಂತಹ ಅದ್ಭುತರೂಪವನ್ನೆತ್ತಿದ ವಿಷ್ಣು ಮೂರು ಲೋಕವನ್ನೂ ಸಂಪೂರ್ಣವಾಗಿ ಗೆದ್ದು, ಅಸುರಪ್ರಮುಖರನ್ನು ಸಂಹರಿಸಿ ಇಂದ್ರನಿಗೆ ತ್ರೈಲೋಕ್ಯಾಧಿಪತ್ಯವನ್ನು ಕೊಟ್ಟನು.

೬೯-೭೦. ಪೂಜ್ಯನೂ, ಸರ್ವೇಶ್ವರನೂ, ಸರ್ವಸಮರ್ಥನೂ ಆದ ಮಹಾವಿಷ್ಣು ದೈತ್ಯೇಶ್ವರನಾದ ಬಲಿಚಕ್ರವರ್ತಿಗೆ ಭೂಮಿಯ ತಳದಲ್ಲಿರುವ ಸುತಲವೆಂಬ ಪಾತಾಳಲೋಕವನ್ನು ಕೊಟ್ಟು ಹೀಗೆ ಹೇಳಿದನು.

೭೧. ಭಗವಂತನಾದ ವಾಮನಮೂರ್ತಿ ಹೇಳಿದನು.—ನೀನು ಕೊಟ್ಟ ದಾನೋದಕವನ್ನು ನಾನು ಕೈಯಲ್ಲಿ ತೆಗೆದುಕೊಂಡೆನು. ಅದರಿಂದ ನಿನಗೆ ಕಲ್ಪಾಂತದ ವರೆಗೆ ಆಯುಸ್ಸು ಸುಖಮಯವಾಗಿ ಬೆಳೆಯಲಿ.

ವೈವಸ್ವತೇ ತಥಾತೀತೇ ಬಲೇ ಮನ್ವಂತರೇ ಹ್ಯಥ ।
ಸಾವರ್ಣಿಕೇ ತು ಸಂಪ್ರಾಪ್ತೇ ಭವಾನಿಂದ್ರೋ ಭವಿಷ್ಯತಿ ॥೭೨॥

ಸಾಂಪ್ರತಂ ದೇವರಾಜಾಯ ತ್ರೈಲೋಕ್ಯಂ ಸಕಲಂ ಮಯಾ ।
ದತ್ತಂ ಚತುರ್ಯುಗಾಣಾಂ ಚ ಸಾಧಿಕಾ ಹ್ಯೇಕಸಪ್ತತಿಃ ॥೭೩॥

ನಿಯಂತವ್ಯಾ ಮಯಾ ಸರ್ವೇ ಯೇ ತಸ್ಯ ಪರಿಪಂಥಿನಃ ।
ತೇನಾಹಂ ಪರಯಾ ಭಕ್ತ್ಯಾ ಪೂರ್ವಮಾರಾಧಿತೋ ಬಲೇ ॥೭೪॥

ಸುತಲಂ ನಾಮ ಪಾತಾಲಂ ತ್ವಮಾಸಾದ್ಯ ಮನೋರಮಂ ।
ವಸಾಸುರ ಮಮಾದೇಶಂ ಯಥಾವತ್ಪರಿಪಾಲಯನ್ ॥೭೫॥

ತತ್ರ ದಿವ್ಯವನೋಪೇತೇ ಪ್ರಾಸಾದಶತಸಂಕುಲೇ ।
ಪ್ರೋತ್ಫುಲ್ಲಪದ್ಮಸರಸಿ ಸ್ರವಚ್ಛುದ್ಧಸರಿದ್ವರೇ ॥೭೬॥

---

೭೨. ಓ ಬಲೀಂದ್ರಾ, ವೈವಸ್ವತಮನ್ವಂತರವು ಕಳೆದು ಸಾವರ್ಣಿಕ ಮನ್ವಂತರವು ಬಂದಾಗ ನೀನು ಇಂದ್ರನ ಪದವಿಯನ್ನೇರುವೆ.

೭೩. ಈಗ ನಾನು ದೇವರಾಜನಾದ ಇಂದ್ರನಿಗೆ ಮೂರುಲೋಕಗಳ ಸಂಪೂರ್ಣವಾದ ಒಡೆತನವನ್ನು ಎಪ್ಪತ್ತೊಂದು ಚತುರ್ಯುಗಗಳು ಮುಗಿಯುವ ವರೆಗೂ ಕೊಟ್ಟುಬಿಟ್ಟಿದ್ದೇನೆ.

೭೪. ಎಲೈ ಬಲಿಚಕ್ರವರ್ತೀ, ಅವನ ಶತ್ರುಗಳೆಲ್ಲರನ್ನೂ ನಾನು ಅಡಗಿಸ ಬೇಕಾಗಿದೆ. ಅವನು ನನ್ನನ್ನು ಪೂರ್ವದಲ್ಲಿ ಬಹಳ ಭಕ್ತಿಯಿಂದ ಆರಾಧಿಸಿದ್ದಾನೆ.

೭೫. ದೈತ್ಯೋತ್ತಮಾ, ನೀನು ಬಹು ಮನೋಹರವಾದ ಸುತಲವೆಂಬ ಪಾತಾಲಲೋಕಕ್ಕೆ ಹೋಗಿ ನನ್ನ ಅಪ್ಪಣೆಯನ್ನು ಸರಿಯಾಗಿ ಪಾಲಿಸುತ್ತ ವಾಸಿಸುತ್ತಿರು.

೭೬-೭೮. ಅಲ್ಲಿ ಬಹು ಸುಂದರವಾದ ವನಗಳಿವೆ. ನೂರಾರು ಅರಮನೆ ಗಳಿವೆ. ಸರೋವರಗಳಲ್ಲಿ ತಾವರೆಗಳು ಅರಳಿ ಕಂಗೊಳಿಸುತ್ತಿವೆ. ನದಿಗಳು ತಿಳಿನೀರಿನಿಂದ ತುಂಬಿ ರಮ್ಯವಾಗಿ ಹರಿಯುತ್ತಿವೆ. ಒಳ್ಳೆಯ ಪರಿಮಳವನ್ನು

**ಸುಗಂಧಿರೂಪಸ್ರಗ್ವಸ್ತ್ರವರಾಭರಣಭೂಷಿತೇ ।**
**ಸ್ರಕ್ಚಂದನಾದಿಮುದಿತೇ ಗೇಯನೃತ್ಯಮನೋಹರೇ ॥೭೭॥**

**ಪಾನಾನ್ನಭೋಗಾನ್ ವಿವಿಧಾನುಪಭುಞ್ಕ್ಷ್ವ ಮಹಾಸುರ ।**
**ಮಮಾಜ್ಞಯಾ ಕಾಲಮಿಮಂ ತಿಷ್ಠ ಸ್ತ್ರೀಶತಸಂವೃತಃ ॥೭೮॥**

**ಯಾವತ್ಸುರೈಶ್ಚ ವಿಪ್ರೈಶ್ಚ ನ ವಿರೋಧಂ ಕರಿಷ್ಯಸಿ ।**
**ತಾವದೇತಾನ್ ಮಹಾಭೋಗಾನವಾಪ್ಸ್ಯಸಿ ಮಹಾಸುರ ॥೭೯॥**

**ಯದಾ ಚ ದೇವವಿಪ್ರಾಣಾಂ ವಿರೋಧಂ ತ್ವಂ ಕರಿಷ್ಯಸಿ ।**
**ಬಂಧಿಷ್ಯಂತಿ ತದಾ ಪಾಶಾ ವಾರುಣಾಸ್ತ್ವಾಮಸಂಶಯಂ ॥೮೦॥**

**ಏತದ್ವಿದಿತ್ವಾ ಭವತಾ ಮಯಾಜ್ಞಪ್ತಮಶೇಷತಃ ।**
**ನ ವಿರೋಧಃ ಸುರೈಃ ಕಾರ್ಯೋ ವಿಪ್ರೈರ್ವಾ ದೈತ್ಯಸತ್ತಮ ॥೮೧॥**

---

ಬೀರುವ ಧೂಪಗಳೂ, ಹಾರಗಳೂ, ವಸ್ತ್ರಗಳೂ, ದಿವ್ಯಾಭರಣಗಳೂ ಯಥೇಚ್ಛ ವಾಗಿವೆ. ಪುಷ್ಪಮಾಲೆಗಳೂ ಚಂದನಾದ್ಯನುಲೇಪನಗಳೂ ಸಂತೋಷವನ್ನು ಹುಟ್ಟಿಸುತ್ತವೆ. ದೈತ್ಯರಾಜಾ, ನೀನು ಬಗೆಬಗೆಯ ಅನ್ನಪಾನಗಳನ್ನು ಸವಿದು ಆ ಸುಖಭೋಗಗಳನ್ನು ಅನುಭವಿಸು. ನೂರಾರು ಜನ ನಾರೀಮಣಿಯರೊಡಗೂಡಿ ನನ್ನ ಅಜ್ಞೆಯಂತೆ ನಾನು ಹೇಳಿದಷ್ಟು ಕಾಲ ಅಲ್ಲಿರು.

೭೯. ಅಸುರೋತ್ತಮಾ, ದೇವತೆಗಳೊಡನೆಯೂ ಬ್ರಾಹ್ಮಣರೊಡನೆಯೂ ಎಂದಿನವರೆಗೆ ನೀನು ವಿರೋಧವನ್ನು ಕಟ್ಟಿಕೊಳ್ಳುವುದಿಲ್ಲವೋ, ಅಂದಿನವರೆಗೆ ಈ ಉತ್ತಮೋತ್ತಮವಾದ ಭೋಗಗಳನ್ನು ಅನುಭವಿಸುವೆ.

೮೦. ಯಾವಾಗ ನೀನು ದೇವಬ್ರಾಹ್ಮಣರಿಗೆ ವಿರೋಧವನ್ನು ಮಾಡು ವೆಯೋ, ಆಗ ವರುಣನ ಪಾಶಗಳು ನಿನ್ನನ್ನು ಬಂಧಿಸುವುವು. ಸಂದೇಹವಿಲ್ಲ.

೮೧. ದೈತ್ಯವರ್ಯಾ, ನಾನು ಹೇಳಿದುದನ್ನೆಲ್ಲ ಸಂಪೂರ್ಣವಾಗಿ ಮನಸ್ಸಿನಲ್ಲಿ ಇಟ್ಟುಕೋ. ದೇವತೆಗಳಿಗಾಗಲಿ ಬ್ರಾಹ್ಮಣರಿಗಾಗಲಿ ವಿರೋಧವನ್ನು ಮಾಡಬೇಡ.

|| ಶೌನಕ ಉವಾಚ ||

ಇತ್ಯೇವಮುಕ್ತೋ ದೇವೇನ ವಿಷ್ಣುನಾ ಪ್ರಭವಿಷ್ಣುನಾ ।
ಬಲಿಃ ಪ್ರಾಹ ಮಹಾರಾಜ ಪ್ರಣಿಪತ್ಯ ಮುದಾ ಯುತಃ ||೮೨||

|| ಬಲಿರುವಾಚ ||

ತತ್ರಾಸತೋ ಮೇ ಪಾತಾಲೇ ಭಗವನ್ ಭವದಾಜ್ಞಯಾ ।
ಕಿಂ ಭವಿಷ್ಯತ್ಯುಪಾದಾನಮುಪಭೋಗೋಪಪಾದಕಂ ||೮೩||

|| ಶ್ರೀ ಭಗವಾನುವಾಚ ||

ದಾನಾನ್ಯವಿಧಿದತ್ತಾನಿ ಶ್ರಾದ್ಧಾನ್ಯಶ್ರೋತ್ರಿಯಾಣಿ ಚ ।
ಹುತಾನ್ಯಶ್ರದ್ಧಯಾ ಯಾನಿ ತಾನಿ ದಾಸ್ಯಂತಿ ತೇ ಫಲಂ ||೮೪||

ಅದಕ್ಷಿಣಾಸ್ತಥಾ ಯಜ್ಞಾಃ ಕ್ರಿಯಾಶ್ಚಾವಿಧಿನಾ ಕೃತಾಃ ।
ಫಲಾನಿ ತವ ದಾಸ್ಯಂತಿ ಅಧೀತಾನ್ಯವ್ರತಾನಿ ಚ ||೮೫||

---

೮೨. ಶೌನಕಮುನಿ ಹೇಳಿದನು.—ಓ ಅರ್ಜುನಾ, ಸರ್ವಸಮರ್ಥನೂ ಲೋಕಪೂಜ್ಯನೂ ಆದ ಆ ವಿಷ್ಣು ಹೀಗೆ ಹೇಳಲು, ಬಲಿಚಕ್ರವರ್ತಿಯು ಸಂತೋಷದಿಂದ ನಮಸ್ಕರಿಸಿ ಇಂತೆಂದು ನುಡಿದನು.

೮೩. ಬಲಿಚಕ್ರವರ್ತಿ ಹೇಳಿದನು.—ದೇವಾ, ನಿನ್ನ ಆಜ್ಞೆಯಂತೆ ನಾನು ಪಾತಾಲದಲ್ಲಿರುವಾಗ ನನ್ನ ಮನಸ್ಸಿಗೆ ತೃಪ್ತಿಯನ್ನುಂಟುಮಾಡುವ ಸಾಧನ ಯಾವುದು ?

೮೪. ಭಗವಂತನು ಹೇಳಿದನು.—ಶಾಸ್ತ್ರವಿಧಿಯನ್ನು ಗಮನಿಸದೆ ಕೊಟ್ಟ ದಾನಗಳು, ಶ್ರೋತ್ರಿಯನನ್ನು ಕರೆಯದೆ ಮಾಡಿದ ಶ್ರಾದ್ಧಗಳು ಮತ್ತು ಶ್ರದ್ಧೆಯಿಲ್ಲದೆ ಆಚರಿಸಿದ ಹೋಮಗಳು ನಿನಗೆ ತೃಪ್ತಿಯನ್ನು ಉಂಟುಮಾಡುವುವು.

೮೫. ದಕ್ಷಿಣೆಯಿಲ್ಲದ ಯಜ್ಞಗಳು, ಶಾಸ್ತ್ರನಿಯಮವನ್ನು ಉಲ್ಲಂಘಿಸಿ ಮಾಡಿದ ಕರ್ಮಗಳು, ನಿಯಮವನ್ನು ಅನುಸರಿಸದೆ ಮಾಡಿದ ವೇದಾಧ್ಯಯನ ಇವು ನಿನಗೆ ಫಲವನ್ನು ಕೊಡುತ್ತವೆ.

|| ಶೌನಕಉವಾಚ ||

ಬಲೇರ್ವರಮಿಮಂ ದತ್ವಾ ಶಕ್ರಾಯ ತ್ರಿದಿವಂ ತಥಾ ।
ವ್ಯಾಪಿನಾ ತೇನ ರೂಪೇಣ ಜಗಾಮಾದರ್ಶನಂ ಹರಿಃ ||೪೬||

ಪ್ರಶಶಾಸ ಯಥಾಪೂರ್ವಮಿಂದ್ರಸ್ತ್ರೈಲೋಕ್ಯಪೂಜಿತಃ ।
ನಿಷೇವೇ ಚ ಪರಾನ್ ಕಾಮಾನ್ ಬಲಿಃ ಪಾತಾಲಸಂಸ್ಥಿತಃ ||೪೭||

ಇತ್ಯೇವ ದೇವದೇವೇನ ಬದ್ಧೋಽಸೌ ದಾನವೋತ್ತಮಃ ।
ದೇವಾನಾಂ ಕಾರ್ಯಕರಣೇ ಭೂಯೋಽಪಿ ಜಗತಿ ಸ್ಥಿತಃ ||೪೮||

ಸಂಬಂಧೀ ತೇ ಮಹಾಭಾಗ ದ್ವಾರಕಾಯಾಂ ವ್ಯವಸ್ಥಿತಃ ।
ದಾನವಾನಾಂ ವಿನಾಶಾಯ ಭಾರಾವತರಣಾಯ ಚ ||೪೯||

---

೪೬. ಶೌನಕಮುನಿಯು ಹೇಳಿದನು.—ಬಲಿಚಕ್ರವರ್ತಿಗೆ ಈ ವರವನ್ನೂ ಇಂದ್ರನಿಗೆ ಸ್ವರ್ಗವನ್ನೂ ಕೊಟ್ಟು, ಲೋಕವೆಲ್ಲವನ್ನೂ ಆಕ್ರಮಿಸಿದ್ದ ಆ ದಿವ್ಯ ರೂಪದಿಂದ ಕೂಡಿ ಹರಿಯು ಅದೃಶ್ಯನಾದನು.

೪೭. ಇಂದ್ರನು ಮೂರುಲೋಕಗಳ ಮನ್ನಣೆಗೆ ಪಾತ್ರನಾಗಿ ಎಂದಿನಂತೆ ರಾಜ್ಯಭಾರವನ್ನು ಮಾಡಿದನು. ಬಲಿಯು ಪಾತಾಲದಲ್ಲಿ ಇದ್ದುಕೊಂಡು ಉತ್ತಮ ವಾದ ಭೋಗಗಳನ್ನು ಅನುಭವಿಸಿದನು.

೪೮. ದೇವದೇವನಾದ ವಿಷ್ಣು ದಾನವೋತ್ತಮನಾದ ಆ ಬಲಿಯನ್ನು ಅಲ್ಲೇ ನಿರ್ಬಂಧದಲ್ಲಿಟ್ಟನು. ದೇವತೆಗಳ ಕಾರ್ಯಾರ್ಥವಾಗಿ ಆ ಭಗವಂತನು ಮತ್ತೆ ಈ ಲೋಕಕ್ಕೆ ಬಂದಿದ್ದಾನೆ.

೪೯. ಮಹಾತ್ಮನಾದ ಎಲೈ ಅರ್ಜುನನೇ, ನಿನ್ನ ಬಂಧುವಾದ ಕೃಷ್ಣನೇ ಆತನು. ದಾನವರ ವಿನಾಶಕ್ಕಾಗಿಯೂ ಭೂಭಾರವನ್ನು ಕಳೆಯುವುದಕ್ಕಾಗಿಯೂ ಅವನು ಈಗ ದ್ವಾರಕಾನಗರದಲ್ಲಿ ಇದ್ದಾನೆ.

ಯತೋ ಯದುಕುಲೇ ಕೃಷ್ಣೋ ಭವತಃ ಶತ್ರುನಿಗ್ರಹೇ ।
ಸಹಾಯಭೂತಃ ಸಾರಥ್ಯಂ ಕರಿಷ್ಯತಿ ಬಲಾನುಜಃ ॥೯೦॥

ಏತತ್ಸರ್ವಂ ಸಮಾಖ್ಯಾತಂ ವಾಮನಸ್ಯ ಚ ಧೀಮತಃ ।
ಅವತಾರಂ ಮಹಾವೀರ ಶ್ರೋತುಮಿಚ್ಛೋಸ್ತ್ವಾರ್ಜುನ ॥೯೧॥

॥ ಅರ್ಜುನ ಉವಾಚ ॥

ಶ್ರುತವಾನಿಹ ತೇ ಪೃಷ್ಟಂ ಮಾಹಾತ್ಮ್ಯಂ ಕೇಶವಸ್ಯ ಚ ।
ಗಂಗಾದ್ವಾರಮಿತೋ ಯಾಸ್ಯಾಮ್ಯನುಜ್ಞಾಂ ದೇಹಿ ಮೇ ವಿಭೋ ॥೯೨॥

॥ ಸೂತ ಉವಾಚ ॥

ಏವಮುಕ್ತ್ವಾ ಯಯೌ ಪಾರ್ಥೋ ನೈಮಿಷಂ ಶೌನಕೋ ಗತಃ ।
ಇತ್ಯೇತದ್ದೇವದೇವದೇವಸ್ಯ ವಿಷ್ಣೋರ್ಮಾಹಾತ್ಮ್ಯಮುತ್ತಮಂ ।
ವಾಮನಸ್ಯ ಪಠೇದ್ಯಸ್ತು ಸರ್ವಪಾಪೈಃ ಪ್ರಮುಚ್ಯತೇ ॥೯೩॥

---

೯೦. ಏಕೆಂದರೆ ಬಲರಾಮನ ತಮ್ಮನಾದ ಶ್ರೀ ಕೃಷ್ಣನು ಯದುಕುಲದಲ್ಲಿ ಅವತರಿಸಿ, ಶತ್ರುಗಳನ್ನು ಅಡಗಿಸಲು ನಿಮಗೆ ಸಹಾಯಕನಾಗಿ ನಿನ್ನ ಸಾರಥಿಯಾಗುವನು.

೯೧. ಮಹಾವೀರನಾದ ಓ ಅರ್ಜುನಾ, ಸರ್ವಜ್ಞನಾದ ವಾಮನ ಮೂರ್ತಿಯ ಅವತಾರವನ್ನು ನೀನು ಕೇಳಬಯಸಿದೆ. ಅದೆಲ್ಲವನ್ನೂ ನಿನಗೆ ಹೇಳಿದೆನು.

೯೨. ಅರ್ಜುನನು ಹೇಳಿದನು.—ನಿನ್ನನ್ನು ಪ್ರಶ್ನೆಮಾಡಿ ಮಹಾವಿಷ್ಣುವಿನ ಮಹಿಮೆಯನ್ನು ತಿಳಿದುಕೊಂಡೆನು. ಇಲ್ಲಿಂದ ಮುಂದೆ ಗಂಗಾದ್ವಾರಕ್ಕೆ ಹೋಗುವೆನು. ಪೂಜ್ಯನೇ, ನನಗೆ ಅಪ್ಪಣೆಯನ್ನು ಕೊಡು.

೯೩. ಸೂತಪೌರಾಣಿಕನು ಹೇಳಿದನು.—ಹೀಗೆ ಹೇಳಿ ಅರ್ಜುನನು ಹೊರಟುಹೋದನು. ಶೌನಕಮುನಿಯೂ ಸಹ ನೈಮಿಶಾರಣ್ಯಕ್ಕೆ ತೆರಳಿದನು. ದೇವದೇವನಾದ ಮಹಾವಿಷ್ಣುವಿನ ಈ ವಾಮನಾವತಾರದ ವೃತ್ತಾಂತವನ್ನು ಓದುವಾತನು ಎಲ್ಲ ಪಾಪಗಳಿಂದಲೂ ಬಿಡುಗಡೆ ಹೊಂದುವನು.

ಬಲಿಪ್ರಹ್ಲಾದಸಂವಾದಂ ಮಂತ್ರಿತಂ ಬಲಿಶುಕ್ರಯೋಃ ।
ಬಲೇರ್ವಿಷ್ಣೋಶ್ಚ ಕಥಿತಂ ಯಃ ಸ್ಮರಿಷ್ಯತಿ ಮಾನವಃ ॥೯೪॥

ನಾಧಯೋ ವ್ಯಾಧಯಸ್ತಸ್ಯ ನ ಚ ಮೋಹಾಕುಲಂ ಮನಃ ।
ಭವಿಷ್ಯತಿ ದ್ವಿಜಶ್ರೇಷ್ಠಾಃ ಪುಂಸಸ್ತಸ್ಯ ಕದಾಚನ ॥೯೫॥

ಚ್ಯುತರಾಜ್ಯೋ ನಿಜಂ ರಾಜ್ಯಮಿಷ್ಟಾಪ್ತಿಂ ಚ ವಿಯೋಗವಾನ್ ।
ಅವಾಪ್ನೋತಿ ಮಹಾಭಾಗೋ ನರಃ ಶ್ರುತ್ವಾ ಕಥಾಮಿಮಾಂ ॥೯೬॥

ಇತಿ ಶ್ರೀಮತ್ಸ್ಯೇ ಮಹಾಪುರಾಣೇ ವಾಮನಪ್ರಾದುರ್ಭಾವೋ
ನಾಮ ಷಟ್ಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಃ

---

೯೪-೯೫. ಬಲಿಚಕ್ರವರ್ತಿಗೂ ಪ್ರಹ್ಲಾದನಿಗೂ ನಡೆದ ಸಂವಾದ, ಬಲಿಯು ಮತ್ತು ಶುಕ್ರಾಚಾರ್ಯನ ಸಮಾಲೋಚನೆ, ವಿಷ್ಣುವಿಗೂ ಬಲೀಂದ್ರನಿಗೂ ಆದ ಮಾತುಕತೆಗಳು ಇವುಗಳನ್ನು ಯಾವನು ಸ್ಮರಣಮಾಡುತ್ತಾನೋ ಅವನಿಗೆ ಮನೋವ್ಯಥೆಗಳೂ ಬೇನೆಗಳೂ ಬಾರವು. ಎಲೈ ಬ್ರಾಹ್ಮಣೋತ್ತಮರೇ, ಆ ಮಾನವನ ಮನಸ್ಸು ಎಂದಿಗೂ ಮೋಹಕ್ಕೆ ಸಿಕ್ಕಿಕೊಳ್ಳದು.

೯೬. ಭಾಗ್ಯಶಾಲಿಯಾದ ಮನುಷ್ಯನಿಗೆ ಈ ಕಥೆಯನ್ನು ಕೇಳುವ ಯೋಗವು ಲಭಿಸುವುದು. ಅವನು ರಾಜ್ಯಭ್ರಷ್ಟನಾಗಿದ್ದರೆ ಮರಳಿ ರಾಜ್ಯವನ್ನು ಪಡೆಯುವನು. ವಿರಹದುಃಖದಲ್ಲಿದ್ದರೆ ಇಷ್ಟಜನರೊಡನೆ ಮತ್ತೆ ಸೇರುವನು.

## ಅಧ್ಯಾಯದ ಸಾರಾಂಶ

ವಾಮನ ಮೂರ್ತಿಯು ಬಲಿಚಕ್ರವರ್ತಿಗೆ ವರವನ್ನು ಕೊಟ್ಟ ವೃತ್ತಾಂತವನ್ನು ಈ ಅಧ್ಯಾಯವು ತಿಳಿಸುತ್ತದೆ.

ಮಹಾವಿಷ್ಣು ವಾಮನರೂಪವನ್ನು ತಾಳಿ ಬಲಿಚಕ್ರವರ್ತಿಯ ಯಾಗಶಾಲೆಗೆ ಬರುತ್ತಿದ್ದನು. ಅವನ ಹೆಜ್ಜೆಯ ಭಾರವನ್ನು ತಾಳಲಾರದೆ ಭೂಮಿ ನಡುಗಿತು. ಪರ್ವತಗಳು ಅಲುಗಾಡಿದವು. ಅದರ ಕಾರಣವೇನೆಂದು ಬಲೀಂದ್ರನು ಶುಕ್ರಾಚಾರ್ಯನನ್ನು ಕೇಳಿದನು. ಸಕಲ ಶಾಸ್ತ್ರಜ್ಞನಾದ ಆತನು ಬಹಳಕಾಲ

ಚಿಂತಿಸಿ, ಕೊನೆಗೆ ವಾಸ್ತವಾಂಶವೆಲ್ಲವನ್ನೂ ಹೇಳಿ "ಎಂತಹ ಅಲ್ಪವಿಚಾರವೇ ಆಗಲಿ ನೀನು ಯಾವುದಕ್ಕೂ ಮಾತುಕೊಟ್ಟು ಪ್ರತಿಜ್ಞೆ ಮಾಡಬೇಡ. ವಿಷ್ಣು ದೇವತೆಗಳ ಹಿತಕ್ಕಾಗಿ ನಿನ್ನ ಬಳಿಗೆ ಈಗ ಮಾಯಾರೂಪದಿಂದ ಬರುತ್ತಿದ್ದಾನೆ" ಎಂದು ಎಚ್ಚರಿಸಿದನು.

ಈ ಮಾತನ್ನು ಕೇಳಿದೊಡನೆಯೇ ಬಲಿಚಕ್ರವರ್ತಿಗೆ ಆನಂದವಾಯಿತು. ಶರೀರವು ರೋಮಾಂಚಿತವಾಯಿತು "ದೇವದೇವನಾದ ಮಹಾವಿಷ್ಣು ನನ್ನನ್ನು ಬೇಡುವುದು ದೊಡ್ಡದೋ? ನಾನು ಕೊಡುವುದು ದೊಡ್ಡದೋ? ಒಂದು ವೇಳೆ ನನ್ನ ತಲೆಯನ್ನೇ ಕೇಳಿದರೂ ನಾನು ಕೊಟ್ಟುಬಿಡುತ್ತೇನೆ. ಇದು ನಿಶ್ಚಯ" ಎಂದು ಆತನು ತನ್ನ ಆಚಾರ್ಯನಿಗೆ ಉತ್ತರವಿತ್ತನು.

ಈ ವೇಳೆಗೆ ವಾಮನಭಗವಂತನು ಅಲ್ಲಿಗೆ ಬಂದನು. ದೈತ್ಯರಾಜನು ಅವನನ್ನು ಪೂಜಿಸಿ ಬೇಕಾದುದನ್ನು ಕೇಳಬಹುದೆನ್ನಲು, ಅಗ್ನಿಯನ್ನಿಟ್ಟುಕೊಂಡು ರಕ್ಷಿಸುವುದಕ್ಕಾಗಿ ಮೂರು ಹೆಜ್ಜೆ ನೆಲವು ಬೇಕೆಂದು ವಿಷ್ಣು ಕೇಳಿದನು. ಬಲೀಂದ್ರನು ಸಂತೋಷದಿಂದ ಒಪ್ಪಿಕೊಂಡು ದಾನೋದಕವನ್ನು ಅವನ ಕೈಗೆ ಬಿಟ್ಟನು.

ಕೂಡಲೆ ವಿಷ್ಣು ತನ್ನ ಹ್ರಸ್ವಾಕಾರವನ್ನು ಬಿಟ್ಟು ಲೋಕವೆಲ್ಲವನ್ನೂ ಆಕ್ರಮಿಸುವ ಅದ್ಭುತರೂಪವನ್ನು ತಾಳಿದನು. ಮೂರುಲೋಕವನ್ನೂ ಆಕ್ರಮಿಸಿ ಕೊಂಡು ಅದನ್ನು ಇಂದ್ರನಿಗೆ ಕೊಟ್ಟನು. ಬಲಿಚಕ್ರವರ್ತಿಗೆ ಸುತಲವೆಂಬ ಪಾತಾಲ ದಲ್ಲಿ ಸ್ಥಾನವನ್ನು ಕೊಟ್ಟು ಅಲ್ಲಿ ಅವನು ಸುಖವಾಗಿರಬೇಕೆಂದೂ, ಸಾವರ್ಣಿಕ ಮನ್ವಂತರದಲ್ಲಿ ಅವನಿಗೆ ಇಂದ್ರನ ಪದವಿ ಲಭಿಸುವುದೆಂದೂ ಹೇಳಿ ಅದೃಶ್ಯ ನಾದನು. ಈ ವಾಮನಾವತಾರದ ಉಪಾಖ್ಯಾನವನ್ನು ಪಠಿಸುವಾತನು ಸಕಲ ಪಾಪಗಳನ್ನೂ ಕಳೆದುಕೊಂಡು ಇಷ್ಟಾರ್ಥಗಳನ್ನು ಪಡೆಯುವನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ವಾಮನ ಪ್ರಾದುರ್ಭಾವವೆಂಬ
ಇನ್ನೂರ ನಲವತ್ತಾರನೆಯ ಅಧ್ಯಾಯವು ಮುಗಿದುದು

## ಅಥ ದ್ವಿಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಃ

|| ಅರ್ಜುನ ಉವಾಚ ||

ಪ್ರಾದುರ್ಭಾವಾನ್ಪುರಾಣೇಷು ವಿಷ್ಣೋರಮಿತತೇಜಸಃ ।
ಸತಾಂ ಕಥಯತಾಂ ವಿಪ್ರ ವಾರಾಹ ಇತಿ ನಃ ಶ್ರುತಂ || ೧ ||

ಜಾನೇ ನ ತಸ್ಯ ಚರಿತಂ ನ ವಿಧಿಂ ನ ಚ ವಿಸ್ತರಂ ।
ನ ಕರ್ಮಗುಣಸಂಸ್ಥಾನಂ ನ ಚಾಪ್ಯಂತಂ ಮನೀಷಿಣಃ || ೨ ||

ಕಿಮಾತ್ಮಕೋ ವರಾಹೋಽಸೌ ಕಿಂಮೂರ್ತಿಃ ಕಾಸ್ಯ ದೇವತಾ ।
ಕಿಂಪ್ರಮಾಣಃ ಕಿಂಪ್ರಭಾವಃ ಕಿಂವಾ ತೇನ ಪುರಾ ಕೃತಂ || ೩ ||

ಏತನ್ಮೇ ಶಂಸ ತತ್ವೇನ ವರಾಹೋತ್ಪತ್ತಿವಿಸ್ತರಂ ।
ಯಥಾರ್ಥಂ ಚ ಸಮೇತಾನಾಂ ದ್ವಿಜಾತೀನಾಂ ವಿಶೇಷತಃ || ೪ ||

---

೧. ಅರ್ಜುನನು ಹೇಳಿದನು.—ಓ ದ್ವಿಜೋತ್ತಮಾ, ಅಪರಿಮಿತತೇಜಸ್ವಿಯಾದ ಮಹಾವಿಷ್ಣುವಿನ ಅವತಾರಗಳು ಪುರಾಣೋಕ್ತವಾಗಿವೆಯಷ್ಟೆ! ಅವುಗಳಲ್ಲಿ ವರಾಹಾವತಾರವೂ ಒಂದೆಂದು ಪುರಾಣಜ್ಞರಿಂದ ಕೇಳಿದ್ದೇವೆ.

೨. ಆದರೆ ಸರ್ವಜ್ಞನಾದ ಆ ವರಾಹಮೂರ್ತಿಯ ಚರಿತ್ರವನ್ನೂ, ಅವತಾರ ವಿಧಿಯನ್ನೂ, ಅದರ ವಿವರವನ್ನೂ, ಕರ್ಮ, ಗುಣ ಮತ್ತು ಆಕೃತಿಗಳನ್ನೂ, ಪರಿಸಮಾಪ್ತಿಯನ್ನೂ ತಿಳಿದಿಲ್ಲ.

೩. ಈ ವರಾಹನೆಂಬುವನಾರು? ಅವನ ಮೂರ್ತಿಯ ಸ್ವರೂಪವೇನು? ಅದರ ಅಭಿಮಾನದೇವತೆ ಯಾವುದು? ಅವನ ಪ್ರಮಾಣವೂ, ಪ್ರಭಾವವೂ ಯಾವುವು? ಪೂರ್ವದಲ್ಲಿ ಆತನು ಮಾಡಿದ ಕಾರ್ಯವು ತಾನೆ ಏನು?

೪. ಈ ವರಾಹೋತ್ಪತ್ತಿವೃತ್ತಾಂತವನ್ನು ನನಗೂ, ಮುಖ್ಯವಾಗಿ ಇಲ್ಲಿ ನೆರದಿರುವ ಬ್ರಾಹ್ಮಣರಿಗೂ ಯಥಾವತ್ತಾಗಿ ವರ್ಣಿಸಿ ಹೇಳು.

|| ಶೌನಕ ಉವಾಚ ||

ಏತತ್ತೇ ಕಥಯಿಷ್ಯಾಮಿ ಪುರಾಣಂ ಬ್ರಹ್ಮಸಮ್ಮಿತಂ |
ಮಹಾವರಾಹಚರಿತಂ ಕೃಷ್ಣಸ್ಯಾದ್ಭುತಕರ್ಮಣಃ || ೫ ||

ಯಥಾ ನಾರಾಯಣೋ ರಾಜನ್ವಾರಾಹಂ ವಪುರಾಸ್ಥಿತಃ |
ದಂಷ್ಟ್ರಯಾ ಗಾಂ ಸಮುದ್ರಸ್ಥಾಮುಜ್ಜಹಾರಾರಿಮರ್ದನಃ || ೬ ||

ಛಂದೋಗೀರ್ಭಿರುದಾರಾಭಿಃ ಶ್ರುತಿಭಿಃ ಸಮಲಂಕೃತಃ |
ಮನಃಪ್ರಸನ್ನತಾಂ ಕೃತ್ವಾ ನಿಬೋಧ ವಿಜಯಾಧುನಾ || ೭ ||

ಇದಂ ಪುರಾಣಂ ಪರಮಂ ಪುಣ್ಯಂ ವೇದೈಶ್ಚ ಸಂಮಿತಂ |
ನಾನಾಶ್ರುತಿಸಮಾಯುಕ್ತಂ ನಾಸ್ತಿಕಾಯ ನ ಕೀರ್ತಯೇತ್ || ೮ ||

ಪುರಾಣಂ ವೇದಮಖಿಲಂ ಸಾಂಖ್ಯಂ ಯೋಗಂ ಚ ವೇದ ಯಃ |
ಕಾರ್ತ್ಸ್ನ್ಯೇನ ವಿಧಿನಾ ಪ್ರೋಕ್ತಂ ಸೋಽಸ್ಯಾರ್ಥಂ ವೇದಯಿಷ್ಯತಿ || ೯ ||

---

೫. ಶೌನಕಮುನಿ ಹೇಳಿದನು.— ಅದ್ಭುತಕಾರ್ಯವನ್ನೆಸಗಿದ ಕೃಷ್ಣಪರಮಾತ್ಮನ ವರಾಹಾವತಾರದ ವೃತ್ತಾಂತವನ್ನು ನಿನಗೆ ಹೇಳುವೆನು. ಈ ಪುರಾಣದ ಕಥೆಯು ವೇದಕ್ಕೆ ಸಮಾನವಾದುದು.

೬-೭. ಅರ್ಜುನಾ, ಶತ್ರುನಾಶಕನಾದ ನಾರಾಯಣನು ವರಾಹರೂಪವನ್ನು ತಾಳಿ, ಸಮುದ್ರದಲ್ಲಿ ಮುಳುಗಿದ್ದ ಭೂಮಿಯನ್ನು ಕೋರೆಹಲ್ಲಿನಿಂದ ಹೇಗೆ ಎತ್ತಿದನು? ದಿವ್ಯವಾದ ಛಂದೋವಚನಗಳಿಂದಲೂ ವೇದಗಳಿಂದಲೂ ಭೂಷಿತನಾಗಿ ಮನಃಪ್ರಸಾದವನ್ನು ಹೇಗೆ ಉಂಟುಮಾಡಿದನು ಎಂಬುದನ್ನು ಹೇಳುವೆನು ಕೇಳು.

೮. ಅತ್ಯಂತ ಶ್ರೇಷ್ಠವೂ, ಪುಣ್ಯಪ್ರದವೂ, ವೇದಸದೃಶವೂ, ವಿಧವಿಧವಾದ ಶ್ರುತಿವಚನಯುಕ್ತವೂ ಆದ ಈ ಪುರಾಣವನ್ನು ನಾಸ್ತಿಕನಿಗೆ ಹೇಳಬಾರದು.

೯. ಪುರಾಣಗಳನ್ನೂ, ಎಲ್ಲ ವೇದಗಳನ್ನೂ, ಸಾಂಖ್ಯಯೋಗಗಳೆಂಬ ದರ್ಶನಗಳನ್ನೂ ಸಂಪೂರ್ಣವಾಗಿ ಯಾವನು ಬಲ್ಲನೋ ಅವನು ಈ ವರಾಹಾವತಾರದ ರಹಸ್ಯವನ್ನು ತಿಳಿಯುವನು.

ವಿಶ್ವೇದೇವಾಸ್ತಥಾ ಸಾಧ್ಯಾ ರುದ್ರಾದಿತ್ಯಾಸ್ತಥಾಶ್ವಿನೌ ।
ಪ್ರಜಾನಾಂ ಪತಯಶ್ಚೈವ ಸಪ್ತ ಚೈವ ಮಹರ್ಷಯಃ ॥೧೦॥

ಮನಃಸಂಕಲ್ಪಜಾಶ್ಚೈವ ಪೂರ್ವಜಾ ಋಷಯಸ್ತಥಾ ।
ವಸವೋ ಮರುತಶ್ಚೈವ ಗಂಧರ್ವಾ ಯಕ್ಷರಾಕ್ಷಸಾಃ ॥೧೧॥

ದೈತ್ಯಾಃ ಪಿಶಾಚಾ ನಾಗಾಶ್ಚ ಭೂತಾನಿ ವಿವಿಧಾನಿ ಚ ।
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾ ಮ್ಲೇಚ್ಛಾಶ್ಚ ಯೇ ಭುವಿ ॥೧೨॥

ಚತುಷ್ಪದಾನಿ ಸರ್ವಾಣಿ ತಿರ್ಯಗ್ಯೋನಿಶತಾನಿ ಚ ।
ಜಂಗಮಾನಿ ಚ ಸತ್ವಾನಿ ಯಚ್ಚಾನ್ಯಜ್ಜೀವಸಂಜ್ಞಿತಂ ॥೧೩॥

ಪೂರ್ಣೇ ಯುಗಸಹಸ್ರೇ ತು ಬ್ರಾಹ್ಮೇಽಹನಿ ತಥಾ ಗತೇ ।
ನಿರ್ವಾಣೇ ಸರ್ವಭೂತಾನಾಂ ಸರ್ವೋತ್ಪಾತಸಮುದ್ಭವೇ ॥೧೪॥

ಹಿರಣ್ಯರೇತಾಸ್ತ್ರಿಶಿಖಸ್ತತೋ ಭೂತ್ವಾ ವೃಷಾಕಪಿಃ ।
ಶಿಖಾಭಿರ್ವಿಧಮಂಲ್ಲೋಕಾನಶೋಷಯತ ವಹ್ನಿನಾ ॥೧೫॥

---

೧೦-೧೫. ಚತುರ್ಯುಗಗಳು ಸಾವಿರ ಸಾರಿ ಕಳೆದರೆ ಬ್ರಹ್ಮದೇವನಿಗೆ ಒಂದು ಹಗಲಾಗುತ್ತದೆ. ಅದು ಮುಗಿದ ಮೇಲೆ ಸಕಲ ಪ್ರಾಣಿಗಳ ವಿನಾಶ ಸೂಚಕವಾದ ಉತ್ಪಾತಗಳಾಗುತ್ತವೆ. ಆಗ ವಿಷ್ಣು ಹಿರಣ್ಯವೀರ್ಯನೂ ಶಿಖಾತ್ರಯಸಹಿತನೂ ಆದ ಅಗ್ನಿಯ ರೂಪವನ್ನು ಧರಿಸಿ, ತನ್ನ ಜ್ವಾಲೆಗಳಿಂದ ಲೋಕಗಳೆಲ್ಲವನ್ನೂ ಧ್ವಂಸ ಮಾಡಿ ಜಲಾಶಯಗಳನ್ನು ಬತ್ತಿಸುವನು. ವಿಶ್ವೇದೇವರು, ಸಾಧ್ಯರು, ರುದ್ರರು, ಆದಿತ್ಯರು, ಅಶ್ವಿನೀ ದೇವತೆಗಳು, ಪ್ರಜಾಪತಿಗಳು ಸಪ್ತರ್ಷಿಗಳು, ಮಾನಸಪುತ್ರರೆನಿಸಿದ ಋಷಿಗಳು, ವಸುಗಳು, ಮರುತ್ತರು, ಗಂಧರ್ವರು, ಯಕ್ಷರು, ರಾಕ್ಷಸರು, ದೈತ್ಯರು, ಪಿಶಾಚಗಳು, ನಾಗರು, ವಿವಿಧ ಭೂತಗಳು, ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು, ಮ್ಲೇಚ್ಛರು, ನಾಲ್ಕುಕಾಲಿನ ಪ್ರಾಣಿಗಳು, ನೂರಾರು ಜಾತಿಯ ತಿರ್ಯಗ್ಜಂತುಗಳು, ಚಲಿಸುವ ಮತ್ತು ಚಲಿಸದಿರುವ ಉಳಿದ ಜೀವಿಗಳು ಇವೆಲ್ಲವೂ ಪ್ರಳಯಾಗ್ನಿಗೆ ತುತ್ತಾಗುವುವು.

ದಹ್ಯಮಾನಾಸ್ತತಸ್ತಸ್ಯ ತೇಜೋರಾಶಿಭಿರುದ್ಗತೈಃ ।
ವಿವರ್ಣವರ್ಣಾ ದಗ್ಧಾಂಗಾ ಹತಾರ್ಚಿಷ್ಮದ್ಭಿರಾನನೈಃ ॥೧೬॥

ಸಾಂಗೋಪನಿಷದೋ ವೇದಾ ಇತಿಹಾಸಪುರೋಗಮಾಃ ।
ಸರ್ವವಿದ್ಯಾಃ ಕ್ರಿಯಾಶ್ಚೈವ ಸರ್ವಧರ್ಮಪರಾಯಣಾಃ ॥೧೭॥

ಬ್ರಹ್ಮಾಣಮಗ್ರತಃ ಕೃತ್ವಾ ಪ್ರಭವಂ ವಿಶ್ವತೋಮುಖಂ ।
ಸರ್ವದೇವಗಣಾಶ್ಚೈವ ತ್ರಯಸ್ತ್ರಿಂಶತ್ತು ಕೋಟಯಃ ॥೧೮॥

ತಸ್ಮಿನ್ನಹನಿ ಸಂಪ್ರಾಪ್ತೇ ತಂ ಹಂಸಂ ಮಹದಕ್ಷರಂ ।
ಪ್ರವಿಶಂತಿ ಮಹಾತ್ಮಾನಂ ಹರಿಂ ನಾರಾಯಣಂ ಪ್ರಭುಂ ॥೧೯॥

ತೇಷಾಂ ಭೂಯಃ ಪ್ರವೃತ್ತಾನಾಂ ನಿಧನೋತ್ಪತ್ತಿರುಚ್ಯತೇ ।
ಯಥಾ ಸೂರ್ಯಸ್ಯ ಸತತಮುದಯಾಸ್ತಮನೇ ಇಹ ॥೨೦॥

---

೧೬-೧೯. ಮೇಲೆ ಮೇಲೆ ಏಳುತ್ತಿರುವ ತೇಜೋರಾಶಿಗೆ ಸಿಕ್ಕಿ, ಕಾಂತಿ ಹೀನವಾಗಿ, ಮೈಸುಟ್ಟು, ಮುಖದಲ್ಲಿ ಕಳೆಯಿಲ್ಲದೆ ಶಿಕ್ಷಾದ್ಯಂಗಗಳಿಂದಲೂ ಉಪ ನಿಷತ್ತುಗಳಿಂದಲೂ ಸಹಿತವಾದ ವೇದಗಳು, ಇತಿಹಾಸಗಳು, ಸಕಲ ವಿದ್ಯೆಗಳು, ಧರ್ಮಮಾರ್ಗಬೋಧಕಗಳಾದ ಕರ್ಮಗಳು, ಮೂವತ್ತುಮೂರು ಕೋಟಿ ದೇವಗಣಗಳು ಇವರೆಲ್ಲ ಬ್ರಹ್ಮನನ್ನು ಮುಂದೆ ಬಿಟ್ಟುಕೊಂಡು ಆಪ್ರಳಯದಿನದಲ್ಲಿ ಜಗತ್ಕಾರಣನೂ ಸರ್ವತೋಮುಖನೂ ಶುದ್ಧಸತ್ವಮಯನೂ, ನಿರ್ವಿಕಾರನೂ, ಅಪಾರಮಹಿಮಾಶಾಲಿಯೂ, ಜಗತ್ಪ್ರಭುವೂ ಆದ ನಾರಾಯಣನಲ್ಲಿ ಐಕ್ಯರಾಗುವರು.

೨೦. ಸೂರ್ಯನ ಉದಯಾಸ್ತಮಯಗಳು ಎಡೆಬಿಡದೆ ಆಗುತ್ತಲೇ ಇರುವಂತೆ ಆ ಬ್ರಹ್ಮಾದಿದೇವತೆಗಳು ಮರಮರಳಿ ಹುಟ್ಟಿ ನಾಶವಾಗುತ್ತಲೇ ಇರುವರು. ಇದನ್ನೇ ಸೃಷ್ಟಿಸಂಹಾರಗಳೆನ್ನುವರು.

ಪೂರ್ಣೇ ಯುಗಸಹಸ್ರಾಂತೇ ಕಲ್ಪೋ ನಿಶ್ಶೇಷ ಉಚ್ಯತೇ ।
ಯಸ್ಮಿಞ್ಜೀವಕೃತಂ ಸರ್ವಂ ನಿಶ್ಶೇಷಂ ಸಮತಿಷ್ಠತ ||೨೧||

ಸಂಹೃತ್ಯ ಲೋಕಾನಖಿಲಾನ್ ಸದೇವಾಸುರಮಾನುಷಾನ್ ।
ಕೃತ್ವಾ ಸುಸಂಸ್ಥಾಂ ಭಗವಾನಾಸ್ತ ಏಕೋ ಜಗದ್ಗುರುಃ ||೨೨||

ಸ ಸ್ರಷ್ಟಾ ಸರ್ವಭೂತಾನಾಂ ಕಲ್ಪಾಂತೇಷು ಪುನಃಪುನಃ ।
ಅವ್ಯಯಃ ಶಾಶ್ವತೋ ದೇವೋ ಯಸ್ಯ ಸರ್ವಮಿದಂ ಜಗತ್ ||೨೩||

ನಷ್ಟಾರ್ಕಕಿರಣೇ ಲೋಕೇ ಚಂದ್ರಗ್ರಹವಿವರ್ಜಿತೇ ।
ತ್ಯಕ್ತಧೂಮಾಗ್ನಿಪವನೇ ಕ್ಷೀಣಯಜ್ಞವಷಟ್ಕ್ರಿಯೇ ||೨೪||

ಅಪಕ್ಷಿಗಣಸಂಪಾತೇ ಸರ್ವಪ್ರಾಣಿಹರೇ ಪಥಿ ।,
ಅಮರ್ಯಾದಾಕುಲೇ ರೌದ್ರೇ ಸರ್ವತಸ್ತಮಸಾವೃತೇ ||೨೫||

---

೨೧. ಸಹಸ್ರ ಯುಗಗಳು ಪೂರ್ಣವಾದ ಮೇಲೆ ಕಲ್ಪವು ಮುಗಿಯಿತೆಂದು ಹೇಳುತ್ತಾರೆ. ಆ ಕಾಲದಲ್ಲಿ ಜೀವರಾಶಿಗಳೆಲ್ಲ ಒಂದೂ ಉಳಿಯದಂತೆ ಆ ಪರಮಾತ್ಮನಲ್ಲಿ ಸೇರಿಹೋಗುತ್ತವೆ.

೨೨. ದೇವಾಸುರಮನುಷ್ಯರಿಂದ ಕೂಡಿದ ಲೋಕಗಳನ್ನೆಲ್ಲ ಉಪಸಂಹರಿಸಿ ತನ್ನಲ್ಲಿರಿಸಿಕೊಂಡು ಜಗದ್ಗುರುವಾದ ಭಗವಂತನೊಬ್ಬನೇ ಲೀಲಾಮಗ್ನನಾಗಿರುವನು.

೨೩. ನಿರ್ವಿಕಾರನೂ, ಶಾಶ್ವತನೂ ಆದ ಆ ಭಗವಂತನು ಪ್ರಳಯವು ಮುಗಿದ ಮೇಲೆ ಮತ್ತೆ ಮತ್ತೆ ಸಕಲ ಜಂತುಗಳನ್ನೂ ಸೃಷ್ಟಿಸುವನು. ಈ ಸಮಸ್ತ ಜಗತ್ತೂ ಅವನಿಗೆ ಸೇರಿದುದು.

೨೪-೨೫. ಪ್ರಳಯವಾದಾಗ ಲೋಕದಲ್ಲಿ ಸೂರ್ಯನ ಕಿರಣಗಳು ಚಂದ್ರಾದಿ ಗ್ರಹಗಳು, ಹೊಗೆ, ಬೆಂಕಿ, ಗಾಳಿ, ಹವ್ಯಕವ್ಯಾದಿ ಕರ್ಮಗಳು, ಪಕ್ಷಿಗಳ ಗುಂಪುಗಳು, ವಿಧವಿಧವಾದ ಪ್ರಾಣಿಗಳು ಇವೊಂದೂ ಇರಲಿಲ್ಲ. ಧರ್ಮದ ನಿಂಬಧನೆ

ಅದೃಶ್ಯೇ ಸರ್ವಲೋಕೇಽಸ್ಮಿನ್ನಭಾವೇ ಸರ್ವಕರ್ಮಣಾಂ ।
ಪ್ರಶಾಂತೇ ಸರ್ವಸಂಪಾತೇ ನಷ್ಟೇ ವೈರಪರಿಗ್ರಹೇ ॥೨೬॥

ಗತೇ ಸ್ವಭಾವಸಂಸ್ಥಾನೇ ಲೋಕೇ ನಾರಾಯಣಾತ್ಮಕೇ ।
ಪರಮೇಷ್ಠೀ ಹೃಷೀಕೇಶಃ ಶಯನಾಯೋಪಚಕ್ರಮೇ ॥೨೭॥

ಪೀತವಾಸಾ ಲೋಹಿತಾಕ್ಷಃ ಕೃಷ್ಣೋ ಜೀಮೂತಸಂನಿಭಃ ।
ಶಿಖಾಸಹಸ್ರವಿಕಚಜಟಾಭಾರಂ ಸಮುದ್ವಹರ್ ॥೨೮॥

ಶ್ರೀವತ್ಸಲಕ್ಷಣಧರಂ ರಕ್ತಚಂದನಭೂಷಿತಂ ।
ವಕ್ಷೇ ಬಿಭ್ರರ್ ಮಹಾಬಾಹುಃ ಸವಿದ್ಯುದಿವ ತೋಯದಃ ॥೨೯॥

ಪುಂಡರೀಕಸಹಸ್ರೇಣ ಸ್ರಗಸ್ಯ ಶುಶುಭೇ ಶುಭಾ ।
ಪತ್ನೀ ಚಾಸ್ಯ ಸ್ವಯಂ ಲಕ್ಷ್ಮೀರ್ದೇಹಮಾವೃತ್ಯ ತಿಷ್ಠತಿ ॥೩೦॥

---

ಎಂಬುದಿಲ್ಲ. ಎಲ್ಲಕಡೆಯೂ ಕತ್ತಲೆ ಕವಿದು ಭಯಂಕರವಾಗಿತ್ತು. ಸಕಲಲೋಕಗಳೂ ಅದೃಶ್ಯವಾಗಿದ್ದುವು. ಸರ್ವಕರ್ಮಗಳೂ ನಿಂತುಹೋಗಿದ್ದುವು. ಒಬ್ಬರ ಮೇಲೊಬ್ಬರು ಬೀಳುವುದು, ಒಬ್ಬರನ್ನೊಬ್ಬರು ದ್ವೇಷಿಸುವುದು ಇವುಗಳ ಹೆಸರೇ ಇರಲಿಲ್ಲ. ಲೋಕವೆಲ್ಲ ಸೂಕ್ಷ್ಮಪ್ರಕೃತಿಯ ರೂಪದಿಂದ ನಾರಾಯಣನಲ್ಲಿ ಐಕ್ಯವಾಗಿ ಹೋಗಿತ್ತು. ಆ ಸಮಯದಲ್ಲಿ ವೈಕುಂಠವಾಸಿಯಾದ ನಾರಾಯಣನು ಯೋಗನಿದ್ರೆಗೆ ಮನಸ್ಸು ಕೊಟ್ಟನು.

೨೮. ಆ ಮಹಾವಿಷ್ಣು ಪೀತಾಂಬರಧಾರಿಯಾಗಿ, ಕಡೆಗಣ್ಣು ಸ್ವಲ್ಪ ಕೆಂಪಾಗಿರಲು, ದೇಹಕಾಂತಿ ಮೋಡವನ್ನು ಹೋಲುತ್ತಿರಲು, ವಿಪುಲವಾದ ಕೇಶಪಾಶವು ಜಟಾರೂಪವನ್ನು ತಾಳಿರಲು ಆನಂದದಿಂದ ವಿಹರಿಸುತ್ತಿದ್ದನು.

೨೯. ಆ ಮಹಾವೀರನ ವಕ್ಷಸ್ಥಲವು ಶ್ರೀವತ್ಸವೆಂಬ ಮಚ್ಚೆಯಿಂದಲೂ ಕೆಂಪುಗಂಧದಿಂದಲೂ ಅಲಂಕೃತವಾಗಿ ಮಿಂಚಿನಿಂದ ಕೂಡಿದ ಮೋಡವನ್ನು ಹೋಲುತ್ತಿತ್ತು.

೩೦. ಅವನು ಹಾಕಿಕೊಂಡಿದ್ದ ಪೂಮಾಲೆಯು ಸಾವಿರಾರು ತಾವರೆಗಳಿಂದ ಶೋಭಿಸುತ್ತಿತ್ತು. ಆತನ ಪತ್ನಿಯಾದ ಲಕ್ಷ್ಮೀದೇವಿಯು ಅವನ ವಕ್ಷಸ್ಥಲದಲ್ಲೇ ನೆಲಸಿದ್ದಳು.

ತತಃ ಸ್ವಪಿತಿ ಶಾಂತಾತ್ಮಾ ಸರ್ವಲೋಕಶುಭಾವಹಃ ।
ಕಿಮಪ್ಯಮಿತಯೋಗಾತ್ಮಾ ನಿದ್ರಾಯೋಗಮುಪಾಗತಃ ॥೩೧॥

ತತೋ ಯುಗಸಹಸ್ರೇ ತು ಪೂರ್ಣೇ ಸ ಪುರುಷೋತ್ತಮಃ ।
ಸ್ವಯಮೇವ ವಿಭುರ್ಭೂತ್ವಾ ಬುಧ್ಯತೇ ವಿಬುಧಾಧಿಪಃ ॥೩೨॥

ತತಶ್ಚಿಂತಯತೇ ಭೂಯಃ ಸೃಷ್ಟಿಂ ಲೋಕಸ್ಯ ಲೋಕಕೃತ್ ।
ನರಾನ್ ದೇವಗಣಾಂಶ್ಚೈವ ಪಾರಮೇಷ್ಠ್ಯೇನ ಕರ್ಮಣಾ ॥೩೩॥

ತತಃ ಸಂಚಿಂತಯನ್ ಕಾರ್ಯಂ ದೇವೇಷು ಸಮಿತಿಂಜಯಃ ।
ಸಂಭವಂ ಸರ್ವಲೋಕಸ್ಯ ವಿದಧಾತಿ ಸತಾಂ ಗತಿಃ ॥೩೪॥

ಕರ್ತಾ ಚೈವ ವಿಕರ್ತಾ ಚ ಸಂಹರ್ತಾ ವೈ ಪ್ರಜಾಪತಿಃ ।
ನಾರಾಯಣಃ ಪರಂ ಸತ್ಯಂ ನಾರಾಯಣಃ ಪರಂ ಪದಂ ॥೩೫॥

---

೩೧. ಸಕಲಲೋಕಗಳ ಹಿತಕಾರಿಯೂ, ಅಪರಿಮಿತ ಮಹಿಮಾವಂತನೂ, ಶಾಂತಾತ್ಮನೂ ಆದ ಭಗವಂತನು ಅನಿರ್ವಾಚ್ಯವೆನಿಸಿದ ಯೋಗನಿದ್ರೆಗೆ ತೊಡಗಿದನು.

೩೨. ಸಾವಿರ ಯುಗಗಳು ಪೂರ್ಣವಾದ ಬಳಿಕ ದೇವದೇವನಾದ ಆ ಪುರುಷೋತ್ತಮನು ಸರ್ವವ್ಯಾಪಕನಾಗಿ ತಾನೇ ಎಚ್ಚರಗೊಂಡನು.

೩೩. ಲೋಕಕರ್ತನಾದ ಆ ದೇವನು ಲೋಕವನ್ನೂ, ಮನುಷ್ಯರನ್ನೂ, ದೇವಗಣಗಳನ್ನೂ ವಾಙ್ಮನಸ್ಸುಗಳಿಗೆ ಅಗೋಚರವೆನಿಸಿದ ತನ್ನ ಸಂಕಲ್ಪರೂಪವಾದ ವ್ಯಾಪಾರದಿಂದ ಮರಳಿ ಸೃಷ್ಟಿಸಲು ಚಿಂತಿಸಿದನು.

೩೪. ಅಪರಾಜಿತನೂ, ಸತ್ಪುರುಷರ ಗತಿಯೂ ಆದ ಆ ನಾರಾಯಣನು ಸೃಷ್ಟಿಕ್ರಮವನ್ನು ಆಲೋಚಿಸಿ, ಬ್ರಹ್ಮಾದಿ ದೇವತೆಗಳ ಮೂಲಕ ಸಕಲ ಲೋಕಗಳನ್ನೂ ನಿರ್ಮಿಸಿದನು.

೩೫. ಪಂಚ ಭೂತಗಳನ್ನು ಸೃಷ್ಟಿಸುವವನು, ವಿಧವಿಧವಾದ ಚರಾಚರ ವಸ್ತುಗಳನ್ನು ನಿರ್ಮಿಸುವವನು, ಸಂಹರಿಸುವವನು, ಪ್ರಜೆಗಳನ್ನು ಪರಿಪಾಲಿಸುವವನು ಎಲ್ಲ ಆ ನಾರಾಯಣನೇ. ಅವನೇ ಉತ್ತಮೋತ್ತಮವಾದ ಸತ್ಯಸ್ವರೂಪ. ಪುನರಾವೃತ್ತಿರಹಿತವಾದ ಗತಿಯೂ ಅವನೇ.

**ನಾರಾಯಣಃ ಪರೋ ಯಜ್ಞೋ ನಾರಾಯಣಃ ಪರಾ ಗತಿಃ ।**
**ಸ ಸ್ವಯಂಭೂರಿತಿ ಜ್ಞೇಯಃ ಸ ಸ್ರಷ್ಟಾ ಭುವನಾಧಿಪಃ ॥೩೬॥**

**ಸ ಸರ್ವಮಿತಿ ವಿಜ್ಞೇಯೋ ಹ್ಯೇಷ ಯಜ್ಞಃ ಪ್ರಜಾಪತಿಃ ।**
**ಯದ್ವೇದಿತವ್ಯಂ ತ್ರಿದಶೈಸ್ತದೇಷ ಪರಿಕೀರ್ತ್ಯತೇ ॥೩೭॥**

**ಯತ್ತು ವೇದ್ಯಂ ಭಗವತೋ ದೇವಾ ಅಪಿ ನ ತದ್ವಿದುಃ ।**
**ಪ್ರಜಾನಾಂ ಪತಯಃ ಸರ್ವೇ ಋಷಯಶ್ಚ ಸಹಾಮರೈಃ ॥೩೮॥**

**ನಾಸ್ಯಾಂತಮಧಿಗಚ್ಛಂತಿ ವಿಚಿನ್ವಂತ ಇತಿ ಶ್ರುತಿಃ ।**
**ಯದಸ್ಯ ಪರಮಂ ರೂಪಂ ನ ತತ್ಪಶ್ಯಂತಿ ದೇವತಾಃ ॥೩೯॥**

**ಪ್ರಾದುರ್ಭಾವೇ ತು ಯದ್ರೂಪಂ ತದರ್ಚಂತಿ ದಿವೌಕಸಃ ।**
**ದರ್ಶಿತಂ ಯದನೇನೈವ ತದವೇಕ್ಷಂತಿ ದೇವತಾಃ ॥೪೦॥**

---

೩೬. ನಾರಾಯಣನೇ ಶ್ರೇಷ್ಠನಾದ ಯಜ್ಞಪುರುಷ. ನಾರಾಯಣನೇ ಉತ್ತಮವಾದ ಗತಿಯನ್ನು ಕೊಡತಕ್ಕವನು. ಅವನು ಯಾರಿಂದಲೂ ಸೃಷ್ಟನಾಗಲಿಲ್ಲ. ಎಲ್ಲವನ್ನೂ ಸೃಷ್ಟಿಸುವವನು ಅವನು. ಜಗತ್ತುಗಳ ಅಧಿಪತಿಯೂ ಅವನೇ.

೩೭. ಸರ್ವಾತ್ಮನಾದ ಆತನೇ ಎಲ್ಲವೂ ಎಂದರಿಯಬೇಕು. ಯಜ್ಞರೂಪನಾದ ಅವನೇ ಪ್ರಜಾಪತಿ. ದೇವತೆಗಳು ಯಾವುದನ್ನು ತಿಳಿಯಬೇಕೆಂದು ಯತ್ನಿಸುವರೋ ಆ ಪರಾತ್ಪರವಸ್ತು ಅವನೇ ಎಂದು ಜ್ಞಾನಿಗಳು ಹೇಳುತ್ತಾರೆ.

೩೮. ಭಗವಂತನ ಸಂಕಲ್ಪವೇನೆಂಬುದು ದೇವತೆಗಳಿಗೂ ತಿಳಿಯದು. ಪ್ರಜಾಪತಿಗಳು, ಎಲ್ಲ ಋಷಿಗಳು, ಮತ್ತು ಅಮರರು ಇವರಾರಿಗೂ ಅದು ಗೋಚರವಾಗದು.

೩೯. ಎಷ್ಟು ಹುಡುಕಿದರೂ ಇವನ ಗುಣವಿಭವಗಳ ಅಳತೆ ಇಷ್ಟೇ ಸರಿಯೆಂದು ಗೊತ್ತಾಗುವುದಿಲ್ಲ. ವೇದವೇ ಇದನ್ನು ಸಾರುತ್ತಿದೆ. ಇವನ ಅಪ್ರಾಕೃತ ದಿವ್ಯರೂಪವುಂಟಲ್ಲಾ! ಅದನ್ನು ದೇವತೆಗಳೂ ಕೂಡ ಕಂಡರಿಯರು.

೪೦. ಈತನು ವಿಧವಿಧವಾದ ಅವತಾರವನ್ನೆತ್ತಿದಾಗ ದೇವತೆಗಳು ಆ ರೂಪವನ್ನು ಅರ್ಚಿಸುತ್ತಾರೆ. ತನ್ನ ಗುಣರೂಪ ವಿಭವಾದಿಗಳಲ್ಲಿ ಯಾವುದನ್ನು ತಾನೇ ಕೃಪೆಯಿಂದ ತೋರಿಸುತ್ತಾನೋ ಅದು ಮಾತ್ರವೇ ಅವರಿಗೆ ಕಾಣಿಸುತ್ತದೆ.

ಯನ್ನ ದರ್ಶಿತವಾನೇಷ ಕಸ್ತದನ್ವೇಷ್ಟುಮೀಹತೇ ।
ಗ್ರಾಮಣೀಃ ಸರ್ವಭೂತಾನಾಮಗ್ನಿಮಾರುತಯೋರ್ಗತಿಃ ॥೪೧॥

ತೇಜಸಸ್ತಪಸಶ್ಚೈವ ನಿಧಾನಮಮೃತಸ್ಯ ಚ ।
ಚತುರಾಶ್ರಮಧರ್ಮೇಶಶ್ಚಾತುರ್ಹೋತ್ರಫಲಾಶನಃ ॥೪೨॥

ಚತುಃಸಾಗರಪರ್ಯಂತಶ್ಚತುರ್ಯುಗನಿವರ್ತಕಃ ।
ತದೇಷ ಸಂಹೃತ್ಯ ಜಗತ್ಕೃತ್ವಾ ಗರ್ಭಸ್ಥಮಾತ್ಮನಃ ।
ಮುಮೋಚಾಂಡಂ ಮಹಾಯೋಗೀ ಧೃತಂ ವರ್ಷಸಹಸ್ರಕಂ ॥೪೩॥

ಸುರಾಸುರದ್ವಿಜಭುಜಗಾಪ್ಸರೋಗಣೈ
ದ್ರುಮೌಷಧಿಕ್ಷಿತಿಧರಯಕ್ಷಗುಹ್ಯಕೈಃ ।
ಪ್ರಜಾಪತಿಃ ಶ್ರುತಿಭಿರಸಂಕುಲಂ ತದಾ ।
ಸ ವೈ ಸೃಜಜ್ಜಗದಿದಮಾತ್ಮನಾ ಪ್ರಭುಃ ॥೪೪॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ವರಾಹಪ್ರಾದುರ್ಭಾವೇ
ಸಪ್ತಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಃ

---

೪೧-೪೨. ಯಾವುದನ್ನು ಇವನು ಪ್ರಕಟಿಸುವುದಿಲ್ಲವೋ ಅದನ್ನು ಕಂಡು ಹಿಡಿಯಲು ಯಾವನು ಯತ್ನಿಸಬಲ್ಲನು? ಇವನೇ ಸಕಲ ಜಂತುಗಳನ್ನೂ ಪ್ರೇರಿಸುವನು; ಅಗ್ನಿವಾಯುಗಳಿಗೆ ವೇಗವನ್ನು ಕೊಡುವನು; ತೇಜಸ್ಸು, ತಪಸ್ಸು, ಅಮೃತ ಇವುಗಳಿಗೆ ಆಶ್ರಯನಾಗಿರುವನು; ಬ್ರಹ್ಮಚರ್ಯಾದ್ಯಾಶ್ರಮಧರ್ಮಗಳನ್ನು ರಕ್ಷಿಸುವನು. ಯಜ್ಞಯಾಗಾದಿ ಕರ್ಮಗಳ ಫಲವನ್ನು ಸ್ವೀಕರಿಸುವನು.

೪೩. ಯೋಗೀಶ್ವರನೆನಿಸಿದ ಈ ಭಗವಂತನು ನಾಲ್ಕು ಸಾಗರಗಳ ವರೆಗೂ ವ್ಯಾಪಿಸಿರುವನು. ನಾಲ್ಕು ಯುಗಗಳನ್ನೂ ನಡೆಸುವನು. ಪ್ರಳಯಬಂದಾಗ ಜಗತ್ತೆಲ್ಲವನ್ನೂ ಸಂಹರಿಸಿ ತನ್ನ ಗರ್ಭದಲ್ಲಿ ಇರಿಸಿಕೊಳ್ಳುವನು. ಸಾವಿರ ಯುಗಗಳಾದ ಬಳಿಕ ತಾನು ಧರಿಸಿದ್ದ ಜಗದ್ರೂಪವಾದ ಅಂಡವನ್ನು ಹೊರಕ್ಕೆ ಬಿಡುವನು.

೪೪. ಸರ್ವಸ್ವತಂತ್ರನಾದ ಭಗವಂತನು ವೇದಗಳನ್ನು ಮಾತ್ರವೇ ಅಲ್ಲ. ಸುರರು, ಅಸುರರು, ದ್ವಿಜರು, ನಾಗರು, ಅಪ್ಸರಸ್ತ್ರೀಯರು, ವೃಕ್ಷಗಳು, ಔಷಧಿಗಳು, ಪರ್ವತಗಳು, ಯಕ್ಷರು, ಗುಹ್ಯಕರು ಇವರಿಂದ ತುಂಬಿದ ಈ ಜಗತ್ತನ್ನು ಸ್ವಸಂಕಲ್ಪಮಾತ್ರದಿಂದಲೇ ಸೃಷ್ಟಿಸಿದನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ವರಾಹಾವತಾರದ ವೃತ್ತಾಂತವು ಪ್ರಾರಂಭವಾಗುತ್ತದೆ.

ಚತುರ್ಯುಗಗಳು ಸಾವಿರಸಾರಿ ಕಳೆದರೆ ಬ್ರಹ್ಮದೇವನಿಗೆ ಒಂದು ಹಗಲಾಗುತ್ತದೆ. ಅದು ಮುಗಿದ ಮೇಲೆ ಪ್ರಳಯವಾಗುವುದು. ಕಾಲಾಗ್ನಿ ಜಗತ್ತನ್ನೆಲ್ಲ ವ್ಯಾಪಿಸಿ ಸುಡುವುದು. ಚರಾಚರವಸ್ತುಗಳೆಲ್ಲವನ್ನೂ ಭಗವಂತನು ತನ್ನಲ್ಲಿ ಅಡಗಿಸಿಕೊಂಡು ಏಕಾಕಿಯಾಗಿ ಯೋಗನಿದ್ರೆಯನ್ನು ಮಾಡುವನು. ಸಾವಿರ ಯುಗಗಳು ಹೀಗೆ ಕಳೆಯುವುವು. ಬಳಿಕ ಆ ಆದಿದೇವನು ಎಚ್ಚತ್ತು ಮತ್ತೆ ಜಗತ್ತನ್ನು ಸೃಷ್ಟಿಸಬೇಕೆಂದು ಯೋಚಿಸುವನು. ಅವನ ಸಂಕಲ್ಪಮಾತ್ರದಿಂದ ಜಗದ್ರೂಪವಾದ ಅಂಡವು ಉತ್ಪನ್ನವಾಗುವುದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ವರಾಹಪ್ರಾದುರ್ಭಾವವೆಂಬ
ಇನ್ನೂರ ನಲವತ್ತೇಳನೆಯ ಅಧ್ಯಾಯವು ಮುಗಿದುದು

---

## ಅಥಾಷ್ಟಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಃ

|| ಶೌನಕ ಉವಾಚ ||

ಜಗದಂಡಮಿದಂ ಪೂರ್ವಮಾಸೀದ್ದಿವ್ಯಂ ಹಿರಣ್ಮಯಂ |
ಪ್ರಜಾಪತೇರಿಯಂ ಮೂರ್ತಿರಿತೀಯಂ ವೈದಿಕೀ ಶ್ರುತಿಃ || ೧ ||

ತತ್ತು ವರ್ಷಸಹಸ್ರಾಂತೇ ಬಿಭೇದೋರ್ಧ್ವಮುಖಂ ವಿಭುಃ |
ಲೋಕಸರ್ಜನಹೇತೋಸ್ತು ಬಿಭೇದಾಧೋಮುಖಂ ಪುನಃ || ೨ ||

ಭೂಯೋಽಷ್ಟಧಾ ಬಿಭೇದಾಂಡಂ ವಿಷ್ಣುರ್ವೈ ಲೋಕಜನ್ಮಕೃತ್ |
ಚಕಾರ ಜಗತಶ್ಚಾತ್ರ ವಿಭಾಗಂ ಸ ವಿಭಾಗಕೃತ್ || ೩ ||

ಯಚ್ಛಿದ್ರಮೂರ್ಧ್ವಮಾಕಾಶಂ ವಿವರಾಕೃತಿತಾಂ ಗತಂ |
ವಿಹಿತಂ ವಿಶ್ವಯೋಗೇನ ಯದಧಸ್ತಾದ್ರಸಾತಲಂ || ೪ ||

---

೧. ಶೌನಕಮುನಿ ಹೇಳಿದನು.—ಜಗದ್ರೂಪವಾದ ಈ ಅಂಡವು ಸುವರ್ಣಮಯವಾಗಿತ್ತೆಂದೂ, ಪರಮಾತ್ಮನಿಗೆ ಇದು ಶರೀರಭೂತವಾಗಿತ್ತೆಂದೂ ವೇದವಾಕ್ಯವು ಹೇಳುವುದು.

೨. ಸಾವಿರ ವರ್ಷಗಳ ತರುವಾಯ ನಾರಾಯಣನು ಅದನ್ನು ಮೇಲ್ಗಡೆಯಲ್ಲಿ ಭೇದಿಸಿದನು. ಲೋಕಗಳ ಸೃಷ್ಟಿಗಾಗಿ ಮತ್ತೆ ಅದನ್ನು ಕೆಳಭಾಗದಲ್ಲಿ ಒಡೆದನು.

೩. ಲೋಕಕರ್ತನಾದ ವಿಷ್ಣು ಆ ಅಂಡವನ್ನು ಮತ್ತೆ ಎಂಟು ಭಾಗವಾಡಿ ಅದರಲ್ಲಿ ಜಗತ್ತುಗಳನ್ನು ವಿಭಾಗಿಸಿದನು.

೪. ಸಕಲೋಪಾಯ ನಿಪುಣನಾದ ಭಗವಂತನು ಮೇಲ್ಗಡೆಯಲ್ಲಿ ಬಿಲದ ಆಕಾರವಾಗಿದ್ದ ರಂಧ್ರವನ್ನು ಆಕಾಶವನ್ನಾಗಿಯೂ, ಕೆಳಗಡೆಯಿದ್ದುದನ್ನು ಪಾತಾಳವನ್ನಾಗಿಯೂ ಮಾಡಿದನು.

ಯದಂಡಮಕರೋತ್ಪೂರ್ವಂ ದೇವೋ ಲೋಕಚಿಕೀರ್ಷಯಾ ।
ತತ್ರ ಯತ್ಸಲಿಲಂ ಸ್ಕನ್ನಂ ಸೋಽಭವತ್ಕಾಂಚನೋ ಗಿರಿಃ ॥ ೫ ॥

ಶೈಲೈಃ ಸಹಸ್ರೈರ್ಮಹತೀ ಮೇದಿನೀ ವಿಷಮಾಽಭವತ್ ॥ ೬ ॥

ತೈಶ್ಚ ಪರ್ವತಜಾಲೌಘೈರ್ಬಹುಯೋಜನವಿಸ್ತೃತೈಃ ।
ಪೀಡಿತಾ ಗುರುಭಿರ್ದೇವೀ ವ್ಯಥಿತಾ ಮೇದಿನೀ ತದಾ ॥ ೭ ॥

ಮಹಾಮತೇ ಭೂರಿಬಲಂ ದಿವ್ಯಂ ನಾರಾಯಣಾತ್ಮಕಂ ।
ಹಿರಣ್ಮಯಂ ಸಮುತ್ಸೃಷ್ಟಂ ತೇಜೋ ವೈ ಜಾತರೂಪಿಣಂ ॥ ೮ ॥

ಅಶಕ್ತಾ ವೈ ಧಾರಯಿತುಮಧಸ್ತಾತ್ಪ್ರವಿಶತ್ತದಾ ।
ಪೀಡ್ಯಮಾನಾ ಭಗವತಸ್ತೇಜಸಾ ತಸ್ಯ ಸಾ ಕ್ಷಿತಿಃ ॥ ೯ ॥

ಪೃಥ್ವೀಂ ವಿಶಂತೀಂ ದೃಷ್ಟ್ವಾ ತು ತಾಮಧೋ ಮಧುಸೂದನಃ ।
ಉದ್ಧಾರಾರ್ಥಂ ಮನಶ್ಚಕ್ರೇ ತಸ್ಯಾ ವೈ ಹಿತಕಾಮ್ಯಯಾ ॥೧೦॥

---

೫-೬. ಲೋಕಗಳನ್ನು ಸೃಷ್ಟಿಸಬೇಕೆಂದು ಆದಿದೇವನು ಮೊದಲು ಅಂಡವನ್ನು ನಿರ್ಮಿಸಿದನಷ್ಟೆ! ಅದರಲ್ಲಿ ಸೋರಿದ ನೀರೇ ಸುವರ್ಣಮಯವಾದ ಮೇರುಪರ್ವತವಾಯಿತು. ವಿಸ್ತಾರವಾದ ಭೂಮಿಯು ಸಾವಿರಾರು ಪರ್ವತಗಳಿಂದ ಹಳ್ಳತಿಟ್ಟಾಯಿತು.

೭. ಅನೇಕಯೋಜನವಿಸ್ತಾರವಾದ ಆ ದೊಡ್ಡದೊಡ್ಡ ಪರ್ವತಗಳ ಭಾರದಿಂದ ಭೂದೇವಿಯು ಆಯಾಸಗೊಂಡು ವ್ಯಥೆಪಟ್ಟಳು.

೮-೯. ಬಹು ಪ್ರಾಜ್ಞನಾದ ಎಲೈ ಅರ್ಜುನನೇ, ಅಪರಿಮಿತಶಕ್ತಿಯಿಂದ ಕೂಡಿದ್ದ ಸುವರ್ಣ ರೂಪವಾದ ಆ ನಾರಾಯಣನ ತೇಜಸ್ಸನ್ನು ಭೂದೇವಿಯು ಹೊರಲಾರದೆ, ಪೀಡಿತಳಾಗಿ ಕೆಳಕ್ಕೆ ಕುಗ್ಗಿಹೋದಳು.

೧೦. ಭೂಮಿಯು ಕೆಳಕ್ಕಿಳಿಯುತ್ತಿರುವುದನ್ನು ಕಂಡು, ಮಹಾವಿಷ್ಣು ಅವಳ ಹಿತವನ್ನು ಬಯಸಿ, ಅವಳನ್ನು ಮೇಲಕ್ಕೆತ್ತಬೇಕೆಂದು ನಿಶ್ಚಯಿಸಿದನು.

|| ಭಗವಾನುವಾಚ ||

ಮತ್ತೇಜ ಏಷಾ ವಸುಧಾ ಸಮಾಸಾದ್ಯ ತಪಸ್ವಿನೀ ।
ರಸಾತಲಂ ಪ್ರವಿಶತಿ ಪಂಕೇ ಗೌರಿವ ದುರ್ಬಲಾ ||೧೧||

|| ಪೃಥಿವ್ಯುವಾಚ ||

ತ್ರಿವಿಕ್ರಮಾಯಾಮಿತವಿಕ್ರಮಾಯ
ಮಹಾವರಾಹಾಯ ಸುರೋತ್ತಮಾಯ ।
ಶ್ರೀಶಾರ್ಙ್ಗಚಕ್ರಾಸಿಗದಾಧರಾಯ
ನಮೋಽಸ್ತು ತೇ ದೇವವರ ಪ್ರಸೀದ ||೧೨||

ತವ ದೇಹಾಜ್ಜಗಜ್ಜಾತಂ ಪುಷ್ಕರದ್ವೀಪಮುತ್ಥಿತಂ ।
ಬ್ರಹ್ಮಾಣಮಿಹ ಲೋಕಾನಾಂ ಭೂತಾನಾಂ ಶಾಶ್ವತಂ ವಿದುಃ ||೧೩||

ತವ ಪ್ರಸಾದಾದ್ದೇವೋಽಯಂ ದಿವಂ ಭುಙ್ಕ್ತೇ ಪುರಂದರಃ ।
ತವ ಕ್ರೋಧಾದ್ಧಿ ಬಲವಾಞ್ಜನಾರ್ದನ ಜಿತೋ ಬಲಿಃ ||೧೪||

---

೧೧. ಭಗವಂತನು ಹೇಳಿದನು.—ಅಸಹಾಯಳಾದ ಈ ಭೂಮಿ ದೇವಿಯು ನನ್ನ ತೇಜಸ್ಸನ್ನು ತಡೆಯಲಾರದೆ, ಕೆಸರಿನಲ್ಲಿ ಸಿಕ್ಕಿಕೊಂಡ ಶಕ್ತಿಯಿಲ್ಲದ ಹಸುವಿನಂತೆ ಪಾತಾಳಕ್ಕಿಳಿಯುತ್ತಿದ್ದಾಳೆ.

೧೨. ಭೂದೇವಿ ಹೇಳಿದಳು.—ಅಸದೃಶಪರಾಕ್ರಮಿಯೂ, ತ್ರಿವಿಕ್ರಮರೂಪಧಾರಿಯೂ, ಸುರೋತ್ತಮನೂ, ಚಕ್ರಖಡ್ಗಗದಾಶಾರ್ಙ್ಗಧರನೂ, ಮಹಾವರಾಹರೂಪನೂ ಆದವನಿಗೆ ನಮಸ್ಕಾರ. ದೇವೋತ್ತಮಾ, ಪ್ರಸನ್ನನಾಗು.

೧೩. ದೇವಾ, ನಿನ್ನ ದೇಹದಿಂದ ಲೋಕವು ಜನಿಸಿತು; ಪುಷ್ಕರದ್ವೀಪವು ಉತ್ಪನ್ನವಾಯಿತು. ಎಲ್ಲ ಲೋಕಗಳಲ್ಲೂ ಪ್ರಾಣಿಗಳಲ್ಲೂ ನೀನೇ ಬಹು ದೊಡ್ಡವನೆಂದೂ ಶಾಶ್ವತನೆಂದೂ ಜ್ಞಾನಿಗಳು ತಿಳಿಯುತ್ತಾರೆ.

೧೪. ಓ ಜನಾರ್ದನಾ, ನಿನ್ನ ಅನುಗ್ರಹದಿಂದ ಈ ಇಂದ್ರನು ಸ್ವರ್ಗಲೋಕವನ್ನಾಳುತ್ತಾನೆ. ನಿನ್ನ ಕೋಪಕ್ಕೆ ಗುರಿಯಾಗಿ ಬಲಶಾಲಿಯಾದ ಬಲಿ ಚಕ್ರವರ್ತಿ ಪರಾಜಿತನಾದನು.

ಧಾತಾ ವಿಧಾತಾ ಸಂಹರ್ತಾ ತ್ವಯಿ ಸರ್ವಂ ಪ್ರತಿಷ್ಠಿತಂ ।
ಮನುಃ ಕೃತಾಂತೋಽಧಿಪತಿರ್ಜ್ವಲನಃ ಪವನೋ ಘನಃ ||೧೫||

ವರ್ಣಾಶ್ರಮಧರ್ಮಾಶ್ಚ ಸಾಗರಾಸ್ತರವೋಽಚಲಾಃ ।
ನದ್ಯೋ ಧರ್ಮಶ್ಚ ಕಾಮಶ್ಚ ಯಜ್ಞಾ ಯಜ್ಞಸ್ಯ ಚ ಕ್ರಿಯಾಃ ||೧೬||

ವಿದ್ಯಾ ವೇದ್ಯಂ ಚ ಸತ್ತ್ವಂ ಚ ಹ್ರೀಃ ಶ್ರೀಃ ಕೀರ್ತಿರ್ಧೃತಿಃ ಕ್ಷಮಾ ।
ಪುರಾಣಂ ವೇದವೇದಾಂಗಂ ಸಾಂಖ್ಯಯೋಗೌ ಭವಾಭವೌ ||೧೭||

ಜಂಗಮಂ ಸ್ಥಾವರಂ ಚೈವ ಭವಿಷ್ಯಂ ಚ ಭವಚ್ಚ ಯತ್ ।
ಸರ್ವಂ ತಚ್ಚ ತ್ರಿಲೋಕೇಷು ಪ್ರಭಾವೋಪಹಿತಂ ತವ ||೧೮||

ತ್ರಿದಶೋದಾರಫಲದಃ ಸ್ವರ್ಗಸ್ತ್ರೀಚಾರುಪಲ್ಲವಃ
ಸರ್ವಲೋಕಮನಃಕಾಂತಃ ಸರ್ವಸತ್ತ್ವಮನೋಹರಃ ||೧೯||

---

೧೫. ದೇವಾ, ಆದಿಸೃಷ್ಟಿಯನ್ನೂ ಪ್ರತಿಸೃಷ್ಟಿಯನ್ನೂ ಮಾಡುವವನು ನೀನೆ. ಸಂಹಾರಕನೂ ನೀನೇ. ಎಲ್ಲವೂ ನಿನ್ನಲ್ಲಿ ನೆಲಸಿದೆ. ಮನು, ಯಮ, ವರುಣ, ಅಗ್ನಿ, ವಾಯು, ಮೇಘ ಎಲ್ಲವೂ ನೀನೆ.

೧೬. ವರ್ಣಾಶ್ರಮಧರ್ಮಗಳು, ಸಾಗರಗಳು, ಮರಗಳು, ಬೆಟ್ಟಗಳು, ನದಿಗಳು, ಧರ್ಮ, ಕಾಮ, ಯಜ್ಞಗಳು, ಯಜ್ಞಕ್ರಿಯೆಗಳು ಎಲ್ಲವೂ ನೀನೆ.

೧೭. ತಿಳಿವಳಿಕೆ, ತಿಳಿಯಲ್ಪಡಬೇಕಾದ ವಸ್ತು, ಶಕ್ತಿ, ಲಜ್ಜೆ, ಸಂಪತ್ತು, ಕೀರ್ತಿ, ಧೈರ್ಯ, ತಾಳ್ಮೆ, ಪುರಾಣ, ವೇದ, ವೇದಾಂಗ, ಸಾಂಖ್ಯ, ಯೋಗ, ಸಂಸಾರ, ಮೋಕ್ಷ—ಇವೂ ಸಹ ನೀನೇ.

೧೮. ಚಲಿಸತಕ್ಕುದು, ಸ್ಥಿರವಾಗಿರತಕ್ಕುದು, ಮುಂದೆ ಬರಲಿರುವುದು, ಹಿಂದೆ ಇದ್ದುದು, ಅಷ್ಟೇ ಅಲ್ಲ; ಮೂರುಲೋಕಗಳಲ್ಲಿರತಕ್ಕುದೆಲ್ಲವೂ ನಿನ್ನ ತೇಜಸ್ಸಿನಲ್ಲಿ ಅಡಗಿಕೊಂಡಿದೆ.

೧೯–೨೧. ದೇವಾ, ನೀನು ಸರ್ವಲೋಕಮಯವಾದ ಮಹಾವೃಕ್ಷ. ಇದು ದೇವತೆಗಳಿಗೆ ಶ್ರೇಷ್ಠವಾದ ಫಲವನ್ನು ಕೊಡುವುದು. ಸ್ವರ್ಗಸ್ತ್ರೀಯರೇ ಇದರ

ವಿಮಾನಾನೇಕವಿಟಪಸ್ತೋಯದಾಂಬುಮಧುಸ್ರವಃ ।
ದಿವ್ಯಲೋಕಮಹಾಸ್ಕಂಧಃ ಸತ್ಯಲೋಕಪ್ರಶಾಖವಾನ್ ॥೨೦॥

ಸಾಗರಾಕಾರನಿರ್ಯಾಸೋ ರಸಾತಲಜಲಾಶ್ರಯಃ ।
ನಾಗೇಂದ್ರಪಾದಪೋಪೇತೋ ಜಂತುಪಕ್ಷಿನಿಷೇವಿತಃ ॥೨೧॥

ಶೀಲಾಚಾರಾರ್ಯಗಂಧಸ್ತ್ವಂ ಸರ್ವಲೋಕಮಯೋ ದ್ರುಮಃ ।
ದ್ವಾದಶಾರ್ಕಮಯದ್ವೀಪೋ ರುದ್ರೈಕಾದಶಪತ್ತನಃ ॥೨೨॥

ವಸ್ವಷ್ಟಾಚಲಸಂಯುಕ್ತಸ್ತ್ರೈಲೋಕ್ಯಾಂಭೋ ಮಹೋದಧಿಃ ।
ಸಿದ್ಧಸಾಧ್ಯೋರ್ಮಿಕಲಿಲಃ ಸುಪರ್ಣಾನಿಲಸೇವಿತಃ ॥೨೩॥

ದೈತ್ಯಲೋಕಮಹಾಗ್ರಾಹೋ ರಕ್ಷೋರಗಝಷಾಕುಲಃ ।
ಪಿತಾಮಹಮಹಾಧೈರ್ಯಃ ಸ್ವರ್ಗಸ್ತ್ರೀರತ್ನಭೂಷಿತಃ ॥೨೪॥

---

ಸುಂದರವಾದ ಚಿಗರು. ಇದು ಸಕಲಲೋಕಗಳ ಮನಸ್ಸಿಗೆ ಪ್ರಿಯವೂ ಸಕಲ ಪ್ರಾಣಿಗಳಿಗೆ ಮನೋಹರವೂ ಆಗಿರುವುದು. ವಿಮಾನಗಳೇ ಈ ಹೆಮ್ಮರದ ಒತ್ತೊತ್ತಾಗಿ ಸೇರಿಕೊಂಡ ರೆಂಬೆಗಳ ಪೊದೆ. ಮೇಘೋದಕವೇ ಮಧುರಸ. ದಿವ್ಯ ಲೋಕವು ಇದರ ನಡುಬೊಡ್ಡೆ. ಸತ್ಯಲೋಕವು ಉದ್ದವಾದ ಕೊಂಬೆ. ಸಾಗರಗಳು ಇದರ ರಸ. ಪಾತಾಲಲೋಕವು ಪಾತೆ. ಆದಿಶೇಷನು ತಾಯಿಬೇರು. ಬಗೆ ಬಗೆಯ ಜೀವರಾಶಿಗಳೇ ಇಲ್ಲಿ ವಾಸಿಸುತ್ತಿರುವ ಪಕ್ಷಿಗಳು. ಒಳ್ಳೆಯ ನಡತೆ, ಆಚಾರ ಇವೇ ಪರಿಮಳ.

೨೨–೨೩. ಪ್ರಭೂ, ನೀನು ದ್ವಾದಶಾದಿತ್ಯರೆಂಬ ದ್ವೀಪಗಳೂ, ಏಕಾದಶ ರುದ್ರರೆಂಬ ಪಟ್ಟಣಗಳೂ, ಅಷ್ಟವಸುಗಳೆಂಬ ಪರ್ವತಗಳೂ, ಮೂರು ಲೋಕ ಗಳೆಂಬ ಜಲವೂ, ಸಿದ್ಧಸಾಧ್ಯರೆಂಬ ಅಲೆಗಳೂ, ಗರುಡನ ಪಕ್ಷವಾತವೆಂಬ ಬಿರು ಗಾಳಿಯೂ ಉಳ್ಳ ಮಹಾಸಮುದ್ರವಾಗಿರುವೆ.

೨೪–೨೬. ದೈತ್ಯರ ಲೋಕಗಳೆಂಬ ದೊಡ್ಡ ಮೊಸಳೆಗಳೂ, ರಾಕ್ಷಸರೆಂಬ ಹಾವು ಮತ್ತು ಮೀನುಗಳೂ, ಬ್ರಹ್ಮನೆಂಬ ಅತಿಶಯವಾದ ಧೈರ್ಯವೂ, ಸ್ವರ್ಗ

ಧೀಶ್ರೀಹ್ರೀಕಾಂತಿಭಿರ್ನಿತ್ಯಂ ನದೀಭಿರುಪಶೋಭಿತಃ ।
ಕಾಲಯೋಗಮಹಾಪರ್ವಪ್ರಯಾಗಗತಿವೇಗವಾನ್ ॥೨೫॥

ತ್ವಂ ಸ್ವಯೋಗಮಹಾವೀರ್ಯೋ ನಾರಾಯಣ ಮಹಾರ್ಣವಃ ।
ಕಾಲೋ ಭೂತ್ವಾ ಪ್ರಸನ್ನಾಭಿರದ್ಭಿರ್ಹ್ಲಾದಯಸೇ ಪುನಃ ॥೨೬॥

ತ್ವಯಾ ಸೃಷ್ಟಾಸ್ತ್ರಯೋ ಲೋಕಾ ಸ್ತ್ವಯ್ಯೈವ ಪ್ರತಿಸಂಹೃತಾಃ ।
ವಿಶಂತಿ ಯೋಗಿನಃ ಸರ್ವೇ ತ್ವಾಮೇವ ಪ್ರತಿಯೋಜಿತಾಃ ॥೨೭॥

ಯುಗೇ ಯುಗೇ ಯುಗಾಂತಾಗ್ನಿಃ ಕಾಲಮೇಘೋ ಯುಗೇ ಯುಗೇ ।
ಮಮ ಭಾರಾವತಾರಾಯ ದೇವ ತ್ವಂ ಹಿ ಯುಗೇ ಯುಗೇ ॥೨೮॥

ತ್ವಂ ಹಿ ಶುಕ್ಲಃ ಕೃತಯುಗೇ ತ್ರೇತಾಯಾಂ ಚಂಪಕಪ್ರಭಃ ।
ದ್ವಾಪರೇ ರಕ್ತಸಂಕಾಶಃ ಕೃಷ್ಣಃ ಕಲಿಯುಗೇ ಭವಾನ್ ॥೨೯॥

---

ಸ್ತ್ರೀಯರೆಂಬ ಸುಂದರವಾದ ರತ್ನಗಳೂ ಧೀ, ಶ್ರೀ, ಹ್ರೀ ಮತ್ತು ಕಾಂತಿಗಳೆಂಬ ರಮ್ಯವಾದ ನದಿಗಳೂ, ಕಾಲಯೋಗವೆಂಬ ಪರ್ವಕಾಲವೂ, ಉತ್ಕೃಷ್ಟವಾದ ಯಾಗಕರ್ಮವೆಂಬ ವೇಗವೂ, ಯೋಗಶಕ್ತಿಯೆಂಬ ಮಹಾವೀರ್ಯವೂ ಕಂಗೊಳಿಸುತ್ತಿರಲು, ಓ ನಾರಾಯಣಾ, ನೀನು ದೊಡ್ಡ ಸಾಗರವೆನಿಸಿರುವೆ. ಕಾಲರೂಪನಾಗಿ ಮತ್ತೆ ನಿನ್ನ ಪ್ರಸಾದವೆಂಬ ನೀರಿನಿಂದ ಲೋಕವನ್ನು ಸಂತೋಷಗೊಳಿಸುವೆ.

೨೭. ಮೂರುಲೋಕಗಳನ್ನೂ ನೀನೇ ಸೃಷ್ಟಿಸಿದೆ. ನೀನೇ ಅವನನ್ನು ಸಂಹರಿಸಿದೆ ಯೋಗಿಗಳೆಲ್ಲರೂ ನಿನ್ನಿಂದ ಪ್ರೇರಿತರಾಗಿ ನಿನ್ನನ್ನೇ ಸೇರುತ್ತಾರೆ.

೨೮. ದೇವಾ, ನೀನು ಒಂದೊಂದು ಯುಗದಲ್ಲಿಯೂ ಪ್ರಳಯಾಗ್ನಿಯಾಗುವೆ ; ಒಂದೊಂದು ಯುಗದಲ್ಲಿಯೂ ಪ್ರಳಯಮೇಘವಾಗುವೆ. ಒಂದೊಂದು ಯುಗದಲ್ಲಿಯೂ ನನ್ನ ಭಾರವನ್ನು ಇಳಿಸುವುದಕ್ಕಾಗಿ ಅವತರಿಸುವೆ.

೨೯. ನೀನು ಕೃತಯುಗದಲ್ಲಿ ಬಿಳಿಯಬಣ್ಣವೂ, ತ್ರೇತೆಯಲ್ಲಿ ಸಂಪಿಗೆಹೂ ಬಣ್ಣವೂ, ದ್ವಾಪರದಲ್ಲಿ ಕೆಂಪುಬಣ್ಣವೂ, ಕಲಿಯಲ್ಲಿ ಕೃಷ್ಣವರ್ಣವೂ ಆಗುವೆ.

**ವೈವರ್ಣ್ಯಮಭಿಧತ್ಸೇ ತ್ವಂ ಪ್ರಾಪ್ತೇಷು ಯುಗಸಂಧಿಷು ।**
**ವೈವರ್ಣ್ಯಂ ಸರ್ವಧರ್ಮಾಣಾಮುತ್ಪಾದಯಸಿ ವೇದವಿತ್ ॥೩೦॥**

**ಭಾಸಿ ವಾಸಿ ಪ್ರತಪಸಿ ತ್ವಂ ಚ ಪಾಸಿ ವಿಚೇಷ್ಟಸೇ ।**
**ಕ್ರುಧ್ಯಸಿ ಕ್ಷಾಂತಿಮಾಯಾಸಿ ತ್ವಂ ದೀಪಯಸಿ ವರ್ಷಸಿ ॥೩೧॥**

**ತ್ವಂ ಹಾಸ್ಯಸಿ ನ ನಿರ್ಯಾಸಿ ನಿರ್ವಾಪಯಸಿ ಜಾಗ್ರಸಿ ।**
**ನಿಃಶೇಷಯಸಿ ಭೂತಾನಿ ಕಾಲೋ ಭೂತ್ವಾ ಯುಗಕ್ಷಯೇ ॥೩೨॥**

**ಶೇಷಮಾತ್ಮಾನಮಾಲೋಕ್ಯ ವಿಶೇಷಯಸಿ ತ್ವಂ ಪುನಃ ।**
**ಯುಗಾಂತಾಗ್ನ್ಯವಲೀಢೇಷು ಸರ್ವಭೂತೇಷು ಕಿಂಚನ ॥೩೩॥**

---

೩೦. ಯುಗಗಳ ಸಂಧಿಕಾಲಗಳಲ್ಲಿ ನೀನು ಮಿಶ್ರವರ್ಣವನ್ನು ತಾಳುವೆ. ವೇದನಿಧಿಯಾದ ನೀನು ನಿನ್ನ ಸಂಕಲ್ಪದಿಂದಲೇ ಸಕಲ ಧರ್ಮಗಳಿಗೂ ಮಾಲಿನ್ಯವನ್ನುಂಟುಮಾಡುವೆ.

೩೧. ದೇವಾ, ನೀನು ಬೆಳಗುತ್ತೀಯೆ, ಬೀಸುತ್ತೀಯೆ, ತೇಜಸ್ಸಿನಿಂದ ಉರಿಯುತ್ತೀಯೆ, ಸಲಹುತ್ತೀಯೆ, ವಿಧವಿಧವಾದ ವ್ಯಾಪಾರಗಳನ್ನು ನಡೆಸುತ್ತೀಯೆ, ಕೋಪಿಸಿಕೊಳ್ಳುತ್ತೀಯೆ, ತಾಳ್ಮೆ ಹೊಂದುತ್ತೀಯೆ, ಪ್ರಕಾಶಗೊಳಿಸುತ್ತೀಯೆ, ಮಳೆಗರೆಯುತ್ತೀಯೆ.

೩೨. ಪ್ರಭೂ, ಪ್ರಳಯ ಬಂದಾಗ ನೀನು ಕಾಲರೂಪನಾಗಿ ಜಗತ್ತನ್ನು ಅಳಿಸುತ್ತೀಯೆ ; ಆದರೆ ನೀನು ಅಳಿಯದೆ ಸ್ಥಿರವಾಗಿರುವೆ. ಜೀವರಾಶಿಗಳ ಜೀವಜ್ಯೋತಿಯನ್ನು ನಂದಿಸುತ್ತೀಯೆ ; ನೀನು ಮಾತ್ರ ಎಚ್ಚರವಾಗಿಯೇ ಇದ್ದು ಪ್ರಾಣಿಗಳನ್ನು ಒಂದೂ ಉಳಿಯದಂತೆ ಸಂಹರಿಸುತ್ತೀಯೆ.

೩೩ ಸಕಲ ಭೂತಗಳೂ ವಿಲಯಾಗ್ನಿಗೆ ಸಿಕ್ಕಿ ಭಸ್ಮವಾದಾಗ ನೀನೊಬ್ಬನೇ ಉಳಿದುಕೊಂಡು ವಿನೋದಿಸುವೆ. ಕೊನೆಗೆ ಉಳಿಯುವವನು ನೀನೊಬ್ಬನೇ. ಆದ್ದರಿಂದ ನಿನಗೆ ಶೇಷನೆಂಬ ಹೆಸರು ಬಂದಿವೆ.

**ಯಾತೇಷು ಶೇಷೋ ಭವಸಿ ತಸ್ಮಾಚ್ಛೇಷೋಽಸಿ ಕೀರ್ತಿತಃ ।**
**ಚ್ಯವನೋತ್ಪತ್ತಿಯುಕ್ತೇಷು ಬ್ರಹ್ಮೇಂದ್ರವರುಣಾದಿಷು ॥೩೪॥**

**ಯಸ್ಮಾನ್ನ ಚ್ಯವಸೇ ಸ್ಥಾನಾತ್ತಸ್ಮಾತ್ಸಂಕೀರ್ತ್ಯಸೇಽಚ್ಯುತಃ ।**
**ಬ್ರಹ್ಮಾಣಮಿಂದ್ರಂ ಚ ಯಮಂ ರುದ್ರಂ ವರುಣಮೇವ ಚ ॥೩೫॥**

**ನಿಗೃಹ್ಯ ಹರಸೇ ಯಸ್ಮಾತ್ತಸ್ಮಾದ್ಧರಿರಿಹೋಚ್ಯಸೇ ।**
**ಸಂತಾನಯಸಿ ಭೂತಾನಿ ವಪುಷಾ ಯಶಸಾ ಶ್ರಿಯಾ ॥೩೬॥**

**ಪರೇಣ ವಪುಷಾ ದೇವ ತಸ್ಮಾಚ್ಚಾಸಿ ಸನಾತನಃ ।**
**ಯಸ್ಮಾದ್ಬ್ರಹ್ಮಾದಯೋ ದೇವಾ ಮುನಯಶ್ಚೋಗ್ರತೇಜಸಃ ॥೩೭॥**

**ನ ತೇಽಂತಂ ತ್ವಧಿಗಚ್ಛಂತಿ ತೇನಾನಂತಸ್ತ್ವಮುಚ್ಯಸೇ ।**
**ನ ಕ್ಷೀಯಸೇ ನ ಕ್ಷರಸೇ ಕಲ್ಪಕೋಟಿಶತೈರಪಿ ॥೩೮॥**

---

೩೪. ಬ್ರಹ್ಮ, ಇಂದ್ರ, ವರುಣ ಮುಂತಾದವರಿಗೆ ಸ್ಥಾನಭ್ರಂಶವೂ ಉತ್ಪತ್ತಿ ನಾಶಗಳೂ ಉಂಟು. ನೀನು ನಿನ್ನ ಸ್ಥಾನದಿಂದ ಕದಲದಿರುವ ಕಾರಣ ನಿನ್ನನ್ನು ಅಚ್ಯುತನೆಂದು ಹೇಳುತ್ತಾರೆ.

೩೫. ಬ್ರಹ್ಮ, ಇಂದ್ರ, ಯಮ, ರುದ್ರ, ವರುಣ ಮುಂತಾದವರನ್ನು ನಿಗ್ರಹಿಸಿ ನಿನ್ನ ವಶದಲ್ಲಿ ಇಟ್ಟುಕೊಂಡಿರುವ ಕಾರಣ ನಿನ್ನನ್ನು ಹರಿಯೆಂದು ಕರೆಯುತ್ತಾರೆ.

೩೬. ಜೀವರಾಶಿಗಳಿಗೆ ಕರ್ಮಾನುಭವಸಮರ್ಥವಾದ ಶರೀರವನ್ನೂ, ಯಶಸ್ಸನ್ನೂ, ಸಂಪತ್ತನ್ನೂ ಕೊನೆಗೆ ಅಪ್ರಾಕೃತಮಂಗಳ ದೇಹವನ್ನೂ ಅತಿಶಯವಾಗಿ ಕರುಣಿಸುತ್ತೀಯೆ. ಆದುದರಿಂದ ನೀನು ಸನಾತನನೆನಿಸಿಕೊಂಡಿರುವೆ.

೩೭. ಬ್ರಹ್ಮಾದಿ ದೇವತೆಗಳೂ ಉಗ್ರತೇಜಸ್ವಿಗಳಾದ ಮುನಿಗಳೂ ನಿನ್ನ ಮಹಿಮೆಯ ಪರಿಮಾಣವನ್ನು ತಿಳಿಯಲಾರರಾದ ಕಾರಣ ನೀನು ಅನಂತನೆನಿಸಿಕೊಳ್ಳುವೆ.

೩೮. ನೂರಾರು ಕಲ್ಪಕೋಟಿಗಳು ಕಳೆದರೂ ನೀನು ಕ್ಷಯಿಸುವುದಿಲ್ಲ; ವಿನಾಶಹೊಂದುವುದಿಲ್ಲ. ಆದುದರಿಂದಲೂ ಸ್ಥಿರನಾಗಿರುವುದರಿಂದಲೂ ಅಕ್ಷರನೆಂದು ಪ್ರಖ್ಯಾತನಾಗಿರುವೆ.

ತಸ್ಮಾತ್ತ್ವಮುಕ್ಷರತ್ವಾಚ್ಚ ಅಕ್ಷರಶ್ಚ ಪ್ರಕೀರ್ತಿತಃ ।
ವಿಷ್ಟಬ್ಧಂ ಯತ್ತ್ವಯಾ ಸರ್ವಂ ಜಗತ್ಸ್ಥಾವರಜಂಗಮಂ ॥೩೯॥

ಜಗದ್ವಿಷ್ಟಂಭನಾಚ್ಚೈವ ವಿಷ್ಣುರೇವೇತಿ ಕೀರ್ತ್ಯಸೇ ।
ವಿಷ್ಟಭ್ಯ ತಿಷ್ಠಸೇ ನಿತ್ಯಂ ತ್ರೈಲೋಕ್ಯಂ ಸಚರಾಚರಂ ॥೪೦॥

ಯಕ್ಷಗಂಧರ್ವನಗರಂ ಸುಮಹದ್ಭೂತಪನ್ನಗಂ ।
ವ್ಯಾಪ್ತಂ ತ್ವಯೈವ ವಿಶತಾ ತ್ರೈಲೋಕ್ಯಂ ಸಚರಾಚರಂ ॥೪೧॥

ತಸ್ಮಾದ್ವಿಷ್ಣುರಿತಿ ಪ್ರೋಕ್ತಃ ಸ್ವಯಮೇವ ಸ್ವಯಂಭುವಾ ।
ನಾರಾ ಇತ್ಯುಚ್ಯತೇ ಹ್ಯಾಪೋ ಹ್ಯೃಷಿಭಿಸ್ತತ್ವದರ್ಶಿಭಿಃ ॥೪೨॥

ಅಯನಂ ತಸ್ಯ ತಾಃ ಪೂರ್ವಂ ತೇನ ನಾರಾಯಣಃ ಸ್ಮೃತಃ ।
ಯುಗೇ ಯುಗೇ ಪ್ರನಷ್ಟಾಂ ಗಾಂ ವಿಷ್ಣೋ ವಿಂದಸಿ ತತ್ವತಃ ॥೪೩॥

---

೩೯. ಸ್ಥಾವರಜಂಗಮರೂಪವಾದ ಜಗತ್ತೆಲ್ಲವನ್ನೂ ನಿನ್ನಲ್ಲಿ ಸ್ಥಿರವಾಗಿ ಅಡಗಿಸಿಕೊಂಡಿರುವೆ. ಪ್ರಪಂಚವನ್ನು ಹೀಗೆ ಸ್ಥಿರಗೊಳಿಸಿರುವ ಕಾರಣದಿಂದ ವಿಷ್ಣುವೆಂದೇ ಪ್ರಸಿದ್ಧನಾಗಿರುವೆ.

೪೦-೪೧. ಚರಾಚರಸಹಿತವಾದ ಮೂರು ಲೋಕವನ್ನೂ ವ್ಯಾಪಿಸಿ ಸ್ಥಿರವಾಗಿರುವೆ. ಯಕ್ಷರ ಮತ್ತು ಗಂಧರ್ವರ ಲೋಕಗಳನ್ನೂ ದೊಡ್ಡದೊಡ್ಡ ಪ್ರಾಣಿಗಳನ್ನೂ, ಸರ್ಪಗಳನ್ನೂ, ಪ್ರವೇಶಿಸಿರುವೆ. ಸ್ಥಾವರ ಜಂಗಮರೂಪವಾದ ಮೂರುಲೋಕಗಳನ್ನೂ ಒಳಹೊಕ್ಕು ವ್ಯಾಪಿಸಿಕೊಂಡಿರುವೆ. ಆವಕಾರಣ ನಿನ್ನನ್ನು ವಿಷ್ಣುವೆಂದು ಬ್ರಹ್ಮದೇವನೇ ಹೇಳಿರುವನು.

೪೨. ತತ್ವಜ್ಞರಾದ ಋಷಿಗಳು ನೀರನ್ನು ನಾರ ಎಂದು ಹೇಳುತ್ತಾರೆ. ಆದಿಕಾಲದಲ್ಲಿ ನಿನಗೆ ಅದು ವಾಸಸ್ಥಾನವಾಗಿದ್ದುದರಿಂದ ನೀನು ನಾರಾಯಣನೆನಿಸಿಕೊಂಡಿರುವೆ.

೪೩. ಎಲೈ ವಿಷ್ಣೂ, ಧರ್ಮವು ಖಿಲವಾಗಲು ಒಂದೊಂದು ಯುಗದಲ್ಲಿಯೂ ನೀನು ಅದನ್ನು ಎಂದಿನಂತೆ ನೆಲೆಗೊಳಿಸುತ್ತೀಯೆ. ಆದಕಾರಣ ಋಷಿಗಳು ನಿನಗೆ ಗೋವಿಂದನೆಂಬ ಹೆಸರನ್ನು ಕೊಟ್ಟಿರುವರು.

ಗೋವಿಂದೇತಿ ತತೋ ನಾಮ್ನಾ ಪ್ರೋಚ್ಯಸೇ ಋಷಿಭಿಸ್ತಥಾ ।
ಹೃಷೀಕಾಣೀಂದ್ರಿಯಾಣ್ಯಾಹುಸ್ತತ್ವಜ್ಞಾನವಿಶಾರದಾಃ ॥೪೪॥

ಈಶಿತಾ ಚ ತ್ವಮೇತೇಷಾಂ ಹೃಷೀಕೇಶಸ್ತಥೋಚ್ಯಸೇ ।
ವಸಂತಿ ತ್ವಯಿ ಭೂತಾನಿ ಬ್ರಹ್ಮಾದೀನಿ ಯುಗಕ್ಷಯೇ ॥೪೫॥

ತ್ವಂ ವಾ ವಸಸಿ ಭೂತೇಷು ವಾಸುದೇವಸ್ತಥೋಚ್ಯಸೇ ।
ಸಂಕರ್ಷಯಸಿ ಭೂತಾನಿ ಕಲ್ಪೇ ಕಲ್ಪೇ ಪುನಃ ಪುನಃ ॥೪೬॥

ತತಃ ಸಂಕರ್ಷಣಃ ಪ್ರೋಕ್ತಸ್ತತ್ವಜ್ಞಾನವಿಶಾರದೈಃ ।
ಪ್ರತಿವ್ಯೂಹೇನ ತಿಷ್ಠಂತಿ ಸದೇವಾಸುರರಾಕ್ಷಸಾಃ ॥೪೭॥

ಪ್ರವಿದ್ಯುಃ ಸರ್ವಧರ್ಮಾಣಾಂ ಪ್ರದ್ಯುಮ್ನಸ್ತೇನ ಚೋಚ್ಯಸೇ ।
ನಿರೋದ್ಧಾ ವಿದ್ಯತೇ ಯಸ್ಮಾನ್ನ ತೇ ಭೂತೇಷು ಕಶ್ಚನ ॥೪೮॥

---

೪೪. ತತ್ವಜ್ಞಾನ ನಿಪುಣರು ಇಂದ್ರಿಯಗಳನ್ನು ಹೃಷೀಕಗಳೆಂದು ಕರೆಯುತ್ತಾರೆ. ನೀನು ಅವುಗಳಿಗೆ ಅಧಿಪತಿಯಾದುದರಿಂದ ನಿನ್ನನ್ನು ಹೃಷೀಕೇಶನೆಂದು ಹೇಳುತ್ತಾರೆ.

೪೫. ಯುಗಾಂತದಲ್ಲಿ ಬ್ರಹ್ಮಾದಿ ಸಕಲಜಂತುಗಳು ನಿನ್ನಲ್ಲಿ ವಾಸಿಸುವುದರಿಂದಲೂ, ನೀನು ಅಂತರಾತ್ಮನಾಗಿ ಅವುಗಳಲ್ಲಿ ವಾಸಿಸುವುದರಿಂದಲೂ ನಿನ್ನನ್ನು ವಾಸುದೇವನೆಂದು ಕರೆಯುತ್ತಾರೆ.

೪೬. ಪ್ರತಿಯೊಂದು ಪ್ರಳಯದಲ್ಲೂ ಪ್ರಾಣಿಗಳನ್ನು ಮತ್ತೆ ಮತ್ತೆ ನಿನ್ನೊಳಕ್ಕೆ ಎಳೆದುಕೊಳ್ಳುತ್ತಿರುವೆ. ಆದಕಾರಣ ನಿನ್ನನ್ನು ತತ್ವಜ್ಞಾನವಿಶಾರದರು ಸಂಕರ್ಷಣನೆಂದು ಹೇಳುತ್ತಾರೆ.

೪೭. ದೇವತೆಗಳು, ಅಸುರರು ಮತ್ತು ರಾಕ್ಷಸರು ನಿನ್ನ ಒಂದೊಂದು ವ್ಯೂಹದಲ್ಲೂ ನಿಲ್ಲುವುದರಿಂದಲೂ, ನಿನ್ನಿಂದ ಸರ್ವಧರ್ಮಗಳನ್ನು ತಿಳಿಯುವುದರಿಂದಲೂ ಪ್ರದ್ಯುಮ್ನನೆಂಬ ಹೆಸರು ನಿನಗೆ ಬಂದಿದೆ.

೪೮. ಪ್ರಾಣಿಗಳಲ್ಲಿ ನಿನ್ನನ್ನು ಎದುರಿಸಬಲ್ಲುದು ಯಾವುದೂ ಇಲ್ಲವಾದಕಾರಣ ನಿನ್ನನ್ನು ಮಹರ್ಷಿಗಳು ಪೂರ್ವದಲ್ಲಿಯೇ ಅನಿರುದ್ಧನೆಂದು ಕರೆದಿರುವರು.

ಅನಿರುದ್ಧಸ್ತತಃ ಪ್ರೋಕ್ತಃ ಪೂರ್ವಮೇವ ಮಹರ್ಷಿಭಿಃ ।
ಯತ್ತ್ವಯಾ ಧಾರ್ಯತೇ ಯಸ್ಮಾನ್ನ ತೇ ಭೂತೇಷು ಕಶ್ಚನ ॥೪೯॥

ತ್ವಂ ಧಾರಯಸಿ ಭೂತಾನಿ ಭುವನಂ ತ್ವಂ ಬಿಭರ್ಷಿ ಚ ।
ಯತ್ತ್ವಯಾ ಧಾರ್ಯತೇ ಕಿಂಚಿತ್ತೇಜಸಾ ಚ ಬಲೇನ ಚ ॥೫೦॥

ಮಯಾ ಹಿ ಧಾರ್ಯತೇ ಪಶ್ಚಾನ್ನಾಧೃತಂ ಧಾರಯೇ ತ್ವಯಾ ।
ನ ಹಿ ತದ್ವಿದ್ಯತೇ ಭೂತಂ ತ್ವಯಾ ಯನ್ನಾತ್ರ ಧಾರ್ಯತೇ ॥೫೧॥

ತ್ವಮೇವ ಕುರುಷೇ ದೇವ ನಾರಾಯಣ ಯುಗೇಯುಗೇ ।
ಮಹಾಭಾರಾವತರಣಂ ಜಗತೋ ಹಿತಕಾಮ್ಯಯಾ ॥೫೨॥

ತವೈವ ತೇಜಸಾಽಕ್ರಾಂತಾಂ ರಸಾತಲತಲಂ ಗತಾಂ ।
ತ್ರಾಯಸ್ವ ಮಾಂ ಸುರಶ್ರೇಷ್ಠ ತ್ವಾಮೇವ ಶರಣಂ ಗತಾ ॥೫೩॥

---

೪೯. ಜಗತ್ತನ್ನು ನೀನು ಧಾರಣಮಾಡುತ್ತೀಯೆ. ಅದನ್ನು ನೀನೇ ಸಂಹರಿಸುತ್ತೀಯೆ. ಪ್ರಾಣಿಗಳಿಗೆ ನೀನು ಆಧಾರವಾಗಿದ್ದೀಯೆ. ಮತ್ತು ಪ್ರಪಂಚವನ್ನು ಪಾಲಿಸುತ್ತೀಯೆ.

೫೦-೫೧. ನಿನ್ನ ತೇಜಸ್ಸಿನಿಂದಲೂ ಬಲದಿಂದಲೂ ಯಾವುದನ್ನು ನೀನು ಧರಿಸಿರುವೆಯೋ ಅದನ್ನೇ ನಾನೂ ಹೊತ್ತಿರುವೆನು. ನೀನು ಧರಿಸದಿರತಕ್ಕುದನ್ನು ನಾನು ಹೊರಲಾರೆ. ದೇವಾ, ನಿನ್ನ ಆಧಾರವಿಲ್ಲದಿರುವ ಪ್ರಾಣಿ ಯಾವುದೂ ಈ ಜಗತ್ತಿನಲ್ಲಿಲ್ಲ.

೫೨. ದೇವಾ. ನಾರಾಯಣಾ, ಪ್ರತಿಯೊಂದು ಯುಗದಲ್ಲೂ ಜಗತ್ತಿನ ಹಿತದ ಸಲುವಾಗಿ ನನ್ನ ಮೇಲಿನ ಅಧಿಕಭಾರವನ್ನು ನೀನೇ ಇಳಿಸುತ್ತಿರುವೆ.

೫೩. ನಿನ್ನ ತೇಜಸ್ಸಿನ ವೇಗದಿಂದಲೇ ಪೀಡಿತಳಾಗಿ ನಾನು ಪಾತಾಳಕ್ಕಿಳಿಯುತ್ತಿದ್ದೇನೆ. ದೇವೋತ್ತಮಾ, ನಿನ್ನನ್ನೇ ನಾನು ಮರೆಹೊಕ್ಕಿರುವೆನು. ನನ್ನನ್ನು ರಕ್ಷಿಸು.

**ದಾನವೈಃ ಪೀಡ್ಯಮಾನಾಹಂ ರಾಕ್ಷಸೈಶ್ಚ ದುರಾತ್ಮಭಿಃ ।**
**ತ್ವಾಮೇವ ಶರಣಂ ನಿತ್ಯಮುಪಯಾಮಿ ಸನಾತನಂ ॥೫೪॥**

**ತಾವನ್ಮೇಽಸ್ತಿ ಭಯಂ ದೇವ ಯಾವನ್ನ ತ್ವಾಂ ಕಕುದ್ಮಿನಂ ।**
**ಶರಣಂ ಯಾಮಿ ಮನಸಾ ಶತಶೋಽಪ್ಯುಪಲಕ್ಷಯೇ ॥೫೫॥**

**ಉಪಮಾನಂ ನ ತೇ ಶಕ್ತಾಃ ಕರ್ತುಂ ಸೇಂದ್ರಾ ದಿವೌಕಸಃ ।**
**ತತ್ತ್ವಂ ತ್ವಮೇವ ತದ್ವೇತ್ಸಿ ನಿರುತ್ತರಮತಃ ಪರಂ ॥೫೬॥**

**॥ ಶೌನಕ ಉವಾಚ ॥**

**ತತಃ ಪ್ರೀತಃ ಸ ಭಗವಾನ್ ಪೃಥಿವ್ಯೈ ಶಾರ್ಙ್ಗಚಕ್ರಧೃಕ್ ।**
**ಕಾಮಮಸ್ಯಾ ಯಥಾಕಾಮಮಭಿಪೂರಿತವಾನ್ ಹರಿಃ ॥೫೭॥**

**ಅಬ್ರವೀಚ್ಚ ಮಹಾದೇವಿ ಮಾಧವೀಯಂ ಸ್ತವೋತ್ತಮಂ ।**
**ಧಾರಯಿಷ್ಯತಿ ಯೋ ಮರ್ತ್ಯೋ ನಾಸ್ತಿ ತಸ್ಯ ಪರಾಭವಃ ॥೫೮॥**

---

೫೪. ದುರಾತ್ಮರಾದ ದಾನವರ ಮತ್ತು ರಾಕ್ಷಸರ ಪೀಡೆಗೊಳಗಾಗಿ ನಾನು ಸನಾತನನಾದ ನಿನ್ನನ್ನೇ ಯಾವಾಗಲೂ ಮರೆಹೊಗುತ್ತೇನೆ.

೫೫. ದೇವಾ, ಉತ್ತಮೋತ್ತಮನಾದ ನಿನ್ನನ್ನು ನಾನು ಎಲ್ಲಿಯ ವರೆಗೆ ಮನಃಪೂರ್ವಕವಾಗಿ ಮರೆಹೊಗುವುದಿಲ್ಲವೋ, ಅಲ್ಲಿಯ ವರೆಗೆ ಮಾತ್ರವೇ ನನಗೆ ದುಃಖ. ಇದನ್ನು ನೂರಾರುಸಾರಿ ನೋಡಿದ್ದೇನೆ.

೫೬. ನಿನಗೆ ಹೋಲಿಕೆಯನ್ನು ಕೊಡಲು ಇಂದ್ರಾದಿ ದೇವತೆಗಳೂ ಕೂಡ ಶಕ್ತರಲ್ಲ. ವಾಸ್ತವಾಂಶವು ನಿನಗೆ ಗೊತ್ತು. ಇನ್ನು ಮುಂದೆ ನಾನು ಉತ್ತರ ಹೇಳಲಾರೆ.

೫೭. ಶೌನಕಮುನಿ ಹೇಳಿದನು.—ಬಳಿಕ ಶಾರ್ಙ್ಗವೆಂಬ ಬಿಲ್ಲನ್ನೂ ಚಕ್ರವನ್ನೂ ಧರಿಸಿರುವ ಮಹಾವಿಷ್ಣು ಭೂದೇವಿಯ ಸ್ತೋತ್ರದಿಂದ ಪ್ರೀತನಾಗಿ ಅವಳ ಇಷ್ಟಾರ್ಥವನ್ನು ಪೂರ್ಣಮಾಡಿದನು.

೫೮. ದೇವದೇವನು ಭೂಮಿಗೆ ಇಂತು ಹೇಳಿದನು. "ಓ ಮಹಾದೇವೀ, ನೀನು ಮಾಡಿದ ಈ ಅತ್ಯುತ್ತಮವಾದ ಮಾಧವಸ್ತೋತ್ರವನ್ನು ಯಾವ ಮನುಷ್ಯನು ಪಾರಾಯಣಮಾಡುತ್ತಾನೋ ಅವನಿಗೆ ಪರಾಭವವೆಂಬುದಿಲ್ಲ.

ಲೋಕಾನ್ ನಿಷ್ಕಲ್ಮಷಾಂಶ್ಚೈವ ವೈಷ್ಣವಾನ್ ಪ್ರತಿಪತ್ಸ್ಯತೇ ।
ಏತದಾಶ್ಚರ್ಯಸರ್ವಸ್ವಂ ಮಾಧವೀಯಂ ಸ್ತವೋತ್ತಮಂ ॥೫೯॥

ಅಧೀತವೇದಃ ಪುರುಷೋ ಮುನಿಃ ಪ್ರೀತಮನಾ ಭವೇತ್ ॥೬೦॥

ಮಾಭೈರ್ಧರಣಿ ಕಲ್ಯಾಣಿ ಶಾಂತಿಂ ವ್ರಜ ಮಮಾಗ್ರತಃ ।
ಏಷ ತ್ವಾಮುಚಿತಂ ಸ್ಥಾನಂ ಪ್ರಾಪಯಾಮಿ ಮನೀಷಿತಂ ॥೬೧॥

॥ ಶೌನಕ ಉವಾಚ ॥

ತತೋ ಮಹಾತ್ಮಾ ಮನಸಾ ದಿವ್ಯಂ ರೂಪಮಚಿಂತಯತ್ ।
ಕಿಂನು ರೂಪಮಹಂ ಕೃತ್ವಾ ಉದ್ಧರೇಯಂ ಧರಾಮಿಮಾಂ ॥೬೨॥

ಜಲಕ್ರೀಡಾರುಚಿಸ್ತಸ್ಮಾದ್ವಾರಾಹಂ ವಪುರಾಸ್ಥಿತಃ ।
ಅದೃಶ್ಯಂ ಸರ್ವಭೂತಾನಾಂ ವಾಙ್ಮಯಂ ಬ್ರಹ್ಮ ಸಂಸ್ಥಿತಂ ॥೬೩॥

---

೫೯-೬೦. ಪಾಪದ ಸಂಬಂಧವೇ ಇಲ್ಲದ ವೈಷ್ಣವಲೋಕಗಳನ್ನು ಆತನು ಸೇರುವನು. ಅತ್ಯಂತ ಆಶ್ಚರ್ಯಕರವಾದ ಈ ಮಾಧವೀಯಸ್ತೋತ್ರರತ್ನವನ್ನು ಅನುಸಂಧಾನಮಾಡಿದವನಿಗೆ ಸಕಲವೇದಗಳನ್ನೂ ಅಧ್ಯಯನಮಾಡಿದ ಫಲವು ಬರುತ್ತದೆ. ಅವನು ಮನನಶೀಲನೂ ಶಾಂತಾತ್ಮನೂ ಆಗುವನು.

೬೧. ಎಲೌ ಕಲ್ಯಾಣೀ, ಭೂಮೀ, ಹೆದರಬೇಡ. ನನ್ನೆದುರಿಗೆ ಶಾಂತಳಾಗಿರು. ಇಗೋ, ನೀನು ಬಯಸಿದಂತೆ ನಿನ್ನನ್ನು ಉಚಿತಸ್ಥಾನದಲ್ಲಿ ಇರಿಸುವೆನು.

೬೨. ಶೌನಕಮುನಿ ಹೇಳಿದನು.—ತರುವಾಯ ಮಹಾತ್ಮನಾದ ವಿಷ್ಣು "ನಾನು ಯಾವ ದಿವ್ಯರೂಪವನ್ನು ಧರಿಸಿ ಈ ಭೂಮಿಯನ್ನು ಮೇಲಕ್ಕೆತ್ತಲಿ?" ಎಂದು ಮನಸ್ಸಿನಲ್ಲಿ ಯೋಚಿಸಿದನು.

೬೩-೬೬. ಭಗವಂತನಿಗೆ ಜಲಕ್ರೀಡೆಯಲ್ಲಿ ಆಸಕ್ತಿ. ಆದುದರಿಂದ ಅವನು ವರಾಹರೂಪವನ್ನು ತಾಳಿದನು. ಆ ಮಾಯಾವರಾಹವು ಸಕಲ ಭೂತಗಳಿಗೂ ಅಗೋಚರವಾದ ವೇದಮಯವಾದ ಶರೀರವುಳ್ಳದಾಗಿತ್ತು. ನೂರುಯೋಜನ

**ಶತಯೋಜನವಿಸ್ತೀರ್ಣಮುಚ್ಛ್ರಿತಂ ದ್ವಿಗುಣಂ ತತಃ ।**
**ನೀಲಜೀಮೂತಸಂಕಾಶಂ ಮೇಘಸ್ತನಿತನಿಸ್ವನಂ ॥೬೪॥**

**ಗಿರಿಸಂಹನನಂ ಭೀಮಂ ಶ್ವೇತತೀಕ್ಷ್ಣಾಗ್ರದಂಷ್ಟ್ರಿಣಂ ।**
**ವಿದ್ಯುದಗ್ನಿಪ್ರತೀಕಾಶಮಾದಿತ್ಯಸಮತೇಜಸಂ ।**
**ಪೀನವೃತ್ತಾಯತಸ್ಕಂಧಂ ದೃಪ್ತಶಾರ್ದೂಲಗಾಮಿನಂ ॥೬೫॥**

**ಪೀನೋನ್ನತಕಟೀದೇಶಂ ವೃಷಲಕ್ಷಣಲಕ್ಷಿತಂ ।**
**ರೂಪಮಾಸ್ಥಾಯ ವಿಪುಲಂ ವಾರಾಹಮಜಿತೋ ಹರಿಃ ॥೬೬॥**

**ಪೃಥಿವ್ಯುದ್ಧರಣಾಯೈವ ಪ್ರವಿವೇಶ ರಸಾತಲಂ ।**
**ವೇದಪಾದೋ ಯೂಪದಂಷ್ಟ್ರಃ ಕ್ರತುದಂತಶ್ಚಿತೀಮುಖಃ ॥೬೭॥**

**ಅಗ್ನಿಜಿಹ್ವೋ ದರ್ಭಲೋಮಾ ಬ್ರಹ್ಮಶೀರ್ಷೋ ಮಹಾತಪಾಃ ।**
**ಅಹೋರಾತ್ರೇಕ್ಷಣಧರೋ ವೇದಾಂಗಶ್ರುತಿಭೂಷಣಃ ॥೬೮॥**

---

ಉದ್ದವಾಗಿಯೂ ಅದರ ಎರಡರಷ್ಟು ಎತ್ತರವಾಗಿಯೂ ಇತ್ತು. ಕರಿಯಮೋಡದ ವೈಬಣ್ಣವುಳ್ಳದಾಗಿ ಗುಡುಗಿನಂತೆ ಗುರುಗುಟ್ಟುತ್ತಿತ್ತು. ಅದರ ದೇಹವು ಬೆಟ್ಟದಂತೆ ಭಯಂಕರವಾಗಿಯೂ ಕೋರೆಹಲ್ಲುಗಳು ಬೆಳ್ಳಗೆ ಮೊನಚಾಗಿಯೂ ಇದ್ದುವು. ಅದು ಮಿಂಚಿನಂತೆ ಕಣ್ಣನ್ನು ಕೋರೈಸುತ್ತ ಅಗ್ನಿಯನ್ನೂ ಸೂರ್ಯನನ್ನೂ ತೇಜಸ್ಸಿನಲ್ಲಿ ಹೋಲುತ್ತಿತ್ತು. ಅದರ ಹೆಗಲು ಕೊಬ್ಬಿ, ದಪ್ಪವಾಗಿ ವಿಸ್ತಾರವಾಗಿತ್ತು. ಸೊಕ್ಕಿದ ಹುಲಿಯಂತೆ ಅದು ನಡೆಯುತ್ತಿತ್ತು. ಸೊಂಟವು ಪುಷ್ಟವಾಗಿ ಉನ್ನತವಾಗಿತ್ತು. ಶ್ರೇಷ್ಠಜಾತಿಯ ವರಾಹಕ್ಕೆ ಇರಬೇಕಾದ ಲಕ್ಷಣಗಳೆಲ್ಲವೂ ಅದರಲ್ಲಿದ್ದುವು. ಅಜೇಯನಾದ ಹರಿಯು ಇಂತಹ ಮಹಾರೂಪವನ್ನು ತಾಳಿ ಭೂಮಿಯನ್ನು ಎತ್ತುವುದಕ್ಕಾಗಿ ಪಾತಾಳವನ್ನು ಪ್ರವೇಶಿಸಿದನು.

೬೭-೭೪. ದೇವದೇವನ ಆ ವರಾಹರೂಪವು ಸಕಲಯಜ್ಞಮಯವಾದುದು. ವೇದಗಳೇ ಅದರ ಪಾದ. ಯೂಪಸ್ತಂಭವೇ ಕೋರೆದಾಡೆ. ಯಾಗವೇ ಹಲ್ಲು. ಸಮಿತ್ತಿನ ರಾಶಿಯೇ ಮುಖ, ಅಗ್ನಿಯೇ ನಾಲಗೆ, ದರ್ಭೆಗಳೇ ಕೂದಲು, ಮಹಾತಪಸ್ವಿಯಾದ

ಆಜ್ಯನಾಸಃ ಸ್ರುವತುಂಡಃ ಸಾಮಘೋಷಸ್ವನೋ ಮಹಾ‌ |
ಸತ್ಯಧರ್ಮಮಯಃ ಶ್ರೀಮಾ‌ ಕರ್ಮವಿಕ್ರಮಸತ್ಕ್ರಮಃ ||೬೯||

ಪ್ರಾಯಶ್ಚಿತ್ತನಖೋ ಘೋರಃ ಪಶುಜಾನುರ್ಮಖಾಕೃತಿಃ |
ಉದ್ಗೀಥಹೋಮಲಿಂಗೋಽಥ ಬೀಜೌಷಧಿಮಹಾಫಲಃ ||೭೦||

ವಾಯ್ವಂತರಾತ್ಮಾ ಯಜ್ಞಾಸ್ಥಿವಿಕೃತಿಃ ಸೋಮಶೋಣಿತಃ |
ವೇದಸ್ಕಂಧೋ ಹವಿರ್ಗಂಧೋ ಹವ್ಯಕವ್ಯವಿಭಾಗವಾ‌ ||೭೧||

ಪ್ರಾಗ್ವಂಶಕಾಯೋ ದ್ಯುತಿಮಾನ್ನಾನಾದೀಕ್ಷಾಭಿರನ್ವಿತಃ |
ದಕ್ಷಿಣಾಹೃದಯೋ ಯೋಗೀ ಮಹಾಸತ್ರಮಯೋ ಮಹಾ‌ ||೭೨||

ಉಪಾಕರ್ಮೋಷ್ಠರುಚಿರಃ ಪ್ರವರ್ಗ್ಯಾವರ್ತಭೂಷಣಃ |
ನಾನಾಚ್ಛಂದೋಗತಿಪಥೋ ಗುಹ್ಯೋಪನಿಷದಾಸನಃ |
ಛಾಯಾಪತ್ನೀಸಹಾಯೋ ವೈ ಮಣಿಶೃಂಗ ಇವೋಚ್ಛ್ರಿತಃ ||೭೩||

---

ಬ್ರಹ್ಮನೇ (ಯಜ್ಞಾಧಿಕಾರಿ) ತಲೆ. ಹಗಲು ರಾತ್ರಿಗಳೇ ಕಣ್ಣುಗಳು, ವೇದಾಂಗ ಗಳು ಮತ್ತು ಶ್ರುತಿಗಳೇ ಒಡವೆಗಳು, ತುಪ್ಪವೇ ಮೂಗು, ಸ್ರುವವೆಂಬ ಹೋಮ ಸಾಧನವೇ ಬಾಯಿ, ಶ್ರೇಷ್ಠವಾದ ಸಾಮವೇದವೇ ಗುರುಗುರುಧ್ವನಿ. ಸತ್ಯ ಧರ್ಮಗಳೇ ಸ್ವಭಾವ. ಕರ್ಮವಿಧಾನವೇ ನಡಿಗೆ, ಪ್ರಾಯಶ್ಚಿತ್ತವೇ ಘೋರವಾದ ಉಗುರುಗಳು, ಯಜ್ಞಪಶುವೇ ಮೊಣಕಾಲು, ಯಜ್ಞವೇ ಆಕೃತಿ, ಉದ್ಗೀಥ ಮಂತ್ರಗಳಿಂದ ಮಾಡುವ ಹೋಮವೇ ಅಂಗಾವಯವ, ಮೂಲಿಕೆಗಳು ಮತ್ತು ಶ್ರೇಷ್ಠವಾದ ಹಣ್ಣುಗಳೇ ಬೀಜಗಳು,ವಾಯುವೇ ಅಂತರಾತ್ಮ. ವಿಧವಿದವಾದ ಯಜ್ಞ ಗಳೇ ಬಗೆಬಗೆಯ ಮೂಳೆಗಳು, ಸೋಮರಸವೇ ರಕ್ತ, ವೇದವೇ ಹೆಗಲು, ಹವಿಸ್ಸೇ ವಾಸನೆ, ಹವ್ಯಕಾವ್ಯಗಳೇ ಅವಯವಗಳ ಬೇರೆಬೇರೆ ವಿಭಾಗಗಳು, ಪ್ರಾಗ್ವಂಶ ವೆಂಬ ಯಜ್ಞಶಾಲಾ ಪ್ರದೇಶವೇ ದೇಹ, ವಿಧವಿಧವಾದ ದೀಕ್ಷೆಗಳೇ ಕಾಂತಿ, ದಕ್ಷಿಣೆಯೇ ಹೃದಯ, ವೇದಾರಂಭವೇ ತುಟಿಯ ಮೇಲ್ಗಡೆಯ ಆಭರಣ, ಪ್ರವರ್ಗ್ಯ ವೆಂಬ ಕರ್ಮವೇ ಕೊರಳಿನ ಹಾರ, ನಾನಾ ವಿಧವಾದ ಛಂದಸ್ಸುಗಳೇ ನಡೆಯುವ

**ರಸಾತಲತಲೇ ಮಗ್ನಾಂ ರಸಾತಲತಲಂ ಗತಾಂ ।**
**ಪ್ರಭುರ್ಲೋಕಹಿತಾರ್ಥಾಯ ದಂಷ್ಟ್ರಾಗ್ರೇಣೋಜ್ಜಹಾರ ತಾಂ ॥೭೪॥**

**ತತಃ ಸ್ವಸ್ಥಾನಮಾನೀಯ ವರಾಹಃ ಪೃಥಿವೀಧರಃ ।**
**ಮುಮೋಚ ಪೂರ್ವಂ ಮನಸಾ ಧಾರಯಿತ್ವಾ ವಸುಂಧರಾಂ ॥೭೫॥**

**ತತೋ ಜಗಾಮ ನಿರ್ವಾಣಂ ಮೇದಿನೀ ತಸ್ಯ ಧಾರಣಾತ್ ।**
**ಚಕಾರ ಚ ನಮಸ್ಕಾರಂ ತಸ್ಮೈ ದೇವಾಯ ಶಂಭವೇ ॥೭೬॥**

**ಏವಂ ಯಜ್ಞವರಾಹೇಣ ಭೂತ್ವಾ ಭೂತಹಿತಾರ್ಥಿನಾ ।**
**ಉದ್ಧೃತಾ ಪೃಥಿವೀ ದೇವೀ ಸಾಗರಾಂಬುಗತಾ ಪುರಾ ॥೭೭॥**

**ಅಥೋದ್ಧೃತ್ಯ ಕ್ಷಿತಿಂ ದೇವೋ ಜಗತಃ ಸ್ಥಾಪನೇಚ್ಛಯಾ ।**
**ಪೃಥಿವೀಪ್ರವಿಭಾಗಾಯ ಮನಶ್ಚಕ್ರೇಽಂಬುಜೇಕ್ಷಣಃ ॥೭೮॥**

---

ಹಾದಿ, ರಹಸ್ಯವಾದ ಉಪನಿಷತ್ತುಗಳೇ ಆಸನ, ಪತ್ನಿಯೇ ಛಾಯೆ. ಹೀಗೆ ಯಜ್ಞಮಯವಾದ ರೂಪದಿಂದ ರತ್ನದ ಶಿಖರದಂತೆ ಉನ್ನತನಾಗಿ ಜಗದೀಶ್ವರನು ಪಾತಾಲಕ್ಕೆ ಮುಳುಗುತ್ತ ಮುಳುಗುತ್ತ, ಅದರ ತಳವನ್ನು ಸೇರಿದ ಆ ಭೂದೇವಿಯನ್ನು ಸಕಲ ಲೋಕಗಳ ಹಿತಕ್ಕೋಸ್ಕರ ತನ್ನ ಕೋರೆದಾಡೆಯಿಂದ ಎತ್ತಿದನು.

೭೫. ತರುವಾಯ ವರಾಹಮೂರ್ತಿಯು ಭೂಮಿಯನ್ನು ಸ್ವಸ್ಥಾನಕ್ಕೆ ತಂದು, ಮೊದಲು ಆಕೆಗೆ ಮನಸ್ಸಿನಲ್ಲಿ ಸ್ಥಳವನ್ನು ಕೊಟ್ಟು ತರುವಾಯ ಕೆಳಗಿಳಿಸಿದನು.

೭೬. ಭಗವಂತನು ಆಧಾರವನ್ನು ಕೊಟ್ಟಕಾರಣ ಭೂದೇವಿಯು ನೆಮ್ಮದಿಗೊಂಡು 'ಸಕಲಲೋಕಗಳಿಗೂ ಕ್ಷೇಮವನ್ನೀವ ಆ ದೇವದೇವನಿಗೆ ನಮಸ್ಕಾರ ಮಾಡಿದಳು.

೭೭. ಹೀಗೆ ಯಜ್ಞರೂಪನಾದ ವರಾಹದೇವನು ಸಕಲ ಜಂತುಗಳ ಹಿತಕ್ಕಾಗಿ ಸಾಗರದ ಜಲದಲ್ಲಿ ಮುಳುಗಿಹೋಗಿದ್ದ ಭೂದೇವಿಯನ್ನು ಸೃಷ್ಟಿಯ ಆದಿಯಲ್ಲಿ ಮೇಲಕ್ಕೆತ್ತಿದನು.

೭೮. ಜಗತ್ತನ್ನು ಸ್ಥಿರಪಡಿಸಬೇಕೆಂಬ ಇಚ್ಛೆಯಿಂದ ಭೂಮಿಯನ್ನು ಹೀಗೆ ಎತ್ತಿದಬಳಿಕ ಆದಿದೇವನಾದ ಪುಂಡರೀಕಾಕ್ಷನು ಭೂಮಿಯನ್ನು ವಿಭಾಗಮಾಡಬೇಕೆಂದು ಮನಸ್ಸುಮಾಡಿದನು.

**ರಸಾಂ ಗತಾಮೇವಮಚಿಂತ್ಯವಿಕ್ರಮಃ**
**ಸುರೋತ್ತಮಃ ಪ್ರವರವರಾಹರೂಪಧೃಕ್ ।**
**ವೃಷಾಕಪಿಃ ಪ್ರಸಭಮಥೈಕದಂಷ್ಟ್ರಯಾ**
**ಸಮುದ್ಧರದ್ಧರಣಿಮತುಲ್ಯಪೌರುಷಃ ॥೭೯॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ವರಾಹಪ್ರಾದುರ್ಭಾವೋ ನಾಮಾಷ್ಟಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಃ**

---

೭೯. ಅಚಿಂತ್ಯವಿಕ್ರಮನೂ, ಸುರೋತ್ತಮನೂ, ಅಸಮಾನ ಪೌರುಷನೂ ಆದ ಮಹಾವಿಷ್ಣು ಅತ್ಯಂತ ಪಾವನವೆನಿಸಿದ ಯಜ್ಞವರಾಹ ರೂಪವನ್ನು ಧರಿಸಿ ಪಾತಾಲದಲ್ಲಿ ಮುಳುಗಿಹೋಗಿದ್ದ ಭೂಮಿಯನ್ನು ಹಿಂದೆ ವಿವರಿಸಿದಂತೆ ಮೇಲಕ್ಕೆತ್ತಿದನು.

## ಅಧ್ಯಾಯದ ಸಾರಾಂಶ

ಭಗವಂತನು ವರಾಹರೂಪದಿಂದ ಭೂಮಿಯನ್ನು ಎತ್ತಿದ ವೃತ್ತಾಂತವು ಈ ಅಧ್ಯಾಯದಲ್ಲಿ ಹೇಳಲ್ಪಟ್ಟಿದೆ.

ಜಗದ್ರೂಪವಾದ ಅಂಡವನ್ನು ನಾರಾಯಣನು ಮೇಲೂ ಕೆಳಗೂ ಒಡೆದು ಆಕಾಶವನ್ನೂ ಪಾತಾಳವನ್ನೂ ಸೃಷ್ಟಿಸಿದನು. ಸುವರ್ಣಮಯವಾದ ಮೇರುಪರ್ವತವೂ ಉಳಿದ ಸಾವಿರಾರು ಶೈಲಗಳೂ ಸೃಷ್ಟವಾದುವು. ಆ ಭಾರವನ್ನು ತಡೆಯಲಾರದೆ ಭೂಮಿ ಪಾತಾಳಕ್ಕೆ ಕುಸಿದುಬಿದ್ದಿತು. ಭೂದೇವಿ ದಿಕ್ಕು ತೋಚದೆ ಆ ದೇವಾಧಿದೇವನನ್ನು ವಿಧವಿಧವಾಗಿ ಸ್ತುತಿಸಿದಳು. ಅವನು ಪ್ರಸನ್ನನಾಗಿ ಸಕಲ ಯಜ್ಞಯಾಗಮಯವಾದ ವರಾಹರೂಪವನ್ನು ಧರಿಸಿ, ಪಾತಾಳಕ್ಕಿಳಿದು, ತನ್ನ ಕೋರೆಹಲ್ಲಿನಿಂದ ಭೂಮಿಯನ್ನು ಮೇಲಕ್ಕೆತ್ತಿ, ಸ್ವಸ್ಥಾನದಲ್ಲಿಟ್ಟು ಸ್ಥಿರಗೊಳಿಸಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ವರಾಹಪ್ರಾದುರ್ಭಾವವೆಂಬ
ಇನ್ನೂರ ನಲವತ್ತೆಂಟನೆಯ ಅಧ್ಯಾಯವು ಮುಗಿದುದು

## ಅಥೈಕೋನಪಂಚಾಶದಧಿಕದ್ವಿಶತತಮೋಽಧ್ಯಾಯಃ

|| ಋಷಯ ಊಚುಃ ||

ನಾರಾಯಣಸ್ಯ ಮಾಹಾತ್ಮ್ಯಂ ಶ್ರುತ್ವಾ ಸೂತ ಯಥಾಕ್ರಮಂ ।
ನ ತೃಪ್ತಿರ್ಜಾಯತೇಽಸ್ಮಾಕಮತಃ ಪುನರಿಹೋಚ್ಯತಾಂ || ೧ ||

ಕಥಂ ದೇವಾ ಗತಾಃ ಪೂರ್ವಮಮರತ್ವಂ ವಿಚಕ್ಷಣಾಃ ।
ತಪಸಾ ಕರ್ಮಣಾ ವಾಪಿ ಪ್ರಸಾದಾತ್ಕಸ್ಯ ತೇಜಸಾ || ೨ ||

|| ಸೂತ ಉವಾಚ ||

ಯತ್ರ ನಾರಾಯಣೋ ದೇವೋ ಮಹಾದೇವಶ್ಚ ಶೂಲಧೃಕ್ ।
ತತ್ರಾಮರತ್ವೇ ಸರ್ವೇಷಾಂ ಸಹಾಯೌ ತತ್ರ ತೌ ಸ್ಮೃತೌ || ೩ ||

ಪುರಾ ದೇವಾಸುರೇ ಯುದ್ಧೇ ಹತಾಶ್ಚ ಶತಶಃ ಸುರೈಃ ।
ಪುನಃ ಸಂಜೀವಿನೀಂ ವಿದ್ಯಾಂ ಪ್ರಯೋಜ್ಯ ಭೃಗುನಂದನಃ || ೪ ||

---

೧. ಋಷಿಗಳು ಹೇಳಿದರು.—ಓ ಸೂತಪೌರಾಣಿಕಾ, ನಾರಾಯಣನ ಮಹಿಮೆಯನ್ನು ಅನುಕ್ರಮವಾಗಿ ಕೇಳಿ ತೃಪ್ತಿಯೇ ಹುಟ್ಟುವುದಿಲ್ಲ. ಆದಕಾರಣ ಮತ್ತೆ ಅದನ್ನೇ ನಮಗೆ ಹೇಳು.

೨. ಕುಶಲಬುದ್ಧಿಸಂಪನ್ನರಾದ ದೇವತೆಗಳು ಪೂರ್ವದಲ್ಲಿ ಅಮರತ್ವವನ್ನು ಸಂಪಾದಿಸಿದುದು ಹೇಗೆ? ಅದು ಯಾರ ತಪಸ್ಸಿನ, ಕರ್ಮದ, ಅನುಗ್ರಹದ ಅಥವಾ ತೇಜಸ್ಸಿನ ಫಲದಿಂದ?

೩. ಸೂತಪೌರಾಣಿಕನು ಹೇಳಿದನು.—ಪೂಜ್ಯನಾದ ನಾರಾಯಣನೂ ಶೂಲಪಾಣಿಯಾದ ಮಹಾದೇವನೂ ಎಲ್ಲಿರುವರೋ ಅಲ್ಲಿ ಎಲ್ಲರಿಗೂ ಅಮರತ್ವವು ದೊರೆಯುವುದು. ಅವರಿಬ್ಬರೂ ಅದಕ್ಕೆ ಸಹಾಯಮಾಡುವರು.

೪. ಪೂರ್ವದಲ್ಲಿ ದೇವತೆಗಳಿಗೂ ಅಸುರರಿಗೂ ನಡೆದ ಯುದ್ಧದಲ್ಲಿ ದೇವತೆಗಳು ದೈತ್ಯರನ್ನು ಲೆಕ್ಕವಿಲ್ಲದಂತೆ ಸಂಹರಿಸಿದರು. ದೈತ್ಯಗುರುವಾದ ಶುಕ್ರಾಚಾರ್ಯನು ಮೃತಸಂಜೀವಿನೀ ವಿದ್ಯೆಯನ್ನು ಪ್ರಯೋಗಿಸಿ ಅವರನ್ನು ಬದುಕಿಸುತ್ತಿದ್ದನು. ಅವರು ನಿದ್ರೆಯಿಂದ ಎಚ್ಚೆತ್ತವರಂತೆ ಮೇಲಕ್ಕೆ ಏಳುತ್ತಿದ್ದರು.

ಜೀವಾಪಯತಿ ದೈತ್ಯೇಂದ್ರಾನ್ ಯಥಾ ಸುಪ್ತೋತ್ಥಿತಾನಿವ ।
ತಸ್ಯ ತುಷ್ಟೇನ ದೇವೇನ ಶಂಕರೇಣ ಮಹಾತ್ಮನಾ ॥ ೫ ॥

ಮೃತಸಂಜೀವನೀ ನಾಮ ವಿದ್ಯಾ ದತ್ತಾ ಮಹಾಪ್ರಭಾ ।
ತಾಂ ತು ಮಾಹೇಶ್ವರೀಂ ವಿದ್ಯಾಂ ಮಹೇಶ್ವರಮುಖೋದ್ಗತಾಂ ॥ ೬ ॥

ಭಾರ್ಗವೇ ಸಂಸ್ಥಿತಾಂ ದೃಷ್ಟ್ವಾ ಮುಮುದುಃ ಸರ್ವದಾನವಾಃ ।
ತತೋಽಮರತ್ವಂ ದೈತ್ಯಾನಾಂ ಕೃತಂ ಶುಕ್ರೇಣ ಧೀಮತಾ ॥ ೭ ॥

ಯಾ ನಾಸ್ತಿ ಸರ್ವಲೋಕಾನಾಂ ದೇವಾನಾಂ ಯಕ್ಷರಕ್ಷಸಾಂ ।
ನನಾಗಾನಾಮೃಷೀಣಾಂ ಚ ನ ಚ ಬ್ರಹ್ಮೇಂದ್ರವಿಷ್ಣುಷು ॥ ೮ ॥

ತಾಂ ಲಬ್ಧ್ವಾ ಶಂಕರಾಚ್ಛುಕ್ರಃ ಪರಾಂ ನಿರ್ವೃತಿಮಾಗತಃ ।
ತತೋ ದೇವಾಸುರೋ ಘೋರಃ ಸಮರಃ ಸುಮಹಾನಭೂತ್ ॥ ೯ ॥

ತತ್ರ ದೇವೈರ್ಹತಾನ್ ದೈತ್ಯಾಞ್ಛುಕ್ರೋ ವಿದ್ಯಾಬಲೇನ ಚ ।
ಉತ್ಥಾಪಯಃತಿ ದೈತ್ಯೇಂದ್ರಾಂಲ್ಲೀಲಯೈವ ವಿಚಕ್ಷಣಃ ॥೧೦॥

---

೫-೭. ಶುಕ್ರಾಚಾರ್ಯನ ತಪಸ್ಸಿಗೆ ಮೆಚ್ಚಿ ಮಹಾತ್ಮನಾದ ಪರಮೇಶ್ವರನು ಮೃತಸಂಜೀವನಿಯೆಂಬ ಅದ್ಭುತಮಹಿಮೆಯುಳ್ಳ ವಿದ್ಯೆಯನ್ನು ಉಪದೇಶಿಸಿದನು. ಮಹೇಶ್ವರನ ಮುಖದಿಂದ ಹೊರಟ ಆ ಮಹಾವಿದ್ಯೆ ಭಾರ್ಗವನಲ್ಲಿ ನೆಲಸಿತು. ಅದನ್ನು ಕಂಡು ದಾನವರೆಲ್ಲರಿಗೂ ಪರಮಾನಂದವಾಯಿತು. ಸಕಲ ಶಾಸ್ತ್ರಜ್ಞನಾದ ಶುಕ್ರಾಚಾರ್ಯನು ಅದರ ಬಲದಿಂದ ದೈತ್ಯರಿಗೆ ಅಮರತ್ವವನ್ನು ಉಂಟುಮಾಡಿದನು.

೮. ಮನುಷ್ಯರು, ದೇವತೆಗಳು, ಯಕ್ಷರು, ರಾಕ್ಷಸರು, ನಾಗರು, ಋಷಿಗಳು, ಬ್ರಹ್ಮ, ಇಂದ್ರ, ವಿಷ್ಣು ಇವರಲ್ಲಿ ಯಾರಿಗೂ ತಿಳಿಯದ ಅಪೂರ್ವವಾದ ವಿದ್ಯೆಯನ್ನು ಪರಮೇಶ್ವರನಿಂದ ಸಂಪಾದಿಸಿ ಶುಕ್ರಾಚಾರ್ಯನು ಪರಮ ಸಂತೋಷಭರಿತನಾದನು.

೯-೧೦. ಬಳಿಕ ದೇವತೆಗಳಿಗೂ ಅಸುರರಿಗೂ ಅತಿಘೋರವಾದ ಯುದ್ಧವು ಪ್ರಾರಂಭವಾಯಿತು. ಸಕಲಶಾಸ್ತ್ರಜ್ಞನಾದ ಶುಕ್ರಾಚಾರ್ಯನು ದೇವತೆಗಳಿಂದ ಹತರಾದ ದೈತ್ಯರನ್ನು ತನ್ನ ವಿದ್ಯಾಬಲದಿಂದ ಅನಾಯಾಸವಾಗಿ ಬದುಕಿಸುತ್ತಿದ್ದನು.

ಏವಂವಿಧೇನ ಶಕ್ರಸ್ತು ಬೃಹಸ್ಪತಿರುದಾರಧೀಃ ।
ಹನ್ಯಮಾನಾಸ್ತತೋ ದೇವಾಃ ಶತಶೋಽಥ ಸಹಸ್ರಶಃ ॥೧೧॥

ವಿಷಣ್ಣವದನಾಃ ಸರ್ವೇ ಬಭೂವುರ್ವಿಕಲೇಂದ್ರಿಯಾಃ ।
ತತಸ್ತೇಷು ವಿಷಣ್ಣೇಷು ಭಗವಾನ್ ಕಮಲೋದ್ಭವಃ ।
ಮೇರುಪೃಷ್ಠೇ ಸುರೇಂದ್ರಾಣಾಮಿದಮಾಹ ಜಗತ್ಪತಿಃ ॥೧೨॥

॥ ಬ್ರಹ್ಮೋವಾಚ ॥

ದೇವಾಃ ಶೃಣುತ ಮದ್ವಾಕ್ಯಂ ತತ್ತಥೈವ ನಿರೂಪ್ಯತಾಂ ।
ಕ್ರಿಯತಾಂ ದಾನವೈಃ ಸಾರ್ಧಂ ಸಖ್ಯಮತ್ರ ಪ್ರವರ್ತತಾಂ ॥೧೩॥

ಕ್ರಿಯತಾಮಮೃತೋದ್ಯೋಗೋ ಮಥ್ಯತಾಂ ಕ್ಷೀರವಾರಿಧಿಃ ।
ಸಹಾಯಂ ವರುಣಂ ಕೃತ್ವಾ ಚಕ್ರಪಾಣಿರ್ವಿಬೋಧ್ಯತಾಂ ॥೧೪॥

ಮಂಥಾನಂ ಮಂದರಂ ಕೃತ್ವಾ ಶೇಷನೇತ್ರೇಣ ವೇಷ್ಟಿತಂ ।
ದಾನವೇಂದ್ರೋ ಬಲಿಃ ಸ್ವಾಮೀ ಸ್ತೋಕಕಾಲಂ ನಿಷೇವ್ಯತಾಂ ॥೧೫॥

---

೧೧. ದೇವತೆಗಳಾದರೋ ನೂರುಗಟ್ಟಲೆಯಾಗಿ ಹತರಾಗುತ್ತಿದ್ದರು. ಇದನ್ನು ನೋಡಿ ಇಂದ್ರನೂ, ಮಹಾಪ್ರಾಜ್ಞನಾದ ಬೃಹಸ್ಪತಿಯೂ, ಇನ್ನೂ ಉಳಿದ ದೇವತೆಗಳೂ ಕಂಗೆಟ್ಟ ಮುಖದಿಂದ ದಿಕ್ಕುತೋಚದವರಾದರು.

೧೨ ಅವರೆಲ್ಲರೂ ಆಗ ವಿಷಣ್ಣರಾಗಿರಲು, ಮೇರುಪರ್ವತದ ಮೇಲೆ ಕುಳಿತಿದ್ದ ಬ್ರಹ್ಮದೇವನು ಆಸುರಪ್ರಮುಖರಿಗಿಂತೆಂದನು.

೧೩. ಬ್ರಹ್ಮನು ಹೇಳಿದನು.—ದೇವತೆಗಳಿರಾ, ನನ್ನಮಾತನ್ನು ಕೇಳಿ. ಅದರಂತೆಯೇ ನಡೆಯಿರಿ. ದಾನವರೊಡನೆ ಸ್ನೇಹವನ್ನು ಮಾಡಿಕೊಳ್ಳಿ. ಆ ಕಾರ್ಯಕ್ಕೆ ಪ್ರವರ್ತಿಸಿರಿ.

೧೪. ಅಮೃತವನ್ನು ಸಂಪಾದಿಸಲು ಯತ್ನಮಾಡಿರಿ. ಕ್ಷೀರಸಮುದ್ರವನ್ನು ಕಡೆಯಿರಿ. ವರುಣನ ಸಹಾಯಪಡೆಯಿರಿ. ಮಹಾವಿಷ್ಣುವನ್ನು ಎಚ್ಚರಿಸಿರಿ.

೧೫. ಮಂದರಪರ್ವತವನ್ನು ಕಡೆಗೋಲಾಗಿಯೂ ಆದಿಶೇಷನನ್ನು ಕಡೆಯುವ ಹಗ್ಗವಾಗಿಯೂ ಮಾಡಿಕೊಳ್ಳಿ. ದಾನವೇಂದ್ರನಾದ ಬಲಿಗೆ ಸ್ವಲ್ಪಕಾಲ ಸೇವೆಯನ್ನು ಮಾಡಿರಿ.

ಪ್ರಾರ್ಥ್ಯತಾಂ ಕೂರ್ಮರೂಪಶ್ಚ ಪಾತಾಲೇ ವಿಷ್ಣುರವ್ಯಯಃ ।
ಪ್ರಾರ್ಥ್ಯತಾಂ ಮಂದರಃ ಶೈಲೋ ಮಂಥಕಾರ್ಯೇ ಪ್ರವರ್ತತಾಂ ॥೧೬॥

ತಚ್ಛ್ರುತ್ವಾ ವಚನಂ ದೇವಾ ಜಗ್ಮುರ್ದಾನವಮಂದಿರಂ ।
ಅಲಂ ವಿರೋಧೇನ ವಯಂ ಭೃತ್ಯಾಸ್ತವ ಬಲೇಽಧುನಾ ॥೧೭॥

ಕ್ರಿಯತಾಮಮೃತೋದ್ಯೋಗೋ ವ್ರಿಯತಾಂ ಶೇಷನೇತ್ರಕಂ ।
ತ್ವಯಾ ಚೋತ್ಪಾದಿತೇ ದೈತ್ಯ ಅಮೃತೇಽಮೃತಮಂಥನೇ ॥೧೮॥

ಭವಿಷ್ಯಾಮೋಽಮರಾಸ್ಸರ್ವೇ ತ್ವತ್ಪ್ರಸಾದಾನ್ನ ಸಂಶಯಃ ।
ಏವಮುಕ್ತಸ್ತದಾ ದೇವೈಃ ಪರಿತುಷ್ಟಃ ಸ ದಾನವಃ ॥೧೯॥

ಯಥಾ ವದತ ಹೇ ದೇವಾಸ್ತಥಾ ಕಾರ್ಯಂ ಮಯಾಧುನಾ ।
ಶಕ್ತೋಽಹಮೇಕ ಏವಾತ್ರ ಮಥಿತುಂ ಕ್ಷೀರವಾರಿಧಿಂ ॥೨೦॥

---

೧೬. ಪಾತಾಲದಲ್ಲಿರುವ ಆದಿಕೂರ್ಮರೂಪನೂ ನಿರ್ವಿಕಾರನೂ ಆದ ವಿಷ್ಣುವನ್ನು ಬೇಡಿಕೊಳ್ಳಿ. ಮಂದರಪರ್ವತವನ್ನು ಪ್ರಾರ್ಥಿಸಿರಿ. ಇನ್ನು ಸಮುದ್ರ ಮಂಥನಕಾರ್ಯದಲ್ಲಿ ತೊಡಗಿರಿ.

೧೭. ಆ ಮಾತನ್ನು ಕೇಳಿ ದೇವತೆಗಳು ದಾನವರಾಜನ ಮನೆಗೆ ಹೋಗಿ ಇಂತೆಂದರು. "ಎಲೈ ಬಲಿಚಕ್ರವರ್ತೀ, ನಮ್ಮಿಬ್ಬರಿಗೂ ಇನ್ನು ದ್ವೇಷ ಬೇಡ. ನಿನಗೆ ನಾವೀಗ ಸೇವಕರಾಗುತ್ತೇವೆ.

೧೮. ಅಮೃತವನ್ನು ಸಂಪಾದಿಸಲು ಪ್ರಯತ್ನಮಾಡು. ಕಡೆಗಣ್ಣಿಯಾಗುವಂತೆ ಆದಿಶೇಷನನ್ನು ಪ್ರಾರ್ಥಿಸು. ಓ ದೈತ್ಯರಾಜಾ, ಹಾಲ್ಗಡಲನ್ನು ಕಡೆದು ಅಮೃತವನ್ನು ನೀನು ಉತ್ಪತ್ತಿಮಾಡಿದರೆ ನಿನ್ನ ಅನುಗ್ರಹದಿಂದ ನಾವೆಲ್ಲರೂ ಅಮರರಾಗುವೆವು. ಇದರಲ್ಲಿ ಸಂದೇಹವಿಲ್ಲ."

೧೯-೨೨. ದೇವತೆಗಳು ಹೀಗೆ ಹೇಳಲು ಆ ದಾನವೇಂದ್ರನಿಗೆ ಬಹು ಸಂತೋಷವಾಯಿತು. ಅವನು ಅವರಿಗಿಂತೆಂದನು. " ಓ ದೇವತೆಗಳಿರಾ, ನೀವೀಗ ಹೇಳಿದಂತೆಯೇ ಮಾಡುವೆನು. ಕ್ಷೀರಸಮುದ್ರವನ್ನು ನಾನೊಬ್ಬನೇ ಕಡೆಯು

ಆಹರಿಷ್ಯೇಽಮೃತಂ ದಿವ್ಯಮಮೃತತ್ವಾಯ ವೋಽಧುನಾ
ಸುದೂರಾದಾಶ್ರಯಂ ಪ್ರಾಪ್ತಾ್ ಪ್ರಣತಾನಪಿ ವೈರಿಣಃ ||೨೧||

ಯೋ ನ ಪೂಜಯತೇ ಭಕ್ತ್ಯಾ ಪ್ರೇತ್ಯ ಚೇಹ ವಿನಶ್ಯತಿ ।
ಪಾಲಯಿಷ್ಯಾಮಿ ವಃ ಸರ್ವಾನಧುನಾ ಸ್ನೇಹಮಾಸ್ಥಿತಃ ||೨೨||

ಏವಮುಕ್ತ್ವಾ ಸ ದೈತ್ಯೇಂದ್ರೋ ದೇವೈಃ ಸಹ ಯಯೌ ತದಾ ।
ಮಂದರಂ ಪ್ರಾರ್ಥಯಾಮಾಸ ಸಹಾಯತ್ವೇ ಧರಾಧರಂ ||೨೩||

ಮಂಥಾ ಭವ ತ್ವಮಸ್ಮಾಕಮಧುನಾಽಮೃತಮಂಥನೇ ।
ಸುರಾಸುರಾಣಾಂ ಸರ್ವೇಷಾಂ ಮಹತ್ಕಾರ್ಯಮಿದಂ ಯತಃ ||೨೪||

ತಥೇತಿ ಮಂದರಃ ಪ್ರಾಹ ಯದ್ಯಾಧಾರೋ ಭವೇನ್ಮಮ ।
ಯತ್ರ ಸ್ಥಿತ್ವಾ ಭ್ರಮಿಷ್ಯಾಮಿ ಮಥಿಷ್ಯೇ ವರುಣಾಲಯಂ ||೨೫||

---

ಬಲ್ಲೆನು. ನಿಮ್ಮೆಲ್ಲರ ಅಮರತ್ವಪ್ರಾಪ್ತಿಗಾಗಿ ಶ್ರೇಷ್ಠವಾದ ಅಮೃತವನ್ನು ತರುವೆನು. ಬಹುದೂರದಿಂದ ಬಂದು ಮರೆಹೊಕ್ಕು ನಮಸ್ಕರಿಸಿದ ಮೇಲೆ ಶತ್ರುಗಳನ್ನಾದರೂ ಭಕ್ತಿಯಿಂದ ಗೌರವಿಸಬೇಕು. ಇಲ್ಲದಿದ್ದರೆ ಇಹಪರಗಳೆರಡೂ ನಾಶವಾಗುವುವು. ಇನ್ನು ನಿಮ್ಮಲ್ಲಿ ಸ್ನೇಹಮಾಡಿ ನಿಮ್ಮೆಲ್ಲರನ್ನೂ ಪಾಲಿಸುವೆನು."

೨೩. ಬಲೀಂದ್ರನು ಹೀಗೆ ಹೇಳಿ, ದೇವತೆಗಳೊಡನೆ ಮಂದರಪರ್ವತದ ಬಳಿಗೆ ಹೋಗಿ, ತಮಗೆ ಸಹಾಯಮಾಡಬೇಕೆಂದು ಅದನ್ನು ಬೇಡಿದನು.

೨೪. "ನಾವೀಗ ಅಮೃತವನ್ನು ಕಡೆಯಬೇಕಾಗಿದೆ. ನೀನು ಕಡೆಗೋಲಾಗಬೇಕು. ಏಕೆಂದರೆ ಇದು ದೇವತೆಗಳಿಗೂ ಅಸುರರಿಗೂ ಸಂಬಂಧಿಸಿದ ಕೆಲಸ."

೨೫. ಮಂದರಗಿರಿ ಹೇಳಿತು.—"ಹಾಗೆಯೇ ಆಗಲಿ ; ನಿಂತುಕೊಂಡು ತಿರುಗುವುದಕ್ಕೆ ನನಗೊಂದು ಆಧಾರ ಬೇಕು. ಹಾಗಾದರೆ ಸಮುದ್ರವನ್ನು ಕಡೆಯುವೆನು. ನನ್ನನ್ನು ತಿರುಗಿಸಲು ಸಮರ್ಥನಾದವನನ್ನು ಕಡೆಗಣ್ಣೆಯಾಗಿ ಮಾಡಿರಿ."

ಕಲ್ಪ್ಯತಾಂ ನೇತ್ರಕಾರ್ಯೇ ಯಃ ಶಕ್ತಃ ಸ್ಯಾದ್ಭ್ರಮಣೇ ಮಮ ।
ತತಸ್ತು ನಿರ್ಗತೌ ದೇವೌ ಕೂರ್ಮಶೇಷೌ ಮಹಾಬಲೌ ॥೨೬॥

ವಿಷ್ಣೋರ್ಭಾಗೌ ಚತುರ್ಥಾಂಶಾದ್ಧರಣ್ಯಾ ಧಾರಣೇ ಸ್ಥಿತೌ ।
ಊಚತುರ್ಗರ್ವಸಂಯುಕ್ತಂ ವಚನಂ ಶೇಷಕಚ್ಛಪೌ ॥೨೭॥

॥ ಕೂರ್ಮ ಉವಾಚ ॥

ತ್ರೈಲೋಕ್ಯಧಾರಣೇ ನಾಪಿ ನ ಗ್ಲಾನಿರ್ಮಮ ಜಾಯತೇ ।
ಕಿಮು ಮಂದರಕಾತ್ಕ್ಷುದ್ರಾದ್ಗುಟಿಕಾಸಂನಿಭಾದಿಹ ॥೨೮॥

॥ ಶೇಷ ಉವಾಚ ॥

ಬ್ರಹ್ಮಾಂಡವೇಷ್ಟನೇನಾಪಿ ಬ್ರಹ್ಮಾಂಡಮಥನೇನ ವಾ ।
ನ ಮೇ ಗ್ಲಾನಿರ್ಭವೇದ್ದೇಹೇ ಕಿಮು ಮಂದರವರ್ತನೇ ॥೨೯॥

ತತ ಉತ್ಪಾಟ್ಯ ತಂ ಶೈಲಂ ತತ್ಕ್ಷಣಾತ್ಕ್ಷೀರಸಾಗರೇ ।
ಚಿಕ್ಷೇಪ ಲೀಲಯಾ ನಾಗಃ ಕೂರ್ಮಶ್ಚಾಧಃ ಸ್ಥಿತಸ್ತದಾ ॥೩೦॥

---

೨೬-೨೭. ವಿಷ್ಣುವಿನ ಅಂಶದ ಕಾಲುಪಾಲಿನಿಂದ ಕೂಡಿ ಭೂಗೋಳವನ್ನು ಹೊತ್ತುಕೊಂಡಿದ್ದ ಮಹಾಬಲಶಾಲಿಗಳಾದ ಆದಿಕೂರ್ಮನೂ ಆದಿಶೇಷನೂ ತರುವಾಯ ಹೊರಟುಬಂದರು. ಗರ್ವವುಳ್ಳ ಮಂದರಶೈಲವನ್ನು ನೋಡಿ ಅವರಿಬ್ಬರೂ ಹೇಳಿದರು.

೨೮. ಆದಿಕೂರ್ಮನು ಹೇಳಿದನು.—ಮೂರು ಲೋಕವನ್ನು ಹೊತ್ತರೂ ನನಗೆ ಆಯಾಸವಾಗುವುದಿಲ್ಲ. ಹೀಗಿರುವಾಗ ಒಂದು ಗುಳಿಗೆಯಂತಿರುವ ಕ್ಷುದ್ರವಾದ ಈ ಮಂದರಪರ್ವತವನ್ನು ಹೊತ್ತುಕೊಂಡರೆ ಏನು ಮಹಾಶ್ರಮವಾದೀತು ?

೨೯. ಆದಿಶೇಷನು ಹೇಳಿದನು.—ಬ್ರಹ್ಮಾಂಡಮಂಡಲಕ್ಕೇ ಸುತ್ತಲಿ, ಅದರಿಂದಲೇ ಕಡೆಯಲಿ, ನನ್ನ ದೇಹದಲ್ಲಿ ಶ್ರಮವೇ ತಲೆದೋರುವುದಿಲ್ಲ. ಇನ್ನು ಈ ಮಂದರಗಿರಿಯಿಂದ ನನಗೆ ಬಳಲಿಕೆಯಾದೀತೆ ?

೩೦. ಬಳಿಕ ಆದಿಶೇಷನು ಆ ಗಳಿಗೆಯಲ್ಲೇ ಆ ಪರ್ವತವನ್ನು ಕಿತ್ತು ಕ್ಷೀರಸಾಗರದಲ್ಲಿ ಅನಾಯಾಸದಿಂದ ಹಾಕಿದನು. ಆದಿಕೂರ್ಮನೂ ಪರ್ವತದ ತಳಭಾಗದಲ್ಲಿ ನಿಂತನು.

ನಿರಾಧಾರಂ ಯದಾ ಶೈಲಂ ನ ಶೇಕುರ್ದೇವದಾನವಾಃ ।
ಮಂದರಭ್ರಾಮಣಂ ಕರ್ತುಂ ಕ್ಷೀರೋದಮಥನೇ ತದಾ ॥೩೧॥

ನಾರಾಯಣನಿವಾಸಂ ತೇ ಜಗ್ಮುರ್ಬಲಿಸಮನ್ವಿತಾಃ ।
ಯತ್ರಾಸ್ತೇ ದೇವದೇವೇಶಃ ಸ್ವಯಮೇವ ಜನಾರ್ದನಃ ॥೩೨॥

ತತ್ರಾಪಶ್ಯಂತ ತಂ ದೇವಂ ಸಿತಪದ್ಮಪ್ರಭಂ ಶುಭಂ ।
ಯೋಗನಿದ್ರಾಸುನಿರತಂ ಪೀತವಾಸಸಮಚ್ಯುತಂ ॥೩೩॥

ಹಾರಕೇಯೂರನದ್ಧಾಂಗಮಹಿಪರ್ಯಂಕಸಂಸ್ಥಿತಂ ।
ಪಾದಪದ್ಮೇನ ಪದ್ಮಾಯಾಃ ಸ್ಪೃಶಂತಂ ನಾಭಿಮಂಡಲಂ ॥೩೪॥

ಸ್ವಪಕ್ಷವ್ಯಜನೇನಾಥ ವೀಜ್ಯಮಾನಂ ಗರುತ್ಮತಾ ।
ಸ್ತೂಯಮಾನಂ ಸಮಂತಾಚ್ಚ ಸಿದ್ಧಚಾರಣಕಿನ್ನರೈಃ ॥೩೫॥

---

೩೧-೩೨. ಮೇಲ್ಗಡೆಯಲ್ಲಿ ಆಧಾರವಾವುದೂ ಇಲ್ಲದೆ ಹೋಗಲು, ಕ್ಷೀರ ಸಮುದ್ರವನ್ನು ಕಡೆಯತೊಡಗಿದ್ದ ದೇವಾಸುರರಿಗೆ ಮಂದರಪರ್ವತವು ತಿರುಗು ವಂತೆ ಮಾಡುವುದಕ್ಕಾಗದೆ ಹೋಯಿತು. ಅವರು ಬಲಿಚಕ್ರವರ್ತಿಯೊಡಗೂಡಿ ದೇವದೇವೇಶ್ವರನಾದ ಮಹಾವಿಷ್ಣುವಿದ್ದ ಕಡೆಗೆ ಹೋದರು.

೩೩. ಅಲ್ಲಿ ಅವರು ಪುಂಡರೀಕದ ಕಾಂತಿಯುಳ್ಳವನೂ, ಮಂಗಳ ಮಯನೂ, ಯೋಗನಿದ್ರಾನಿರತನೂ, ಪೀತಾಂಬರಧಾರಿಯೂ ಆದ ಶ್ರೀಮ ನ್ನಾರಾಯಣನನ್ನು ಕಂಡರು.

೩೪. ಆತನು ಹಾರವನ್ನೂ ತೋಳುಬಳೆಗಳನ್ನೂ ಧರಿಸಿ ಸರ್ಪಶಯನದ ಮೇಲೆ ಪವಡಿಸಿದ್ದನು. ಅವನ ಅಡಿದಾವರೆಯು ಲಕ್ಷ್ಮೀದೇವಿಯ ನಾಭಿಸ್ಥಲವನ್ನು ಸೋಕುತ್ತಿತ್ತು.

೩೫. ಗರುತ್ಮಂತನು ತನ್ನ ರೆಕ್ಕೆಗಳಿಂದ ಅವನಿಗೆ ಗಾಳಿ ಬೀಸುತ್ತಿದ್ದನು. ಸಿದ್ಧರು, ಚಾರಣರು ಮತ್ತು ಪನ್ನಗರು ಸುತ್ತಲೂ ನಿಂತು ಸ್ತುತಿಸುತ್ತಿದ್ದರು.

ಆಮ್ನಾಯೈರ್ಮೂರ್ತಿಮದ್ಭಿಶ್ಚ ಸ್ತೂಯಮಾನಂ ಸಮಂತತಃ ।
ಸವ್ಯಬಾಹೂಪಧಾನಂ ತಂ ತುಷ್ಟುವುರ್ದೇವದಾನವಾಃ ॥೩೬॥

ನಮೋ ಲೋಕತ್ರಯಾಧ್ಯಕ್ಷ ತೇಜಸಾ ಜಿತಭಾಸ್ಕರ ।
ನಮೋ ವಿಷ್ಣೋ ನಮೋ ಜಿಷ್ಣೋ ನಮಸ್ತೇ ಕೈಟಭಾರ್ದನ ॥೩೭॥

॥ ದೇವದಾನವಾ ಊಚುಃ ॥

ನಮಃ ಸರ್ಗಕ್ರಿಯಾಕರ್ತ್ರೇ ಜಗತ್ಪಾಲಯತೇ ನಮಃ ।
ರುದ್ರರೂಪಾಯ ಶರ್ವಾಯ ನಮಃ ಸಂಹಾರಕಾರಿಣೇ ॥೩೮॥

ನಮಃ ಶೂಲಾಯುಧಾಧೃಷ್ಯ ನಮೋ ದಾನವಘಾತಿನೇ ।
ನಮಃ ಕ್ರಮತ್ರಯಾಕ್ರಾಂತತ್ರೈಲೋಕ್ಯಾಯಾಭವಾಯ ಚ ॥೩೯॥

---

೩೬. ವೇದಪುರುಷರು ನಾಲ್ಕುಕಡೆಯೂ ನಿಂತು ಸ್ತೋತ್ರಮಾಡುತ್ತಿದ್ದರು. ಎಡಗೈಯನ್ನು ತಲೆದಿಂಬಾಗಿ ಮಾಡಿಕೊಂಡು ಶಯನಿಸಿದ್ದ ಭಗವಂತನನ್ನು ದೇವತೆಗಳೂ ದಾನವರೂ ಸ್ತುತಿಸಿದರು.

೩೭. ದೇವತೆಗಳೂ ದಾನವರು ಹೇಳಿದರು.—ತೇಜಸ್ಸಿನಲ್ಲಿ ಸೂರ್ಯನನ್ನು ಮೀರಿಸಿದ ಮೂರುಲೋಕಗಳ ಒಡೆಯಾ, ನಿನಗೆ ನಮಸ್ಕಾರ. ಎಲೈ ವಿಷ್ಣೋ, ನಿನಗೆ ನಮಸ್ಕಾರ, ಓ ಜಯಶೀಲನೇ, ನಿನಗೆ ನಮಸ್ಕಾರ. ಕೈಟಭವೈರೀ, ನಿನಗೆ ನಮಸ್ಕಾರ.

೩೮. ಸೃಷ್ಟಿಕರ್ತನಿಗೆ ನಮಸ್ಕಾರ. ಜಗದ್ರಕ್ಷಕನಿಗೆ ನಮಸ್ಕಾರ. ಘೋರವಾದ ರುದ್ರರೂಪದಿಂದ ವಿಶ್ವವನ್ನು ಸಂಹರಿಸುವಾತನಿಗೆ ನಮಸ್ಕಾರ.

೩೯. ಶೂಲಾಯುಧವನ್ನು ಹಿಡಿದವನೇ, ನಿನಗೆ ನಮಸ್ಕಾರ. ಎದುರಿಸಲಾಗದವನೇ, ದಾನವಾಂತಕನಾದ ನಿನಗೆ ನಮಸ್ಕಾರ. ಮೂರು ಹೆಜ್ಜೆಗಳಿಂದ ಮೂರು ಲೋಕಗಳನ್ನೂ ಆಕ್ರಮಿಸಿದ, ಸಂಸಾರ ಸಂಬಂಧರಹಿತನಾದ ನಿನಗೆ ನಮಸ್ಕಾರ.

**ನಮಃ ಪ್ರಚಂಡದೈತ್ಯೇಂದ್ರತೂಲಕಾಲಮಹಾನಲ |**
**ನಮೋ ನಾಭಿಹ್ರದೋದ್ಭೂತಪದ್ಮಗರ್ಭ ಮಹಾಬಲ ||೪೦||**

**ಪದ್ಮಭೂತಮಹಾಭೂತಕರ್ತ್ರೇ ಹರ್ತ್ರೇ ಜಗತ್ಪ್ರಿಯ |**
**ಜನಿತಾಶೇಷಲೋಕೇಶ ಕ್ರಿಯಾಕಾರಣಕಾರಿಣೇ ||೪೧||**

**ಅಮರಾರಿವಿನಾಶಾಯ ಮಹಾಸಮರಶಾಲಿನೇ |**
**ಲಕ್ಷ್ಮೀಮುಖಾಬ್ಜಮಧುಪ ನಮಃ ಕೀರ್ತಿನಿವಾಸಿನೇ ||೪೨||**

**ಅಸ್ಮಾಕಮಮರತ್ವಾಯ ಧ್ರಿಯತಾಂ ಧ್ರಿಯತಾಮಯಂ |**
**ಮಂದರಃ ಸರ್ವಶೈಲಾನಾಮಯುತಾಯುತವಿಸ್ತೃತಃ ||೪೩||**

---

೪೦. ಪ್ರಚಂಡರಾದ ದೈತ್ಯವೀರರೆಂಬ ಹತ್ತಿಗೆ ಪ್ರಳಯಾಗ್ನಿಯಾದವನೇ, ನಿನಗೆ ನಮಸ್ಕಾರ. ಹೊಕ್ಕಳೆಂಬ ಕೊಳದಲ್ಲಿ ಬ್ರಹ್ಮನೆಂಬ ಕಮಲವನ್ನು ಸೃಜಿಸಿದವನೇ, ಅಸದೃಶಪರಾಕ್ರಮನೇ, ನಿನಗೆ ನಮಸ್ಕಾರ.

೪೧. ಬ್ರಹ್ಮನನ್ನೂ ಮಹಾಭೂತಗಳನ್ನೂ ನಿರ್ಮಿಸಿದ, ಜಗತ್ತನ್ನು ಲಯಗೊಳಿಸುವ ನಿನಗೆ ನಮಸ್ಕಾರ. ಎಲೈ ಜಗತ್ಪ್ರಿಯನೇ, ಸೃಷ್ಟಿಸಿದ ಎಲ್ಲ ಲೋಕಗಳನ್ನೂ ರಕ್ಷಿಸುವವನೇ, ಸಕಲಜಂತುಗಳನ್ನೂ ವಿವಿಧಕಾರ್ಯಗಳಲ್ಲಿ ಪ್ರೇರಿಸುವ ನಿನಗೆ ನಮಸ್ಕಾರ.

೪೨. ಲಕ್ಷ್ಮೀದೇವಿಯ ಮುಖವೆಂಬ ತಾವರೆಯ ದುಂಬಿಯಂತಿರುವ ಎಲೈ ದೇವಾ, ದೈತ್ಯನಾಶಕನೂ, ಮಹಾ ಸಂಗ್ರಾಮವೀರನೂ, ಕೀರ್ತಿವಂತನೂ ಆದ ನಿನಗೆ ನಮಸ್ಕಾರ.

೪೩. ಎಲ್ಲ ಬೆಟ್ಟಗಳಿಗಿಂತ ಲಕ್ಷಪಾಲು ದೊಡ್ಡದಾದ ಮಂದರಪರ್ವತವನ್ನು ದೃಢವಾಗಿ ನಿಲ್ಲಿಸು ನಿಲ್ಲಿಸು. ಅಮೃತೋತ್ಪಾದನೆಗೆ ಸಹಾಯಮಾಡಿ ನಮ್ಮನ್ನು ಅಮರರೆನಿಸು.

ಅನಂತಬಲಬಾಹುಭ್ಯಾಮವಷ್ಟಭ್ಯೈಕಪಾಣಿನಾ ।
ಮಥ್ಯತಾಮಮೃತಂ ದೇವ ಸ್ವಧಾಸ್ವಾಹಾರ್ಥಕಾಮಿನಾಂ ॥೪೪॥

ತತಃ ಶ್ರುತ್ವಾ ಸ ಭಗವಾನ್ ಸ್ತೋತ್ರಪೂರ್ವಂ ವಚಸ್ತದಾ ।
ವಿಹಾಯ ಯೋಗನಿದ್ರಾಂ ತಾಮುವಾಚ ಮಧುಸೂದನಃ ॥೪೫॥

॥ ಶ್ರೀ ಭಗವಾನುವಾಚ ॥

ಸ್ವಾಗತಂ ವಿಬುಧಾಸ್ಸರ್ವೇ ಕಿಮಾಗಮನಕಾರಣಂ ।
ಯಸ್ಮಾತ್ಕಾರ್ಯಾದಿಹ ಪ್ರಾಪ್ತಾಸ್ತದ್ಬ್ರೂತ ವಿಗತಜ್ವರಾಃ ॥೪೬॥

ನಾರಾಯಣೇನೈವಮುಕ್ತಾಃ ಪ್ರೋಚುಸ್ತತ್ರ ದಿವೌಕಸಃ ।
ಅಮರತ್ವಾಯ ದೇವೇಶ ಮಥ್ಯಮಾನೇ ಮಹೋದಧೌ ॥೪೭॥

ಯಥಾಽಮೃತಂ ಸ್ಯಾದ್ದೇವೇಶ ತಥಾ ನಃ ಕುರು ಮಾಧವ ।
ತ್ವಯಾ ವಿನಾ ನ ತಚ್ಛಕ್ಯಮಸ್ಮಾಭಿಃ ಕೈಟಭಾರ್ದನ ॥೪೮॥

---

೪೪. ದೇವಾ, ಅತ್ಯಂತ ಬಲವಾದ ನಿನ್ನ ಎರಡು ತೋಳುಗಳಿಂದ ಮಂದರವನ್ನು ಹಿಡಿದುಕೊಂಡು ಒಂದು ಕೈಯಿಂದ ಅಮೃತವನ್ನು ಕಡೆ. ಹವ್ಯಕವ್ಯಗಳನ್ನು ಭುಂಜಿಸತಕ್ಕ ನಮಗಾಗಿ ಈ ಕಾರ್ಯವನ್ನು ನಡೆಸಿಕೊಡು.

೪೫. ಸ್ತೋತ್ರಪೂರ್ವಕವಾದ ದೇವತೆಗಳ ಪ್ರಾರ್ಥನೆಯನ್ನು ಕೇಳಿದ ಬಳಿಕ ಮಹಾವಿಷ್ಣು ಯೋಗನಿದ್ರೆಯನ್ನು ತೊರೆದೆದ್ದು ಇಂತೆಂದನು.

೪೬. ಭಗವಂತನು ಹೇಳಿದನು.—ಎಲೈ ದೇವತೆಗಳಿರಾ, ನಿಮಗೆ ಸುಖಾಗಮನವೇ ? ಬಂದ ಕಾರಣವೇನು ? ಯಾವ ಕಾರ್ಯದ ಸಲುವಾಗಿ ಇಲ್ಲಿ ಬಂದಿರಿ? ಚಿಂತೆಯಿಲ್ಲದೆ ಹೇಳಿರಿ.

೪೭-೪೮. ನಾರಾಯಣನು ಹೀಗೆ ಹೇಳಲು ದೇವತೆಗಳು ಉತ್ತರವಿತ್ತರು. "ದೇವೇಶಾ, ನಾವು ಮರಣಾತೀತರಾಗಬೇಕೆಂದು ಕ್ಷೀರಸಮುದ್ರವನ್ನು ಕಡೆಯುತ್ತಿದ್ದೇವೆ. ಮಾಧವಾ, ಅದರಲ್ಲಿ ಅಮೃತವು ಹುಟ್ಟುವಂತೆ ನೀನು ಕರುಣಿಸಬೇಕು. ಎಲೈ ಕೈಟಭಾರೀ, ನೀನಿಲ್ಲದಿದ್ದರೆ ನಮ್ಮಿಂದ ಆ ಕಾರ್ಯವು ಸಾಧ್ಯವಿಲ್ಲ. ಆದುದರಿಂದ ಓ ನಾಥಾ, ಅದರ ಪ್ರಾಪ್ತಿಗಾಗಿ ನಮ್ಮ ಮುಂದಾಳಾಗಿ ನೀನು ನಿಲ್ಲು."

ಪ್ರಾಪ್ತುಂ ತದಮೃತಂ ನಾಥ ತತೋಽಗ್ರೇ ಭವ ನೋ ವಿಭೋ ।
ಇತ್ಯುಕ್ತಶ್ಚ ತತೋ ವಿಷ್ಣುರಪ್ರಧೃಷ್ಯೋಽರಿಮರ್ದನಃ ॥೪೯॥

ಜಗಾಮ ದೇವೈಃ ಸಹಿತೋ ಯತ್ರಾಸೌ ಮಂದರಾಚಲಃ ।
ವೇಷ್ಟಿತೋ ಭೋಗಿಭೋಗೇನ ಧೃತಶ್ಚಾಮರದಾನವೈಃ ॥೫೦॥

ವಿಷಭೀತಾಸ್ತತೋ ದೇವಾ ಯತಃ ಪುಚ್ಛಂ ತತಃ ಸ್ಥಿತಾಃ ।
ಮುಖತೋ ದೈತ್ಯಸಂಘಾಸ್ತು ಸೈಂಹಿಕೇಯಪುರಸ್ಸರಾಃ ॥೫೧॥

ಸಹಸ್ರವದನಂ ಚಾಸ್ಯ ಶಿರಃ ಸವ್ಯೇನ ಪಾಣಿನಾ ।
ದಕ್ಷಿಣೇನ ಬಲಿರ್ದೇಹಂ ನಾಗಸ್ಯಾಽಽಕೃಷ್ಟವಾಂಸ್ತದಾ ॥೫೨॥

ದಧಾರಾಮೃತಮಂಥಾನಂ ಮಂದರಂ ಚಾರುಕಂದರಂ ।
ನಾರಾಯಣಃ ಸ ಭಗವಾನ್ ಭುಜಯುಗ್ಮದ್ವಯೇನ ತು ॥೫೩॥

---

೪೯-೫೦. ದೇವತೆಗಳು ಹೀಗೆ ಪ್ರಾರ್ಥಿಸಲು ಅಸಮಾನ ಸಾಹಸಿಯೂ, ಶತ್ರುನಾಶಕನೂ ಆದ ಗೋವಿಂದನು ಅವರೆಲ್ಲರೊಡಗೂಡಿ ಮಂದರಾಚಲವಿದ್ದಲ್ಲಿಗೆ ಹೋದನು. ಸುರಾಸುರರು ಅದಕ್ಕೆ ಆದಿಶೇಷನನ್ನು ಬಿಗಿದು ಹಿಡಿದು ನಿಂತಿದ್ದರು.

೫೧. ಬಳಿಕ ದೇವತೆಗಳು ವಿಷಕ್ಕೆ ಹೆದರಿ ಸರ್ಪರಾಜನ ಬಾಲದ ಕಡೆಗೆ ಹೋದರು. ರಾಹು ಮೊದಲಾದ ದೈತ್ಯರಾದರೋ ಮುಖದ ಕಡೆಯೇ ನಿಂತರು.

೫೨. ಆಗ ಸಾವಿರ ಮುಖಗಳುಳ್ಳ ಆದಿಶೇಷನ ತಲೆಯನ್ನು ಎಡಗೈಯಿಂದಲೂ, ದೇಹವನ್ನು ಬಲಗೈಯಿಂದಲೂ ಹಿಡಿದು ಬಲಿಚಕ್ರವರ್ತಿಯು ಎಳೆದನು.

೫೩. ಷಡ್ಗುಣಪರಿಪೂರ್ಣನಾದ ಶ್ರೀಮನ್ನಾರಾಯಣನು ಸುಂದರವಾದ ಗುಹೆಗಳಿಂದ ಕೂಡಿದ, ಅಮೃತವನ್ನು ಕಡೆಯುವ ಕಡೆಗೋಲಾದ ಮಂದರಪರ್ವತವನ್ನು ತನ್ನ ಎರಡು ಕೈಗಳಿಂದಲೂ ಬಲವಾಗಿ ಹಿಡಿದುಕೊಂಡನು.

ತತೋ ದೇವಾಸುರೈಃ ಸರ್ವೈರ್ಜಯಶಬ್ದಪುರಸ್ಸರಂ ।
ದಿವ್ಯಂ ವರ್ಷಶತಂ ಸಾಗ್ರಂ ಮಥಿತಃ ಕ್ಷೀರಸಾಗರಃ ॥೫೪॥

ತತಃ ಶ್ರಾಂತಾಸ್ತು ತೇ ಸರ್ವೇ ದೇವಾ ದೈತ್ಯಪುರಸ್ಸರಾಃ ।
ಶ್ರಾಂತೇಷು ತೇಷು ದೇವೇಂದ್ರೋ ಮೇಘೋ ಭೂತ್ವಾಂಽಬುಶೀಕರಾನ್ ॥

ವವರ್ಷಾಮೃತಕಲ್ಪಾಂಸ್ತಾನ್ ವವೌ ವಾಯುಶ್ಚ ಶೀತಲಃ ।
ಭಗ್ನಪ್ರಾಯೇಷು ದೇವೇಷು ಶ್ರಾಂತೇಷು ಕಮಲಾಸನಃ ॥೫೬॥

ಮಥ್ಯತಾಂ ಮಥ್ಯತಾಂ ಸಿಂಧುರಿತ್ಯುವಾಚ ಪುನಃ ಪುನಃ ।
ಅವಶ್ಯಮುದ್ಯೋಗವತಾಂ ಶ್ರೀರಪಾರಾ ಭವೇತ್ಸದಾ ॥೫೭॥

ಬ್ರಹ್ಮಪ್ರೋತ್ಸಾಹಿತಾ ದೇವಾ ಮಮಂಥುಃ ಪುನರಂಬುಧಿಂ ।
ಭ್ರಾಮ್ಯಮಾಣೇ ತತಶ್ಶೈಲೇ ಯೋಜನಾಯುತಶೇಖರೇ ॥೫೮॥

---

೫೪. ಬಳಿಕ ದೇವಾಸುರರೆಲ್ಲರೂ ಜಯಕಾರಗಳನ್ನು ಮಾಡುತ್ತ ಪೂರ್ಣವಾಗಿ ಒಂದುನೂರು ದಿವ್ಯವರ್ಷಗಳ ಕಾಲ ಕ್ಷೀರಸಾಗರವನ್ನು ಕಡೆದರು.

೫೫. ಆಮೇಲೆ ದೈತ್ಯರೂ ದಾನವರೂ ಬಹಳ ಬಳಲಿದರು. ಅದನ್ನು ನೋಡಿ ದೇವೇಂದ್ರನು ಮೋಡದ ರೂಪದಿಂದ ಅಮೃತದಂತಹ ಮಳೆಯ ತುಂತುರುಗಳನ್ನು ಸುರಿಸಿದನು. ವಾಯು ತಣ್ಣಗೆ ಬೀಸಿದನು.

೫೬-೫೭. ದೇವತೆಗಳು ಬಳಲಿಕೆಯಿಂದ ಸೋತು ನಿರಾಶರಾದರು. ಆಗ ಬ್ರಹ್ಮನು, “ ಕಡೆಯಿರಿ, ಸಮುದ್ರವನ್ನು ಕಡೆಯಿರಿ. ಉದ್ಯೋಗಶೀಲರಿಗೆ ಅಪಾರವಾದ ಸಂಪತ್ತು ತಪ್ಪದೆ ಬಂದೇ ಬರುವುದು ” ಎಂದು ಮೇಲೆ ಮೇಲೆ ಹೇಳುತ್ತಿದ್ದನು.

೫೮-೫೯. ಬ್ರಹ್ಮನ ಪ್ರೋತ್ಸಾಹದಿಂದ ದೇವತೆಗಳು ಮತ್ತೆ ಹಾಲ್ಗಡಲನ್ನು ಕಡೆದರು. ಶಿಖರಗಳು ಹತ್ತಾರು ಸಾವಿರ ಯೋಜನ ಎತ್ತರವಾಗಿದ್ದ ಆ ಮಂದರ ಪರ್ವತವು ತಿರುಗುತ್ತಿರಲು ಆನೆಗಳ ಹಿಂಡೂ, ವರಾಹ ಶರಭಾದಿ ಮೃಗಗಳೂ,

ನಿಪೇತುರ್ಹಸ್ತಿಯೂಥಾನಿ ವರಾಹಶರಭಾದಯಃ ।
ಶ್ವಾಪದಾಯುತಲಕ್ಷಾಣಿ ತಥಾ ಪುಷ್ಪಫಲದ್ರುಮಾಃ ॥೫೯॥

ತತಃ ಫಲಾನಾಂ ವೀರ್ಯೇಣ ಪುಷ್ಪೌಷಧಿರಸೇನ ಚ ।
ಕ್ಷೀರಮಂಬುಧಿಜಂ ಸರ್ವಂ ದಧಿರೂಪಮಜಾಯತ ॥೬೦॥

ತತಸ್ತು ಸರ್ವಜೀವೇಷು ಚೂರ್ಣಿತೇಷು ಸಹಸ್ರಶಃ ।
ತದಂಬುಮೇದಸೋತ್ಪನ್ನಾ ವಾರುಣೀ ಸಮಪದ್ಯತ ॥೬೧॥

ವಾರುಣೀಗಂಧಮಾಘ್ರಾಯ ಮುಮುದುರ್ದೇವದಾನವಾಃ ।
ತದಾಸ್ವಾದೇನ ಬಲಿನೋ ದೇವದೈತ್ಯಾದಯೋಽಭವನ್ ॥೬೨॥

ತತೋಽತಿವೇಗಾಜ್ಜಗೃಹುರ್ನಾಗೇಂದ್ರಂ ಸರ್ವತೋಽಸುರಾಃ ।
ಮಂಥಾನಂ ಮಂಥಯುಷ್ಟಿಸ್ತು ಮೇರುಸ್ತತ್ರಾಽಚಲೋಽಭವತ್ ॥೬೩॥

---

ಲಕ್ಷಗಟ್ಟಲೆಯ ದುಷ್ಟ ಜಂತುಗಳೂ, ಹೂಹಣ್ಣುಗಳ ಮರಗಳೂ ಹೊರಕ್ಕೆ ಬಂದು ಸಾಗರದಲ್ಲಿ ಬಿದ್ದುವು.

೬೦. ಬಳಿಕ ಹಣ್ಣುಗಳ ರಸದಿಂದಲೂ ಹೂಗಳ ಮತ್ತು ಗಿಡಮೂಲಿಕೆಗಳ ರಸದಿಂದಲೂ ಸಮುದ್ರದ ಹಾಲೆಲ್ಲವೂ ಕೆಸರಿನಂತಾಯಿತು.

೬೧. ಸಕಲಜೀವಜಂತುಗಳೂ ಸಾವಿರಾರು ಪಾಲಾಗಿ ಪುಡಿಪುಡಿಯಾದುವು. ಆ ನೀರು, ಮೇದಸ್ಸು ಇವೆಲ್ಲ ಸೇರಿ ಮದ್ಯವು ಉತ್ಪನ್ನವಾಯಿತು.

೬೨. ಮದ್ಯದ ಗಂಧವನ್ನು ಆಘ್ರಾಣಿಸಿ ದೇವತೆಗಳೂ ದಾನವರೂ ಸಂತುಷ್ಟರಾದರು. ಅದನ್ನು ಸವಿದು ಅವರು ಬಲವನ್ನು ಗಳಿಸಿದರು.

೬೩. ಬಳಿಕ ಅಸುರರು ವಾಸುಕಿಯನ್ನು ಎಲ್ಲ ಕಡೆಗಳಲ್ಲೂ ಹಿಡಿದುಕೊಂಡು ಬಹು ವೇಗದಿಂದ ಮಂದರಪರ್ವತವನ್ನು ತಿರುಗಿಸಿದರು. ಮೇರುಗಿರಿ ಮಂತಿನ ಕೋಲಾದನು.

ಅಭವಚ್ಚಾಗ್ರತೋ ವಿಷ್ಣುರ್ಭುಜವುಂದರಬಂಧನಃ ।
ಸ ವಾಸುಕಿಫಣಾಲಗ್ನಪಾಣಿಃ ಕೃಷ್ಣೋ ವ್ಯರಾಜತ ||೬೪||

ಯಥಾ ನೀಲೋತ್ಪಲೈರ್ಯುಕ್ತೋ ಬ್ರಹ್ಮದಂಡೋಽತಿವಿಸ್ತರಃ ।
ಧ್ವನಿರ್ಘೋಷಸಹಸ್ರಸ್ಯ ಜಲಧೇರುತ್ಥಿತಸ್ತದಾ ||೬೫||

ಭಾಗೇ ದ್ವಿತೀಯೇ ಮಘವಾನಾದಿತ್ಯಸ್ತು ತತಃ ಪರಂ ।
ತತೋ ರುದ್ರಾ ಮಹೋತ್ಸಾಹಾ ವಸವೋ ಗುಹ್ಯಕಾದಯಃ ||೬೬||

ಪುರತೋ ವಿಪ್ರಚಿತ್ತಿಶ್ಚ ನಮುಚಿರ್ವೃತ್ರಶಂಬರೌ ।
ದ್ವಿಮೂರ್ಧಾ ವಜ್ರದಂಷ್ಟ್ರಶ್ಚ ಸೈಂಹಿಕೇಯೋ ಬಲಿಸ್ತಥಾ ||೬೭||

ಏತೇ ಚಾನ್ಯೇ ಚ ಬಹವೋ ಮುಖಭಾಗಮುಪಸ್ಥಿತಾಃ ।
ಮಮಂಥುರಂಬುಧಿಂ ದೃಪ್ತಾ ಬಲತೇಜೋವಿಭೂಷಿತಾಃ ||೬೮||

---

೬೪-೬೫. ಮುಂದುಗಡೆ ವಿಷ್ಣು ತೋಳುಗಳಿಂದ ಮಂದರಪರ್ವತವನ್ನು ಬಲವಾಗಿ ಹಿಡಿದು ನಿಂತಿದ್ದನು. ವಾಸುಕಿಯ ಹೆಡೆಗಳು ಅವನ ಕೈಗೆ ಸೋಕುತ್ತಿರಲು, ಅವನು ನೀಲೋತ್ಪಲಗಳಿಂದ ಕೂಡಿದ ಅತಿಮಹತ್ತಾದ ಬ್ರಹ್ಮದಂಡದಂತೆ ವಿರಾಜಿಸಿದನು. ಆಗ ಸಮುದ್ರದಿಂದ ಸಾವಿರಾರು ಮೋಡಗಳು ಗುಡುಗಿದಂತೆ ಅಬ್ಬರವು ಎದ್ದಿತು.

೬೬. ವಾಸುಕಿಯ ಹಿಂಭಾಗದಲ್ಲಿ ಇಂದ್ರನೂ, ಅಲ್ಲಿಂದ ಮುಂದೆ ಕ್ರಮವಾಗಿ ಆದಿತ್ಯರೂ, ಏಕಾದಶರುದ್ರರೂ, ಉತ್ಸಾಹಶಾಲಿಗಳಾದ ಅಷ್ಟವಸುಗಳೂ, ಗುಹ್ಯಕರೂ ನಿಂತಿದ್ದರು.

೬೭-೬೮. ವಿಪ್ರಚಿತ್ತಿ, ನಮುಚಿ, ವೃತ್ರ, ಶಂಬರ, ದ್ವಿಮೂರ್ಧ, ವಜ್ರದಂಷ್ಟ್ರ, ಸೈಂಹಿಕೇಯ, ಬಲಿ ಮುಂತಾದ ಹಲವರು ದೈತ್ಯರು ಮುಂದೆ ಮುಖದ ಬಳಿ ನಿಂತರು. ಇವರೆಲ್ಲರೂ ಮದದಿಂದಲೂ ಶಕ್ತಿಸಾಹಸಗಳಿಂದಲೂ ಕೂಡಿ ಸಮುದ್ರವನ್ನು ಕಡೆದರು.

ಬಭೂವಾತ್ರ ಮಹಾಘೋಷೋ ಮಹಾಮೇಘರವೋಪಮಃ ।
ಉದಧೇರ್ಮಥ್ಯಮಾನಸ್ಯ ಮಂದರೇಣ ಸುರಾಸುರೈಃ ॥೬೯॥

ತತ್ರ ನಾನಾಜಲಚರಾ ವಿನಿಷ್ಪಿಷ್ಟಾ ಮಹಾದ್ರಿಣಾ ।
ವಿಲಯಂ ಸಮುಪಾಜಗ್ಮುಃ ಶತಶೋಽಥ ಸಹಸ್ರಶಃ ॥೭೦॥

ವಾರುಣಾನಿ ಚ ಭೂತಾನಿ ವಿವಿಧಾನಿ ಮಹೀಧರಃ ।
ಪಾತಾಲತಲವಾಸೀನಿ ವಿಲಯಂ ಸಮುಪಾನಯತ್ ॥೭೧॥

ತಸ್ಮಿಂಶ್ಚ ಭ್ರಾಮ್ಯಮಾಣೇಽದ್ರೌ ಸಂಘೃಷ್ಯಾಶ್ಚ ಪರಸ್ಪರಂ ।
ನ್ಯಪತನ್ ಪತಗೋಪೇತಾಃ ಪರ್ವತಾಗ್ರಾನ್ಮಹಾದ್ರುಮಾಃ ॥೭೨॥

ತೇಷಾಂ ಸಂಘರ್ಷಣಾಚ್ಚಾಗ್ನಿರರ್ಚಿರ್ಭಿಃ ಪ್ರಜ್ವಲನ್ಮುಹುಃ ।
ವಿದ್ಯುದ್ಭಿರಿವ ನೀಲಾಭ್ರಮಾವೃಣೋನ್ಮಂದರಂ ಗಿರಿಂ ॥೭೩॥

---

೬೯. ಸುರಾಸುರರು ಸೇರಿ ಮಂದರಪರ್ವತದಿಂದ ಸಮುದ್ರವನ್ನು ಕಡೆಯುವಾಗ ಪ್ರಳಯಕಾಲದ ಗುಡುಗಿನಂತೆ ಮಹಾಘೋಷವುಂಟಾಯಿತು.

೭೦. ಆ ಮಹಾಪರ್ವತವು ಎತ್ತಿ ಬಿಸಾಡಿದ ಬಗೆಬಗೆಯ ಜಲಚರಗಳು ಲೆಕ್ಕವಿಲ್ಲದಷ್ಟು ಪ್ರಮಾಣದಲ್ಲಿ ಸತ್ತುವು.

೭೧. ಮಂದರಪರ್ವತವು ಪಾತಾಲತಲದಲ್ಲಿ ವಾಸಿಸುತ್ತಿದ್ದ ವರುಣನಿಗೆ ಸೇರಿದ ನಾನಾಬಗೆಯ ಪ್ರಾಣಿಗಳನ್ನು ನಾಶಗೊಳಿಸಿತು.

೭೨. ಆ ಬೆಟ್ಟವು ತಿರುಗುತ್ತಿರಲು ದೊಡ್ಡ ದೊಡ್ಡ ಮರಗಳು ಒಂದಕ್ಕೊಂದು ಡಿಕ್ಕಿಹೊಡೆದು ಪಕ್ಷಿಗಳ ಸಮೇತವಾಗಿ ಶಿಖರಾಗ್ರದಿಂದ ಉರುಳಿಬಿದ್ದುವು.

೭೩. ಅವುಗಳ ತಿಕ್ಕಾಟದಿಂದ ಆಡಿಗಡಿಗೆ ಬೆಂಕಿ ಹುಟ್ಟಿ, ಜ್ವಾಲೆಗಳನ್ನೆಬ್ಬಿಸಿ ಉರಿಯುತ್ತ, ಕರಿಯಮೋಡವನ್ನು ಮಿಂಚು ಆವರಿಸುವಂತೆ, ಮಂದರಪರ್ವತವನ್ನೆಲ್ಲ ವ್ಯಾಪಿಕೊಂಡಿತು.

ದದಾಹ ಕುಂಜರಾಂಶ್ಚೈವ ಸಿಂಹಾಂಶ್ಚೈವ ವಿನಿಃಸೃತಾನ್ ।
ವಿಗತಾಸೂನಿ ಸರ್ವಾಣಿ ಸತ್ತ್ವಾನಿ ವಿವಿಧಾನಿ ಚ ॥೭೪॥

ತಮಗ್ನಿಮಮರಶ್ರೇಷ್ಠಃ ಪ್ರದಹಂತಮಿತಸ್ತತಃ ।
ವಾರಿಣಾ ಮೇಘಜೇನೇಂದ್ರಃ ಶಮಯಾಮಾಸ ಸರ್ವತಃ ॥೭೫॥

ತತೋ ನಾನಾರಸಾಸ್ತತ್ರ ಸುಸ್ರುವುಃ ಸಾಗರಾಂಭಸಿ ।
ಮಹಾದ್ರುಮಾಣಾಂ ನಿರ್ಯಾಸಾ ಬಹವಶ್ಚೌಷಧೀರಸಾಃ ॥೭೬॥

ತೇಷಾಮಮೃತವೀರ್ಯಾಣಾಂ ರಸಾನಾಂ ಪಯಸೈವ ಚ ।
ಅಮರತ್ವಂ ಸುರಾ ಜಗ್ಮುಃ ಕಾಂಚನಚ್ಛವಿಸಂನಿಭಾಃ ॥೭೭॥

ಅಥ ತಸ್ಯ ಸಮುದ್ರಸ್ಯ ತಜ್ಜಾತಮುದಕಂ ಪಯಃ ।
ರಸಾಂತರೈರ್ವಿಮಿಶ್ರಂ ಚ ತತಃ ಕ್ಷೀರಾದಭೂದ್ಘೃತಂ ॥೭೮॥

---

೭೪. ಬೆಟ್ಟದ ಗುಹೆಗಳಿಂದ ಹೊರಕ್ಕೆ ಬಂದ ಆನೆಗಳನ್ನೂ, ಸಿಂಹಗಳನ್ನೂ, ನಿರ್ಜೀವವಾದ ಇನ್ನೂ ಇತರ ಪ್ರಾಣಿಗಳನ್ನೂ ಆ ದಳ್ಳುರಿಯು ಸುಟ್ಟಿತು.

೭೫. ದೇವರಾಜನಾದ ಇಂದ್ರನು ಮಳೆಯನ್ನು ಸುರಿಸಿ, ಎಲ್ಲಕಡೆಯೂ ಉರಿಯುತ್ತಿದ್ದ ಆ ಬೆಂಕಿಯನ್ನು ಆರಿಸಿದನು.

೭೬. ಬಳಿಕ ಬಗೆಬಗೆಯ ರಸಗಳೂ, ದೊಡ್ಡ ದೊಡ್ಡ ಮರಗಳ ದ್ರವಗಳೂ, ಹಲವು ಗಿಡಮೂಲಿಕೆಗಳ ರಸಗಳೂ ಸೋರಿ ಸಾಗರದ ನೀರಿಗೆ ಸೇರುತ್ತಿದ್ದುವು.

೭೭. ಅಮೃತದ ಶಕ್ತಿಯುಳ್ಳ ಆ ರಸಗಳಿಂದಲೂ ಹಾಲಿನಿಂದಲೂ ದೇವತೆಗಳಿಗೆ ಅಮರತ್ವವು ಪ್ರಾಪ್ತವಾಯಿತು. ಅವರ ದೇಹವು ಸುವರ್ಣದ ಕಾಂತಿಯಿಂದ ಕೂಡಿತು.

೭೮. ಆ ಸಮುದ್ರದ ಹಾಲು ಬೇರೆಬೇರೆ ರಸಗಳೊಡನೆ ಬೆರತ ಕಾರಣ ಅದರಿಂದ ತುಪ್ಪ ಹುಟ್ಟಿತು.

ತತೋ ಬ್ರಹ್ಮಾಣಮಾಸೀನಂ ದೇವಾ ವಚನಮಬ್ರುವನ್ ।
ಶ್ರಾಂತಾಃ ಸ್ಮ ಸುಭೃಶಂ ಬ್ರಹ್ಮನ್ನೋದ್ಭವತ್ಯಮೃತಂ ಚ ಯತ್ ॥೭೯॥

ಋತೇ ನಾರಾಯಣಾತ್ಸರ್ವೇ ದೈತ್ಯಾ ದೇವೋತ್ತಮಾಸ್ತಥಾ ।
ಚಿರಾಯಿತಮಿದಂ ಚಾಪಿ ಸಾಗರಸ್ಯ ತು ಮಂಥನಂ ॥೮೦॥

ತತೋ ನಾರಾಯಣಂ ದೇವಂ ಬ್ರಹ್ಮಾ ವಚನಮಬ್ರವೀತ್ ।
ವಿಧತ್ಸ್ವೈಷಾಂ ಬಲಂ ವಿಷ್ಣೋ ಭವಾನೇವ ಪರಾಯಣಂ ॥೮೧॥

॥ ವಿಷ್ಣುರುವಾಚ ॥

ಬಲಂ ದದಾಮಿ ಸರ್ವೇಷಾಂ ಕರ್ಮೈತದ್ಯೇ ಸಮಾಸ್ಥಿತಾಃ ।
ಕ್ಷೋಭ್ಯತಾಂ ಕ್ರಮಶಃ ಸರ್ವೈರ್ಮಂದರಃ ಪರಿವರ್ತ್ಯತಾಂ ॥೮೨॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇಽಮೃತಮಂಥನ
ಏಕೋನಪಂಚಾಶದಧಿಕದ್ವಿಶತತಮೋಽಧ್ಯಾಯಃ

---

೭೯-೮೦. ಬಳಿಕ ನಾರಾಯಣನೊಬ್ಬನನ್ನುಳಿದು ಮಿಕ್ಕ ದೇವತೆಗಳೂ ದೈತ್ಯವೀರರೂ ಬಹು ಬಳಲಿದರು. ಅವರು ಅಲ್ಲಿ ಕುಳಿತಿದ್ದ ಬ್ರಹ್ಮನನ್ನು ನೋಡಿ "ಬಹಳ ಆಯಾಸಗೊಂಡಿದ್ದೇವೆ. ಸಾಗರವನ್ನು ಕಡೆಯುವುದಕ್ಕೆ ತೊಡಗಿ ಬಹು ಕಾಲವಾಯಿತು. ಎಲೈ ಬ್ರಹ್ಮನೇ, ಇನ್ನೂ ಅಮೃತವು ಹುಟ್ಟಲಿಲ್ಲ" ಎಂದು ಹೇಳಿದರು.

೮೧. ತರುವಾಯ ಬ್ರಹ್ಮನು ಪೂಜ್ಯನಾದ ನಾರಾಯಣನಿಗಿಂತೆಂದನು. "ಸರ್ವವ್ಯಾಪಕನಾದ ಓ ದೇವಾ, ಇವರಿಗೆ ಬಲವನ್ನು ಕೊಡು. ಎಲ್ಲರಿಗೂ ನೀನೇ ಗತಿ".

೮೨. ವಿಷ್ಣುವು ಹೇಳಿದನು.—ಇಲ್ಲಿರುವವರಿಗೆಲ್ಲ ಬಲವನ್ನು ಕೊಡುತ್ತೇನೆ. ಇದು ನನ್ನ ಕೆಲಸ. ಕ್ರಮವರಿತು ಕಡೆಯಿರಿ. ಎಲ್ಲರೂ ಸೇರಿ ಮಂದರಪರ್ವತವನ್ನು ತಿರುಗಿಸಿರಿ.

## ಅಧ್ಯಾಯದ ಸಾರಾಂಶ

**ಈ ಅಧ್ಯಾಯದಲ್ಲಿ ಅಮೃತಮಂಥನದ ಕಥೆಯನ್ನು ವರ್ಣಿಸಿದೆ.**

ದೇವತೆಗಳಿಗೂ ದೈತ್ಯರಿಗೂ ಭಯಂಕರವಾದ ಯುದ್ಧವಾಯಿತು. ಹತರಾದ ಅಸುರರನ್ನೆಲ್ಲ ಶುಕ್ರಾಚಾರ್ಯನು ಮೃತಸಂಜೀವನೀ ವಿದ್ಯೆಯ ಪ್ರಭಾವದಿಂದ ಬದುಕಿಸುತ್ತಿದ್ದನು. ದೇವತೆಗಳಿಗೆ ಈ ವಿದ್ಯೆ ಬರುತ್ತಿರಲಿಲ್ಲ. ಆದುದರಿಂದ ಅವರು ದಿನದಿನಕ್ಕೂ ದುರ್ಬಲರಾದರು.

ಬ್ರಹ್ಮನ ಬುದ್ಧಿವಾದದಂತೆ ದೇವತೆಗಳು ದೈತ್ಯರೊಡನೆ ಸಂಧಿಯನ್ನು ಮಾಡಿಕೊಂಡರು. ಇಬ್ಬರೂ ಅಮರತ್ವಪ್ರಾಪ್ತಿಗಾಗಿ ಕ್ಷೀರಸಮುದ್ರವನ್ನು ಕಡೆದು ಅಮೃತವನ್ನು ಸಂಪಾದಿಸಬೇಕೆಂದು ನಿಶ್ಚಯಿಸಿದರು. ಮಂದರಪರ್ವತವನ್ನು ಕಡೆಗೋಲಾಗಿಯೂ ಆದಿಶೇಷನನ್ನು ಕಡೆಗಣ್ಣೆಯಾಗಿಯೂ ಮಾಡಿಕೊಂಡರು. ಆದಿಕೂರ್ಮನು ಆ ಮಹಾಪರ್ವತವು ಮುಳುಗದಂತೆ ಬೆನ್ನಿನಿಂದ ಎತ್ತಿಹಿಡಿಯುವುದಾಗಿ ಒಪ್ಪಿಕೊಂಡನು.

ಇಷ್ಟಾದರೂ ಮಂದರಪರ್ವತವು ನೆಟ್ಟಗೆ ನಿಂತು ತಿರುಗಲಾರದೆ ಹೋಯಿತು. ಏಕೆಂದರೆ ಮೇಲ್ಗಡೆಯಲ್ಲಿ ಅದಕ್ಕೆ ಆಸರೆಯೇನೂ ಇರಲಿಲ್ಲ. ಅದಕ್ಕಾಗಿ ಅವರೆಲ್ಲರೂ ನಾರಾಯಣನ ಬಳಿಗೆ ಹೋಗಿ, ಅವನನ್ನು ಬಗೆಬಗೆಯಾಗಿ ಸ್ತುತಿಸಿ, ಮಂದರ ಪರ್ವತವನ್ನು ಬೀಳದಂತೆ ನೆಟ್ಟಗೆ ಹಿಡಿದುಕೊಳ್ಳಬೇಕೆಂದೂ, ಸಮುದ್ರಮಂಥನ ಕಾರ್ಯದಲ್ಲಿ ತಮಗೆ ಸಹಾಯ ಮಾಡಬೇಕೆಂದೂ ಬೇಡಿದರು. ಹಾಗೆಯೇ ಆಗಲೆಂದು ಒಪ್ಪಿ ವಿಷ್ಣು ಅವರೊಡನೆ ಹೋದನು. ತನ್ನೆರಡು ಕೈಗಳಿಂದಲೂ ಆ ಪರ್ವತವನ್ನು ಬಲವಾಗಿ ಹಿಡಿದುಕೊಂಡನು. ದೇವತೆಗಳು ಆದಿಶೇಷನ ಬಾಲವನ್ನೂ, ದೈತ್ಯರು ತಲೆಯನ್ನೂ ಹಿಡಿದುಕೊಂಡು ಕಡೆಯುವುದಕ್ಕೆ ತೊಡಗಿದರು. ನೂರಾರು ವರ್ಷಗಳು ಕಳೆದುಹೋದುವು. ಅಮೃತವು ಹುಟ್ಟಲಿಲ್ಲ. ಅವರಿಗೆ ಬಳಲಿಕೆ ಬಹಳವಾಯಿತು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಅಮೃತಮಂಥನದಲ್ಲಿ
ಇನ್ನೂರ ನಲವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

## ಅಥ ಪಂಚಾಶದಧಿಕದ್ವಿಶತತಮೋಽಧ್ಯಾಯಃ

|| ಸೂತ ಉವಾಚ ||

ನಾರಾಯಣವಚಃ ಶ್ರುತ್ವಾ ಬಲಿನಸ್ತೇ ಮಹೋದಧೌ ।
ತತ್ಪಯಃ ಸಹಿತಾ ಭೂತ್ವಾ ಚಕ್ರಿರೇ ಭೃಶಮಾಕುಲಂ || ೧ ||

ತತಃ ಶತಸಹಸ್ರಾಂಶುಸಮಾನ ಇವ ಸಾಗರಾತ್ ।
ಪ್ರಸನ್ನಾಭಃ ಸಮುತ್ಪನ್ನಃ ಸೋಮಃ ಶೀತಾಂಶುರುಜ್ಜ್ವಲಃ || ೨ ||

ಶ್ರೀರನಂತರಮುತ್ಪನ್ನಾ ಘೃತಾತ್ಪಾಂಡುರವಾಸಿನೀ ।
ಸುರಾ ದೇವೀ ಸಮುತ್ಪನ್ನಾ ತುರಗಃ ಪಾಂಡುರಸ್ತಥಾ || ೩ ||

ಕೌಸ್ತುಭಶ್ಚ ಮಣಿರ್ದಿವ್ಯಶ್ಚೋತ್ಪನ್ನೋಽಮೃತಸಂಭವಃ ।
ಮರೀಚಿವಿಕಚಃ ಶ್ರೀಮಾನ್ ನಾರಾಯಣಉರೋಗತಃ || ೪ ||

---

೧. ಸೂತಪೌರಾಣಿಕನು ಹೇಳಿದನು.—ನಾರಾಯಣನ ಮಾತನ್ನು ಕೇಳಿ, ಆ ಮಹಾವೀರರೆಲ್ಲ ಒಟ್ಟುಗೂಡಿ ಕ್ಷೀರಸಮುದ್ರವನ್ನು ಅಲ್ಲೋಲ ಕಲ್ಲೋಲ ಮಾಡಿದರು.

೨. ಬಳಿಕ ಪ್ರಸನ್ನವಾದ ಕಾಂತಿಯುಳ್ಳವನಾಗಿ ಬೆಳಬೆಳಗುತ್ತ, ನೂರಾರು ಸೂರ್ಯರಿಗೆ ಸಮಾನವಾದ ತೇಜಸ್ಸಿನಿಂದ ಕೂಡಿ ಚಂದ್ರನು ಕ್ಷೀರಸಾಗರದಲ್ಲಿ ಹುಟ್ಟಿದನು.

೩. ಆ ಮೇಲೆ ಶುಭ್ರವಸ್ತ್ರವನ್ನುಟ್ಟ ಲಕ್ಷ್ಮೀದೇವಿ ಪಾಲ್ಗಡಲಿಂದ ಎದ್ದು ಬಂದಳು. ಅವಳ ಹಿಂದೆ ಸುರಾದೇವಿಯೂ ಉಚ್ಚೈಃಶ್ರವಸ್ಸೆಂಬ ಬಿಳಿಯ ಕುದುರೆಯೂ ಹುಟ್ಟಿದುವು.

೪. ಕೌಸ್ತುಭವೆಂಬ ದಿವ್ಯರತ್ನವು ಆ ಬಳಿಕ ಕ್ಷೀರಸಮುದ್ರದಲ್ಲಿ ಹುಟ್ಟಿತು. ಅದು ಪ್ರಭೆಯ ಕಿರಣಗಳನ್ನು ಸುತ್ತಲೂ ಬೀರುತ್ತ ನಾರಾಯಣನ ವಕ್ಷಃಸ್ಥಲವನ್ನು ಸೇರಿತು. ಅರಳಿದ ಹೂಗೊಂಚಲುಗಳಿಂದ ತುಂಬಿದ ಪಾರಿಜಾತವೃಕ್ಷವು ಅನಂತರ ಉತ್ಪನ್ನವಾಯಿತು.

ಪಾರಿಜಾತಶ್ಚ ವಿಕಚಕುಸುಮಸ್ತಬಕಾಂಚಿತಃ ।
ಅನಂತರಮಪಶ್ಯಂಸ್ತೇ ಧೂಮಮಂಬರಸಂನಿಭಂ ॥೫॥

ಆಪೂರಿತದಿಶಾಭಾಗಂ ದುಃಸಹಂ ಸರ್ವದೇಹಿನಾಂ ।
ತಮಾಘ್ರಾಯ ಸುರಾಃ ಸರ್ವೇ ಮೂರ್ಛಿತಾಃ ಪರಿಕಂಪಿತಾಃ ॥೬॥

ಉಪಾವಿಶನ್ನಬ್ಧಿತಟೇ ಶಿರಃ ಸಂಗೃಹ್ಯ ಪಾಣಿನಾ ।
ತತಃ ಕ್ರಮೇಣ ದುರ್ವಾರಃ ಸೋಽನಲಃ ಪ್ರತ್ಯದೃಶ್ಯತ ॥೭॥

ಜ್ವಾಲಾಮಾಲಾಕುಲಾಕಾರಃ ಸಮಂತಾದ್ಭೀಷಣೋಽರ್ಚಿಷಾ ।
ತೇನಾಗ್ನಿನಾ ಪರಿಕ್ಷಿಪ್ತಾಃ ಪ್ರಾಯಶಸ್ತು ಸುರಾಸುರಾಃ ॥೮॥

ದಗ್ಧಾಶ್ಚಾಪ್ಯರ್ಧದಗ್ಧಾಶ್ಚ ಬಭ್ರಮುಃ ಸಕಲಾ ದಿಶಃ ।
ಪ್ರಧಾನಾ ದೇವದೈತ್ಯಾಶ್ಚ ಭೀಷಿತಾಸ್ತೇನ ವಹ್ನಿನಾ ॥೯॥

---

೫. ತರುವಾಯ ಧೂಮರಾಶಿಯು ಆಕಾಶದಂತೆ ಎಲ್ಲದಿಕ್ಕುಗಳನ್ನೂ ಆವರಿಸಿಕೊಂಡು ಎದ್ದುದನ್ನು ಅವರು ಕಂಡರು. ಅದನ್ನು ತಡೆಯುವುದು ಅಲ್ಲಿದ್ದ ಪ್ರಾಣಿಗಳಿಗೆಲ್ಲ ಕಷ್ಟವಾಯಿತು.

೬. ಅದರ ವಾಸನೆಯನ್ನು ಕುಡಿದು ದೇವತೆಗಳು ನಡುನಡುಗಿ ಮೂರ್ಛೆ ಹೋದರು. ತಲೆಯ ಮೇಲೆ ಕೈಯಿಟ್ಟುಕೊಂಡು ಅವರು ಸಮುದ್ರತೀರದಲ್ಲಿ ಕುಳಿತರು.

೭. ಕ್ರಮಕ್ರಮವಾಗಿ ಅತಿಭಯಂಕರವಾದ ಬೆಂಕಿ ಕಾಣಿಸಿತು. ಅದನ್ನು ಅಡಗಿಸುವುದು ಅಸಾಧ್ಯವಾಗಿತ್ತು. ಅದು ಜ್ವಾಲೆಯನ್ನು ನಾಲ್ಕುಕಡೆಗೂ ಬೀರುತ್ತ ಧಗಧಗನೆ ಉರಿಯುತ್ತಿತ್ತು.

೮-೯. ಸುರರೂ ಅಸುರರೂ ಆ ಬೆಂಕಿಗೆ ಸಿಕ್ಕಿದರು. ಕೆಲವರು ಪೂರ್ಣವಾಗಿ ಬೆಂದರು. ಮತ್ತೆಕೆಲವರು ಅರೆಬೆಂದರು. ಅವರು ಮುಂದುಗಾಣದೆ ಎತ್ತೆತ್ತಲೂ ಚದುರಿ ಓಡಿದರು. ಸಾಮಾನ್ಯರಾದವರ ಮಾತಂತಿರಲಿ; ಮುಖಂಡರೆನಿಸಿದ ದೇವತೆಗಳು ಮತ್ತು ದೈತ್ಯರು ಕೂಡ ಆ ದಳ್ಳುರಿಗೆ ಹೆದರಿದರು.

ಅನಂತರಂ ಸಮುದ್ಭೂತಾಸ್ತಸ್ಮಾಡ್ಡುಂಡುಭಜಾತಯಃ ।
ಕೃಷ್ಣಸರ್ಪಾ ಮಹಾದಂಷ್ಟ್ರಾ ರಕ್ತಾಶ್ಚ ಪವನಾಶನಾಃ ॥೧೦॥

ಶ್ವೇತಪೀತಾಸ್ತಥಾ ಚಾನ್ಯೇ ತಥಾ ಗೋನಸಜಾತಯಃ ।
ಮಶಕಾ ಭ್ರಮರಾ ದಂಶಾ ಮಕ್ಷಿಕಾಃ ಶಲಭಾಸ್ತಥಾ ॥೧೧॥

ಕರ್ಣಶಲ್ಯಾಃ ಕೃಕಲಾಸಾ ಅನೇಕೇ ಚೈವ ಬಭ್ರಮುಃ ।
ಪ್ರಾಣಿನೋ ದಂಷ್ಟ್ರಿಣೋ ರೌದ್ರಾಸ್ತಥಾ ಹಿ ವಿಷಜಾತಯಃ ॥೧೨॥

ಶಾರ್ಙ್ಗಹಾಲಾಹಲಾಮುಸ್ತವತ್ಸಕಂಗೂರುಭಸ್ಮಕಾಃ ।
ನೀಲಪತ್ರಾದಯಶ್ಚಾನ್ಯೇ ಶತಶೋ ಬಹುಭೇದಿನಃ ।
ಯೇಷಾಂ ಗಂಧೇನ ದಹ್ಯಂತೇ ಗಿರಿಶೃಂಗಾಣ್ಯಪಿ ದ್ರುತಂ ॥೧೩॥

ಅನಂತರಂ ನೀಲರಸೌಘಭೃಂಗ
ಭಿನ್ನಾಂಜನಾಭಂ ವಿಷಮುಂ ಶ್ವಸಂತಂ ।
ಕಾಯೇನ ಲೋಕಾಂತರಪೂರಕೇಣ
ಕೇಶೈಶ್ಚ ವಹ್ನಿಪ್ರತಿಮೈರ್ಜ್ವಲದ್ಭಿಃ ॥೧೪॥

---

೧೦. ಬಳಿಕ ಆ ಸಮುದ್ರದಿಂದ ಡುಂಡುಭವೆಂಬ ಎರಡುತಲೆಯ ಹಾವುಗಳೂ, ಘೋರವಾದ ಕೋರೆಹಲ್ಲುಗಳುಳ್ಳ ಕೃಷ್ಣಸರ್ಪಗಳೂ, ಕೆಂಪುಬಣ್ಣದ ಹಾವುಗಳೂ, ಬಿಳಿಯ ಮತ್ತು ಹಳದಿಯ ಸರ್ಪಗಳೂ, ಗೋನಸವೆಂಬ ಜಾತಿಗೆ ಸೇರಿದ ಇನ್ನೂ ಎಷ್ಟೋ ಭುಜಂಗಗಳೂ ಹುಟ್ಟಿದುವು.

೧೧-೧೩. ಸೊಳ್ಳೆಗಳು, ದುಂಬಿಗಳು, ಕಾಡುನೊಣಗಳು, ಮಿಡಿತೆಗಳು, ಕರ್ಣಶಲ್ಯಗಳು, ಹೆಂಟೆಗೊದ್ದಗಳು ಇನ್ನೂ ಹಲವು ಬಗೆಯ ಜಂತುಗಳು ಹುಟಿ ಓಡಾಡಿದುವು. ಶಾರ್ಙ್ಗ, ಹಾಲಾಹಲ, ಮುಸ್ತ, ವತ್ಸ, ಕಂಗೂರು, ಭಸ್ಮಕ, ನೀಲಪತ್ರ ಮುಂತಾದ ನಾನಾವಿಧವಾದ ಕೋರೆಹಲ್ಲುಗಳೂ ಮತ್ತು ತೀವ್ರವಾದ ವಿಷವೂ ಉಳ್ಳ ನೂರಾರು ಪ್ರಾಣಿಗಳು ಜನಿಸಿದುವು. ಅವುಗಳ ಸೊಗಡಿನಿಂದ ಬೆಟ್ಟದ ಶಿಖರಗಳು ಕೂಡ ಸುಟ್ಟುಹೋಗುತ್ತಿದ್ದುವು.

೧೪-೧೬. ತರುವಾಯ ಪ್ರಾಣಿಗಳ ಭಯವೇ ಆಕೃತಿಯನ್ನು ತಳೆದು ಬಂದಿದೆಯೋ ಎನ್ನುವಂತೆ, ಘೋರರೂಪದಿಂದ ಸಮುದ್ರಮಧ್ಯದಲ್ಲಿ ನಿಂತಿದ್ದ ಕಾಲಕೂಟನೆಂಬ ವಿಷರಾಜನನ್ನು ಅವರೆಲ್ಲರೂ ನೋಡಿದರು. ಅವನು ನೀಲರಸದಂತೆ,

ಸುವರ್ಣಮುಕ್ತಾಫಲಭೂಷಿತಾಂಗಂ
ಕಿರೀಟಿನಂ ಪಿ ತದುಕೂಲಜುಷ್ಟಂ ।
ನೀಲೋತ್ಪಲಾಭಂ ಕುಸುಮೈಃ ಕೃತಾರ್ಘಂ ।
ಗರ್ಜಂತಮಂಭೋಧರಭೀಮವೇಗಂ ॥೧೫॥

ಅದ್ರಾಕ್ಷುರಂಭೋನಿಧಿಮಧ್ಯಸಂಸ್ಥಂ
ಸವಿಗ್ರಹಂ ದೇಹಿಭಯಾಶ್ರಯಂ ತಂ ।
ವಿಲೋಕ್ಯ ತಂ ಭೀಷಣಮುಗ್ರನೇತ್ರಂ
ಭೂತಾಶ್ಚ ವಿತ್ರೇಸುರಥಾಪಿ ಸರ್ವೇ ॥೧೬॥

ಕೇಚಿದ್ವಿಲೋಕ್ಯೈವ ಗತಾ ಹ್ಯಭಾವಂ
ನಿಃಸಂಜ್ಞತಾಂ ಚಾಪ್ಯಪರೇ ಪ್ರಪನ್ನಾಃ ।
ವೇಮುರ್ಮುಖೇಭ್ಯೋಽಪಿ ಚ ಫೇನಮನ್ಯೇ
ಕೇಚಿತ್ತ್ವವಾಪ್ತಾ ವಿಷಮಾಮವಸ್ಥಾಂ ॥೧೭॥

---

ಮುಂಬಿಯಂತೆ, ಆಗತಾನೆ ಬಗೆದು ಎತ್ತಿದ ಕಾಡಿಗೆಯಂತೆ ಕಪ್ಪಗಿದ್ದು ಉಗ್ರವಾಗಿ ಉಸಿರುಬಿಡುತ್ತಿದ್ದನು. ಅವನ ದೇಹವು ಸ್ವರ್ಗಾದಿ ಲೋಕಗಳನ್ನೆಲ್ಲ ವ್ಯಾಪಿಸುವಷ್ಟು ದೊಡ್ಡದಾಗಿತ್ತು. ಅವನ ಕೂದಲು ಉರಿಯುವ ಬೆಂಕಿಯಂತೆ ಕಾಣುತ್ತಿತ್ತು. ಅವನು ಚಿನ್ನದ ಒಡವೆಗಳನ್ನೂ ಮುತ್ತಿನ ಹಾರಗಳನ್ನೂ ಧರಿಸಿದ್ದನು. ಕಿರೀಟವನ್ನು ಹಾಕಿಕೊಂಡು ಪೀತಾಂಬರವನ್ನು ಹೊದೆದಿದ್ದನು. ಅವನ ದೇಹಕಾಂತಿ ಕನ್ನೈದಿಲೆಯನ್ನು ಹೋಲುತ್ತಿತ್ತು ಅವನು ಪುಷ್ಪಗಳಿಂದ ಅಲಂಕೃತನಾಗಿ, ಸಮುದ್ರದಂತೆ ಭಯಂಕರವಾಗಿ ಅಬ್ಬರಿಸುತ್ತಿದ್ದನು. ಕ್ರೂರವಾದ ಕಣ್ಣೂ ಉಗ್ರವಾದ ಆಕಾರವೂ ಉಳ್ಳ ಆತನನ್ನು ನೋಡಿ ಅಲ್ಲಿದ್ದ ದೇವಾಸುರರೂ ಉಳಿದ ಪ್ರಾಣಿಗಳೂ ಹೆದರಿದುವು.

೧೭. ಆ ವಿಷವನ್ನು ಕಂಡ ಮಾತ್ರದಿಂದಲೇ ಕೆಲವರು ಮೃತರಾದರು. ಇನ್ನು ಕೆಲವರು ಮೂರ್ಛೆಹೋದರು. ಉಳಿದವರು ಬಾಯಿಯಿಂದ ನೊರೆಯನ್ನು ಕಾರಿದರು. ಮಿಕ್ಕವರ ಪಾಡಂತೂ ವಿಷಮಾವಸ್ಥೆಯನ್ನು ಮುಟ್ಟಿತು.

ಶ್ವಾಸೇನ ತಸ್ಯ ನಿರ್ದಗ್ಧಾಸ್ತತೋ ವಿಷ್ಣ್ವಿಂದ್ರದಾನವಾಃ ।
ದಗ್ಧಾಂಗಾರನಿಭಾ ಜಾತಾ ಯೇ ಭೂತಾ ದಿವ್ಯರೂಪಿಣಃ ।
ತತಸ್ತು ಸಂಭ್ರಮಾದ್ವಿಷ್ಣುಸ್ತಮುವಾಚ ಸುರಾತ್ಮಕಂ ॥೧೮॥

॥ ಭಗವಾನುವಾಚ ॥

ಕೋ ಭವಾನಂತಕಪ್ರಖ್ಯಃ ಕಿಮಿಚ್ಛಸಿ ಕುತೋಽಪಿ ಚ ।
ಕಿಂ ಕೃತ್ವಾ ತೇ ಪ್ರಿಯಂ ಜಾಯೇದೇವಮಾಚಕ್ಷ್ವ ಮೇಽಖಿಲಂ ॥೧೯॥

ತಚ್ಛ್ರುತ್ವಾ ತಸ್ಯ ವಚಃ ಶ್ರುತ್ವಾ ವಿಷ್ಣೋಃ ಕಾಲಾಗ್ನಿಸಂನಿಭಃ ।
ಉವಾಚ ಕಾಲಕೂಟಸ್ತು ಭಿನ್ನದುಂದುಭಿನಿಸ್ವನಃ ॥೨೦॥

॥ ಕಾಲಕೂಟ ಉವಾಚ ॥

ಅಹಂ ಹಿ ಕಾಲಕೂಟಾಖ್ಯೋ ವಿಷ್ಣೋಽಂಬುಧಿಸಮುದ್ಭವಃ ।
ಯದಾ ತೀವ್ರತರಾಮರ್ಷೈಃ ಪರಸ್ಪರವಧೈಷಿಭಿಃ ॥೨೧॥

---

೧೮. ಇಂದ್ರ, ವಿಷ್ಣು ಮತ್ತು ದಾನವರಾಜನಾದ ಬಲಿ ಇವರಿಗೆಲ್ಲ ಅವನ ಬಿಸಿಯುಸಿರಿನ ಬೇಗೆ ತಟ್ಟಿತು. ಮನೋಹರವಾದ ಸುಂದರಾಕೃತಿಯ ದೇವತೆಗಳು ಹಲವರು ಕರಿಗೊಳ್ಳಿಯ ಬಣ್ಣವನ್ನು ತಾಳಿದರು. ಬಳಿಕ ಮಹಾವಿಷ್ಣು ಸಡಗರದಿಂದ ಮುಂದೆ ಬಂದು ದೇವತಾಸ್ವರೂಪನಾದ ಆತನಿಗೆ ಇಂತೆಂದನು.

೧೯. ಭಗವಂತನು ಹೇಳಿದನು.—ಯಮರಾಜನಂತಿರುವ ನೀನು ಯಾರು ? ನಿನಗೆ ಬೇಕಾದುದೇನು ? ನೀನು ಎಲ್ಲಿಂದ ಬಂದೆ ? ಏನು ಮಾಡಿದರೆ ನೀನು ತೃಪ್ತನಾಗುವೆ ? ಇದೆಲ್ಲವನ್ನೂ ನನಗೆ ಹೇಳು.

೨೦. ವಿಷ್ಣುವಿನ ಮಾತನ್ನು ಕೇಳಿ, ಪ್ರಳಯಾಗ್ನಿಗೆ ಸಮಾನನಾದ ಆ ಕಾಲಕೂಟನು ಹರಿದ ನಗಾರಿಯ ಸದ್ದನ್ನು ಹೋಲುವ ಧ್ವನಿಯಿಂದ ಉತ್ತರವಿತ್ತನು.

೨೧-೨೩. ಕಾಲಕೂಟನು ಹೇಳಿದನು.—ಕ್ಷೀರಸಮುದ್ರದಲ್ಲಿ ಹುಟ್ಟಿದ ಕಾಲಕೂಟವೆಂಬ ವಿಷ ನಾನು. ದೇವಾಸುರರು ಅತ್ಯಂತ ವಿದ್ವೇಷದಿಂದ ಒಬ್ಬರ

**ಸುರಾಸುರೈರ್ವಿಮಥಿತೋ ದುಗ್ಧಾಂಭೋನಿಧಿರದ್ಭುತಃ ।**
**ಸಂಭೂತೋಽಹಂ ತದಾ ಸರ್ವಾನ್ ಹಂತುಂ ದೇವಾನ್ ಸದಾನವಾನ್ ॥೨೨॥**

**ಸರ್ವಾನಹಂ ಹನಿಷ್ಯಾಮಿ ಕ್ಷಣಮಾತ್ರೇಣ ದೇಹಿನಃ ।**
**ಮಾಂ ವಾ ಗ್ರಸತ ವೈ ಸರ್ವೇ ಯಾತ ವಾ ಗಿರಿಶಾಂತಿಕಂ ॥೨೩॥**

**ಶ್ರುತ್ವೈತದ್ವಚನಂ ತಸ್ಯ ತತೋ ಭೀತಾಃ ಸುರಾಸುರಾಃ ।**
**ಬ್ರಹ್ಮವಿಷ್ಣೂ ಪುರಸ್ಕೃತ್ಯ ಗತಾಸ್ತೇ ಶಂಕರಾಂತಿಕಂ ॥೨೪॥**

**ನಿವೇದಿತಾಸ್ತತೋ ದ್ವಾಃಸ್ಥೈಸ್ತೇ ಗಣೇಶೈಃ ಸುರಾಸುರಾಃ ।**
**ಅನುಜ್ಞಾತಾಃ ಶಿವೇನಾಥ ವಿವಿಶುರ್ಗಿರಿಶಾಂತಿಕಂ ॥೨೫॥**

**ಮಂದರಸ್ಯ ಗುಹಾಂ ಹೈಮೀಂ ಮುಕ್ತಾಮಣಿವಿಭೂಷಿತಾಂ ।**
**ಸುಸ್ವಚ್ಛಮಣಿಸೋಪಾನಾಂ ವೈಡೂರ್ಯಸ್ತಂಭಮಂಡಿತಾಂ ॥೨೬॥**

---

ನ್ನೊಬ್ಬರು ಕೊಲ್ಲಬೇಕೆಂದು ಆಲೋಚಿಸಿ, ಪಾಲ್ಗಡಲನ್ನು ಕಡೆದರು. ಅವರೆಲ್ಲರನ್ನೂ ಸಂಹರಿಸಬೇಕೆಂದು ನಾನು ಹುಟ್ಟಿಬಂದೆನು. ಕ್ಷಣಮಾತ್ರದಲ್ಲಿ ಪ್ರಾಣಿಗಳೆಲ್ಲವನ್ನೂ ನಾನು ಕೊಲ್ಲುವೆನು. ಇಲ್ಲವೇ ನೀವೆಲ್ಲರೂ ಸೇರಿ ನನ್ನನ್ನಾದರೂ ನುಂಗಿಬಿಡಿ. ಅದೂ ಸಾಧ್ಯವಿಲ್ಲದಿದ್ದರೆ ಪರಮೇಶ್ವರನ ಬಳಿಗೆ ಹೋಗಿ.

೨೪. ಆತನ ಮಾತನ್ನು ಕೇಳಿ ದೇವತೆಗಳೂ ದೈತ್ಯರೂ ಹೆದರಿದರು. ಬ್ರಹ್ಮನನ್ನೂ ವಿಷ್ಣುವನ್ನೂ ಮುಂದೆ ಬಿಟ್ಟುಕೊಂಡು ಅವರು ಶಂಕರನ ಬಳಿಗೆ ಹೋದರು.

೨೫. ದ್ವಾರಪಾಲಕರಾದ ಗಣಾಧಿಪತಿಗಳು ಸುರಾಸುರರ ಆಗಮನವನ್ನು ಪರಮೇಶ್ವರನಿಗೆ ತಿಳಿಸಿದರು. ಅವನ ಅನುಜ್ಞೆಯಾದ ಬಳಿಕ ಅವರು ಅವನ ಬಳಿಗೆ ಹೋದರು.

೨೬. ಅತಿ ನಿರ್ಮಲವಾದ ರತ್ನದ ಮೆಟ್ಟಿಲುಗಳಿಂದಲೂ, ವೈಡೂರ್ಯದ ಕಂಬಗಳಿಂದಲೂ, ಮುತ್ತುರತ್ನಗಳ ಅಲಂಕಾರದಿಂದಲೂ ಕೂಡಿದ ಸುವರ್ಣಮಯವಾದ ಮಂದರಗಿರಿಯ ಗುಹೆಯನ್ನು ಬ್ರಹ್ಮಾದಿಗಳು ಪ್ರವೇಶಿಸಿದರು.

ತತ್ರ ದೇವಾಸುರೈಃ ಸರ್ವೈರ್ಜಾನುಭಿರ್ಧರಣಿಂ ಗತೈಃ ।
ಬ್ರಹ್ಮಾಣಮಗ್ರತಃ ಕೃತ್ವಾ ಇದಂ ಸ್ತೋತ್ರಮುದಾಹೃತಂ ॥೨೭॥

॥ ದೇವದಾನವಾ ಊಚುಃ ॥

ನಮಸ್ತುಭ್ಯಂ ವಿರೂಪಾಕ್ಷ ನಮಸ್ತೇ ದಿವ್ಯಚಕ್ಷುಷೇ ।
ನಮಃ ಪಿನಾಕಹಸ್ತಾಯ ವಜ್ರಹಸ್ತಾಯ ಧನ್ವಿನೇ ॥೨೮॥

ನಮಸ್ತ್ರಿಶೂಲಹಸ್ತಾಯ ದಂಡಹಸ್ತಾಯ ಧೂರ್ಜಟೇ ।
ನಮಸ್ತ್ರೈಲೋಕ್ಯನಾಥಾಯ ಭೂತಗ್ರಾಮಶರೀರಿಣೇ ॥೨೯॥

ನಮಃ ಸುರಾರಿಹಂತ್ರೇ ಚ ಸೋಮಾಗ್ನ್ಯರ್ಕಾಗ್ರ್ಯಚಕ್ಷುಷೇ ।
ಬ್ರಹ್ಮಣೇ ಚೈವ ರುದ್ರಾಯ ನಮಸ್ತೇ ವಿಷ್ಣುರೂಪಿಣೇ ॥೩೦॥

---

೨೭. ದೇವಾಸುರರೆಲ್ಲರೂ ಅಲ್ಲಿ ಮಹಾದೇವನಿಗೆ ಮಂಡಿಯೂರಿ ನಮಸ್ಕರಿಸಿ, ಬ್ರಹ್ಮನನ್ನು ಮುಂದೆ ನಿಲ್ಲಿಸಿ ಹೀಗೆ ಸ್ತೋತ್ರಮಾಡಿದರು.

೨೮. ದೇವತೆಗಳೂ ದಾನವರೂ ಹೇಳಿದರು.—ತ್ರಿಲೋಚನಾ, ನಿನಗೆ ನಮಸ್ಕಾರ. ಪಿನಾಕವೆಂಬ ಬಿಲ್ಲನ್ನೂ ವಜ್ರಾಯುಧವನ್ನೂ ಕೈಯಲ್ಲಿ ಧರಿಸಿರುವ ವೀರಾಗ್ರೇಸರನಾದ ನಿನಗೆ ನಮಸ್ಕಾರ.

೨೯. ತ್ರಿಶೂಲಧಾರಿಯೂ ದಂಡಧರನೂ ಆದ ನಿನಗೆ ನಮಸ್ಕಾರ. ಪರಮೇಶ್ವರಾ, ಮೂರುಲೋಕಗಳ ಅಧಿಪತಿಯೂ ಸಕಲಭೂತಗಳ ಆತ್ಮನೂ ಆದ ನಿನಗೆ ನಮಸ್ಕಾರ.

೩೦. ದೇವಾ, ನೀನು ದೇವತೆಗಳ ಶತ್ರುಗಳನ್ನು ಸಂಹರಿಸುವೆ. ಚಂದ್ರ, ಸೂರ್ಯ, ಅಗ್ನಿ ಇವರುಗಳನ್ನು ಕಣ್ಣುಗಳಾಗಿ ಮಾಡಿಕೊಂಡಿರುವೆ. ಬ್ರಹ್ಮ, ವಿಷ್ಣು ಮಹೇಶ್ವರರೆಂಬ ತ್ರಿಮೂರ್ತಿಗಳ ಸ್ವರೂಪನಾಗಿರುವೆ. ಇಂತಹ ನಿನಗೆ ನಮಸ್ಕಾರ.

ಬ್ರಹ್ಮಣೇ ವೇದರೂಪಾಯ ನಮಸ್ತೇ ದೇವರೂಪಿಣೇ।
ಸಾಂಖ್ಯಯೋಗಾಯ ಭೂತಾನಾಂ ನಮಸ್ತೇ ಶಂಭವಾಯ ತೇ ॥೩೧॥

ಮನ್ಮಥಾಂಗವಿನಾಶಾಯ ನಮಃ ಕಾಲಕ್ಷಯಂಕರ।
ರಂಹಸೇ ದೇವದೇವಾಯ ನಮಸ್ತೇ ವಸುರೇತಸೇ ॥೩೨॥

ಏಕವೀರಾಯ ಸರ್ವಾಯ ನಮಃ ಪಿಂಗಕಪರ್ದಿನೇ।
ಉಮಾಭರ್ತ್ರೇ ನಮಸ್ತುಭ್ಯಂ ಯಜ್ಞತ್ರಿಪುರಘಾತಿನೇ ॥೩೩॥

ಶುದ್ಧಬೋಧಪ್ರಬುಧ್ಧಾಯ ಮುಕ್ತಕೈವಲ್ಯರೂಪಿಣೇ।
ಲೋಕತ್ರಯವಿಧಾತ್ರೇ ಚ ವರುಣೇಂದ್ರಾಗ್ನಿರೂಪಿಣೇ ॥೩೪॥

---

೩೧. ತಪೋರೂಪನೂ, ವೇದರೂಪನೂ, ದೇವತಾಸ್ವರೂಪನೂ ಆದ ನಿನಗೆ ನಮಸ್ಕಾರ. ಸಾಂಖ್ಯದರ್ಶನದಿಂದಲೂ ಯೋಗದರ್ಶನದಿಂದಲೂ ಗಮ್ಯನಾದವನು ನೀನೇ. ಸಕಲಜಂತುಗಳಿಗೂ ಕ್ಷೇಮವನ್ನು ಉಂಟುಮಾಡುವವನು ನೀನೇ. ನಿನಗೆ ನಮಸ್ಕಾರ.

೩೨. ಮನ್ಮಥನ ದೇಹವನ್ನು ಭಸ್ಮಮಾಡಿದ ನಿನಗೆ ನಮಸ್ಕಾರ. ಓ ಮೃತುಂಜಯಾ, ವೇಗಶಾಲಿಯೂ, ದೇವದೇವನೂ, ಅಗ್ನಿಸ್ವರೂಪನೂ ಆದ ನಿನಗೆ ನಮಸ್ಕಾರ.

೩೩. ಅಸಮಾನಶೂರನೂ, ಸರ್ವರೂಪನೂ, ಹೊಂಬಣ್ಣದ ಜಟೆಯನ್ನು ಬಿಟ್ಟವನೂ ಆದ ನಿನಗೆ ನಮಸ್ಕಾರ. ಪಾರ್ವತಿಯ ಪತಿಯೂ, ದಕ್ಷಬ್ರಹ್ಮನ ಯಜ್ಞವನ್ನು ಕೆಡಿಸಿದವನೂ, ತ್ರಿಪುರರನ್ನು ದಹಿಸಿದವನೂ ಆದ ನಿನಗೆ ನಮಸ್ಕಾರ.

೩೪. ದಿವ್ಯಜ್ಞಾನವುಳ್ಳವನೂ, ಸರ್ವಜ್ಞನೂ, ಪ್ರಕೃತಿಸಂಭಂಧವಿಲ್ಲದವನೂ, ಮೋಕ್ಷಪ್ರದನೂ, ಲೋಕತ್ರಯದ ಸೃಷ್ಟಿಕರ್ತನೂ, ವರುಣ, ಇಂದ್ರ ಮತ್ತು ಅಗ್ನಿಗಳ ಸ್ವರೂಪನೂ ಆದ ನಿನಗೆ ನಮಸ್ಕಾರ.

ಋಗ್ಯಜುಸ್ಸಾಮವೇದಾಯ ಪುರುಷಾಯೇಶ್ವರಾಯ ಚ ।
ಅಗ್ರ್ಯಾಯ ಚೈವ ಚೋಗ್ರಾಯ ವಿಪ್ರಾಯ ಶ್ರುತಿಚಕ್ಷುಷೇ ॥೩೫॥

ರಜಸೇ ಚೈವ ಸತ್ವಾಯ ತಮಸೇ ತಿಮಿರಾತ್ಮನೇ ।
ಅನಿತ್ಯನಿತ್ಯಭಾವಾಯ ನಮೋ ನಿತ್ಯಚರಾತ್ಮನೇ ॥೩೬॥

ವ್ಯಕ್ತಾಯ ಚೈವಾವ್ಯಕ್ತಾಯ ವ್ಯಕ್ತಾವ್ಯಕ್ತಾಯ ವೈ ನಮಃ ।
ಭಕ್ತಾನಾಮಾರ್ತಿನಾಶಾಯ ಪ್ರಿಯನಾರಾಯಣಾಯ ಚ ॥೩೭॥

ಉಮಾಪ್ರಿಯಾಯ ಶರ್ವಾಯ ನಂದಿವಕ್ತ್ರಾಂಚಿತಾಯ ಚ ।
ಋತುಮನ್ವಂತಕಲ್ಪಾಯ ಪಕ್ಷಮಾಸದಿನಾತ್ಮನೇ ॥೩೮॥

---

೩೫. ಋಗ್ಯಜುಸ್ಸಾಮಗಳೆಂಬ ವೇದಗಳಿಂದ ಪ್ರತಿಪಾದ್ಯನೂ, ಪುರುಷಶಬ್ದ ವಾಚ್ಯನೂ, ಸರ್ವಾಧೀಶ್ವರನೂ, ಉತ್ತಮೋತ್ತಮನೂ, ಉಗ್ರರೂಪನೂ ವಿಪ್ರೋತ್ತಮನೂ, ಶ್ರುತಿಗೋಚರನೂ ಆದ ನಿನಗೆ ನಮಸ್ಕಾರ.

೩೬. ದೇವಾ, ನೀನು ಸತ್ವರಜಸ್ತಮಸ್ಸುಗಳೆಂಬ ಗುಣತ್ರಯ ಸ್ವರೂಪ ನಾಗಿರುವೆ. ತಮೋಗುಣದ ಸ್ವಭಾವವನ್ನು ಧರಿಸಿ ಜಗತ್ತಿನ ಸಂಹಾರಕನಾಗಿರುವೆ. ಸ್ಥೂಲಜಗತ್ತಿನ ರೂಪದಿಂದ ಅನಿತ್ಯನಾಗಿ ಕಾಣುವೆ. ಸ್ವಸ್ವರೂಪದಿಂದ ನಿತ್ಯನಾಗಿ ರುವೆ. ಅಕ್ಷಯವೂ ಶಾಶ್ವತವೂ ಆದ ಗುಣವಿಭವಗಳಿಂದ ಪೂರ್ಣನಾದ ನಿನಗೆ ನಮಸ್ಕಾರ.

೩೭. ಭಕ್ತರಿಗೆ ಗೋಚರನೂ, ಅಭಕ್ತರಿಗೆ ಅಗೋಚರನೂ ಆದ ನಿನಗೆ ನಮಸ್ಕಾರ. ಪೃಥಿವ್ಯಾದಿ ಭೂತಗಳ ರೂಪದಿಂದ ಸದಾ ವ್ಯಕ್ತನೂ, ನಿಜಸ್ವರೂಪ ದಿಂದ ಅವ್ಯಕ್ತನೂ ಆದ ನಿನಗೆ ನಮಸ್ಕಾರ. ಭಕ್ತರ ಕಷ್ಟಗಳನ್ನು ಪರಿಹರಿಸು ವವನೂ ನಾರಾಯಣನಿಗೆ ಪ್ರಿಯನೂ ಆದ ನಿನಗೆ ನಮಸ್ಕಾರ.

೩೮. ಪಾರ್ವತೀರಮಣನೂ, ದುರ್ಜನರನ್ನು ದಂಡಿಸುವವನೂ, ನಂದೀಶ್ವರ ನಿಂದ ಸ್ತುತಿಗೊಳ್ಳುವವನೂ ಆದ ನಿನಗೆ ನಮಸ್ಕಾರ. ಋತು, ಮನ್ವಂತರ, ಕಲ್ಪ, ಪಕ್ಷ, ಮಾಸ, ಮತ್ತು ದಿನಗಳೆಂಬ ಕಾಲಸ್ವರೂಪನಾದ ನಿನಗೆ ನಮಸ್ಕಾರ.

ನಾನಾರೂಪಾಯ ಮುಂಡಾಯ ವರೂಥಪೃಥುದಂಡಿನೇ ।
ನಮಃ ಕಪಾಲಹಸ್ತಾಯ ದಿಗ್ವಾಸಾಯ ಶಿಖಂಡಿನೇ ॥೩೯॥

ಧನ್ವಿನೇ ರಥಿನೇ ಚೈವ ಯತಯೇ ಬ್ರಹ್ಮಚಾರಿಣೇ ।
ಇತ್ಯೇವಮಾದಿಚರಿತ್ರೈಃ ಸ್ತುತ ತುಭ್ಯಂ ನಮೋ ನಮಃ ॥೪೦॥

ಏವಂ ಸುರಾಸುರೈಃ ಸ್ಥಾಣುಃ ಸ್ತುತಸ್ತೋಷಮುಪಾಗತಃ ।
ಉವಾಚ ವಾಕ್ಯಂ ಭೀತಾನಾಂ ಸ್ಮಿತಾನ್ವಿತಶುಭಾಕ್ಷರಂ ॥೪೧॥

॥ ಶ್ರೀ ಶಂಕರ ಉವಾಚ ॥

ಕಿಮರ್ಥಮಾಗತಾ ಬ್ರೂತ ತ್ರಾಸಮ್ಲಾನಮುಖಾಂಬುಜಾಃ ।
ಕಿಂ ವಾಽಭೀಷ್ಟಂ ದದಾಮ್ಯದ್ಯ ಕಾಮಂ ಪ್ರಬ್ರೂತ ಮಾ ಚಿರಂ
ಇತ್ಯುಕ್ತಾಸ್ತೇ ತು ದೇವೇನ ಪ್ರೋಚುಸ್ತಂ ಸಸುರಾಸುರಾಃ ॥೪೨॥

---

೩೯. ವಿಧವಿಧವಾದ ರೂಪಗಳನ್ನು ಎತ್ತಿದವನೂ, ರುಂಡಮಾಲಿಕೆಯನ್ನು ಧರಿಸಿದವನೂ, ಭಕ್ತರನ್ನು ಅಪಾಯದಿಂದ ರಕ್ಷಿಸುವವನೂ, ದುಷ್ಟರನ್ನು ತೀವ್ರವಾಗಿ ದಂಡಿಸುವವನೂ, ಕಪಾಲವನ್ನು ಕೈಯಲ್ಲಿ ಹಿಡಿದವನೂ, ಜಡೆಗಳನ್ನು ಹೊತ್ತವನೂ ದಿಗಂಬರನೂ ಆದ ನಿನಗೆ ನಮಸ್ಕಾರ.

೪೦. ದೈತ್ಯವಿನಾಶಕ್ಕಾಗಿ ಬಿಲ್ಲನ್ನು ಕೈಯಲ್ಲಿ ಹಿಡಿದು ತೇರನ್ನೇರಿ ಕುಳಿತ ನಿನಗೆ ನಮಸ್ಕಾರ. ಸಂನ್ಯಾಸಿಯೂ ಬ್ರಹ್ಮಚಾರಿಯೂ ಆದ ನಿನಗೆ ನಮಸ್ಕಾರ. ಇನ್ನೂ ಎಷ್ಟೋ ಲೆಕ್ಕವಿಲ್ಲದಷ್ಟು ಅದ್ಭುತಚರಿತ್ರಗಳಿಂದ ಕೂಡಿ, ಸರ್ವರಿಂದಲೂ ಸ್ತುತಿಯನ್ನು ಕೈಗೊಳ್ಳುವ ಎಲೈ ಮಹಾದೇವಾ, ನಿನಗೆ ನಮಸ್ಕಾರ ನಮಸ್ಕಾರ.

೪೧. ಹೀಗೆ ದೇವಾಸುರರು ಸ್ತೋತ್ರಮಾಡಲು ಪರಮೇಶ್ವರನು ಸಂತುಷ್ಟನಾದನು. ಅವನು ಮುಗುಳುನಗೆ ನಕ್ಕು ಭೀತರಾದವರಿಗೆ ಕುಶಲವನ್ನು ಬೀರುವ ಶುಭವಚನಗಳನ್ನು ಇಂತು ಹೇಳಿದನು.

೪೨. ಮಹಾದೇವನು ಹೇಳಿದನು.—"ಏಕೆ ಬಂದಿರಿ? ಹೇಳಿ. ಕಮಲದಂತಿರುವ ನಿಮ್ಮ ಮುಖಗಳಲ್ಲಿ ಹೆದರಿಕೆಯೂ ಬಳಲಿಕೆಯೂ ಕಾಣುತ್ತಿವೆ. ನಿಮಗೆ ಯಾವ ಇಷ್ಟಾರ್ಥವನ್ನು ಕರುಣಿಸಲಿ? ನಿಮ್ಮ ಇಷ್ಟವೇನಿದೆಯೋ ಅದನ್ನು ತಿಳಿಸಿ. ತಡಮಾಡಬೇಡಿ" ಎಂದು ಪರಮೇಶ್ವರನು ಹೇಳಲು ದೇವಾಸುರರು ಅವನಿಗೆ ಉತ್ತರವಿತ್ತರು.

**|| ಸುರಾಸುರಾ ಊಚುಃ ||**

**ಅಮೃತಾರ್ಥೇ ಮಹಾದೇವ ಮಥ್ಯಮಾನೇ ಮಹೋದಧೌ |**
**ವಿಷಮುದ್ಭೂತಮುದ್ಭೂತಂ ಲೋಕಸಂಕ್ಷಯಕಾರಕಂ ||೪೩||**

**ಸ ಉವಾಚಾಥ ಸರ್ವೇಷಾಂ ದೇವಾನಾಂ ಭಯಕಾರಕಃ |**
**ಸರ್ವಾನ್ ವೋ ಭಕ್ಷಯಿಷ್ಯಾಮಿ ಅಥವಾ ಮಾ ಪಿಬಂತ್ವಥ ||೪೪||**

**ತಮಶಕ್ತಾ ವಯಂ ಗ್ರಸ್ತುಂ ಸೋಽಸ್ಮಾಞ್ಛಕ್ತೋ ಬಲೋತ್ಕಟಃ |**
**ವಿಷ ನಿಶ್ವಾಸಮಾತ್ರೇಣ ಶತಪರ್ವಸಮದ್ಯುತಿಃ ||೪೫||**

**ವಿಷ್ಣುಃ ಕೃಷ್ಣಃ ಕೃತಸ್ತೇನ ಯಮಶ್ಚ ವಿಷಮಾತ್ರವಾನ್ |**
**ಮೂರ್ಛಿತಾಃ ಪತಿತಾಶ್ಚಾನ್ಯೇ ವಿಪ್ರಣಾಶಂ ಗತಾಃ ಪರೇ ||೪೬||**

---

೪೩. ದೇವತೆಗಳೂ ದೈತ್ಯರೂ ಹೇಳಿದರು.—ಓ ಮಹಾದೇವಾ, ಅಮೃತ ಕ್ಕೋಸ್ಕರವಾಗಿ ನಾವು ಕ್ಷೀರಸಮುದ್ರವನ್ನು ಕಡೆಯುತ್ತಿರುವಾಗ ಅತ್ಯುಗ್ರವಾದ ವಿಷವು ಹುಟ್ಟಿತು. ಅದು ಲೋಕಗಳನ್ನೆಲ್ಲ ನಾಶಗೊಳಿಸುತ್ತಿದೆ.

೪೪. "ನಿಮ್ಮೆಲ್ಲರನ್ನೂ ನಾನು ತಿಂದುಬಿಡುವೆನು; ಇಲ್ಲವೇ ನೀವು ನನ್ನನ್ನು ಕುಡಿಯಿರಿ" ಎಂದು ಆ ಕಾಲಕೂಟನು ಹೇಳಿದನು. ದೇವತೆಗಳಿಗೆ ಅವನನ್ನು ಕಂಡು ಭಯವಾಗುತ್ತಿದೆ.

೪೫. ಅವನನ್ನು ನಾವು ನುಂಗಲಾರೆವು. ಅವನಾದರೋ ನಮ್ಮನ್ನು ಉಸಿರು ಬಿಟ್ಟ ಮಾತ್ರದಿಂದ ಧ್ವಂಸಮಾಡಬಲ್ಲನು. ಅವನು ಮಹಾಬಲಶಾಲಿ. ಅವನ ಮೈ ಬಿದಿರಿನಂತೆ ನೀಲವರ್ಣವಾಗಿದೆ.

೪೬. ಅವನಿಂದ ವಿಷ್ಣುವಿನ ಮೈಬಣ್ಣವು ಕಪ್ಪಾಯಿತು. ಯಮನ ಧೈರ್ಯವು ಕುಗ್ಗಿತು. ಉಳಿದವರು ಮೂರ್ಛೆಹೋಗಿ ಬಿದ್ದರು. ಮತ್ತೆ ಕೆಲವರು ನಾಶವಾದರು.

ಅರ್ಥೋಽನರ್ಥಕ್ರಿಯಾಂ ಯಾತಿ ದುರ್ಭಗಾಣಾಂ ಯಥಾ ವಿಭೋ ।
ದುರ್ಬಲಾನಾಂ ಚ ಸಂಕಲ್ಪೋ ಯಥಾ ಭವತಿ ಚಾಪದಿ ॥೪೭॥

ವಿಷಮೇ ತತ್ಸಮುದ್ಭೂತಂ ತಸ್ಮಾದ್ದ್ವಾಽಮೃತಕಾಂಕ್ಷಯಾ ।
ಅಸ್ಮಾದ್ಭಯಾನ್ಮೋಚಯ ತ್ವಂ ಗತಿಸ್ತ್ವಂ ಚ ಪರಾಯಣಂ ॥೪೮॥

ಭಕ್ತಾನುಕಂಪೀ ಭಾವಜ್ಞೋ ಭುವನಾಧೀಶ್ವರೋ ವಿಭುಃ ।
ಯಜ್ಞಾಗ್ರಭುಕ್ಸರ್ವಹವಿಃ ಸೌಮ್ಯಃ ಸೋಮಃ ಸ್ಮರಾಂತಕೃತ್ ॥೪೯॥

ತ್ವಮೇಕೋ ನೋ ಗತಿರ್ದೇವ ಗೀರ್ವಾಣಗಣಶರ್ಮಕೃತ್ ।
ರಕ್ಷಾಸ್ಮಾನ್ ಭಕ್ಷ ಸಂಕಲ್ಪಾದ್ವಿರೂಪಾಕ್ಷ ವಿಷಜ್ವರಾತ್ ॥೫೦॥

---

೪೭-೪೮. ಅದೃಷ್ಟಹೀನರ ಪ್ರಯತ್ನವು ಹೇಗೆ ಅನರ್ಥದಲ್ಲಿ ಕೊನೆಗಾಣು ವುದೋ, ಸ್ಥಿರಮನಸ್ಸು ಇಲ್ಲದವರ ಸಂಕಲ್ಪವು ಕಷ್ಟ ಬಂದ ಕಾಲದಲ್ಲಿ ಹೇಗೆ ಸಡಿಲವಾಗುವುದೋ ಹಾಗೆ, ಅಮೃತವು ಸಿಕ್ಕುತ್ತದೆಯೆಂದು ನಾವು ಪ್ರಯತ್ನ ಪಟ್ಟರೆ ಈ ವಿಷವು ಹುಟ್ಟಿತು. ಈಗ ಒದಗಿರುವ ಭಯದಿಂದ ನಮ್ಮನ್ನು ಪಾರುಮಾಡು. ದೇವಾ, ನೀನೇ ನಮಗೆ ದೊಡ್ಡದಿಕ್ಕು.

೪೯. ನಿನಗೆ ಭಕ್ತರ ಮೇಲೆ ದಯೆಯಿದೆ. ಅವರ ಭಾವವನ್ನು ನೀನು ಬಲ್ಲೆ. ಲೋಕಗಳಿಗೆ ನೀನು ಅಧೀಶ್ವರನಾಗಿರುವೆ; ಸರ್ವವ್ಯಾಪಕನೆನಿಸಿರುವೆ. ಯಜ್ಞ ಫಲಗಳ ಭೋಕ್ತೃವಾಗಿರುವೆ. ಸಕಲ ಹವಿಸ್ಸುಗಳೂ ನೀನೇ ಆಗಿರುವೆ. ಸೌಮ್ಯ ಸ್ವಭಾವದವನೆಂದೂ, ಪಾರ್ವತೀರಮಣನೆಂದೂ, ಮನ್ಮಥಾಂತಕನೆಂದೂ ಪ್ರಖ್ಯಾತ ನಾಗಿರುವೆ.

೫೦. ದೇವಾ, ನೀನೊಬ್ಬನೇ ನಮಗೆ ಗತಿ. ದೇವತೆಗಳಿಗೆಲ್ಲ ಶಾಂತಿಯನ್ನು ಕೊಡಬಲ್ಲವನು ನೀನೇ. ಆದುದರಿಂದ ಈ ವಿಷವನ್ನು ಪಾನಮಾಡಿ, ನಿನ್ನ ಸಂಕಲ್ಪ ಮಾತ್ರದಿಂದ ನಮ್ಮನ್ನು ಅದರ ತಾಪದಿಂದ ರಕ್ಷಿಸು.

ತಚ್ಛ್ರುತ್ವಾ ಭಗವಾನಾಹ ಭಗನೇತ್ರಾಂತಕೃದ್ಭವಃ ॥೫೧॥

॥ ದೇವದೇವ ಉವಾಚ ॥

ಭಕ್ಷಯಿಷ್ಯಾಮ್ಯಹಂ ಘೋರಂ ಕಾಲಕೂಟಂ ಮಹಾವಿಷಂ ।
ತಥಾನ್ಯದಪಿ ಯತ್ಕೃತ್ಯಂ ಕೃಚ್ಛ್ರಸಾಧ್ಯಂ ಸುರಾಸುರಾಃ ।
ತಚ್ಚಾಪಿ ಸಾಧಯಿಷ್ಯಾಮಿ ತಿಷ್ಠಧ್ವಂ ವಿಗತಜ್ವರಾಃ ॥೫೨॥

ಇತ್ಯುಕ್ತಾ ಹೃಷ್ಟರೋಮಾಣೋ ಬಾಷ್ಪಗದ್ಗದಕಂಠಿನಃ ।
ಆನಂದಾಶ್ರುಪರೀತಾಕ್ಷಾಃ ಸನಾಥಾ ಇವ ಮೇನಿರೇ ।
ಸುರಾ ಬ್ರಹ್ಮಾದಯಃ ಸರ್ವೇ ಸಮಾಶ್ವಸ್ತಾಃ ಸುಮಾನಸಾಃ ॥೫೩॥

ತತೋಽವ್ರಜದ್ದ್ರುತಗತಿನಾ ಕಕುದ್ಮಿನಾ
ಹರೋಽಂಬರೇ ಪವನಗತಿರ್ಜಗತ್ಪತಿಃ ।

---

೫೧. ದಕ್ಷಬ್ರಹ್ಮನು ಮಾಡಿದ ನಿರೀಶ್ವರಯಾಗಕ್ಕೆ ಹೋಗಿದ್ದ ಅಪರಾಧ ಕ್ಕೋಸ್ಕರ ಭಗನ ಕಣ್ಣುಗಳನ್ನು ಕಿತ್ತುಹಾಕಿದ ಪರಮೇಶ್ವರನು ಆ ಮಾತನ್ನು ಕೇಳಿ ಇಂತೆಂದನು.

೫೨. ಮಹಾದೇವನು ಹೇಳಿದನು.—ಎಲೈ ದೇವಾಸುರರೇ, ಅತಿಘೋರ ವಾದ ಕಾಲಕೂಟವೆಂಬ ಮಹಾವಿಷವನ್ನು ನಾನು ಭಕ್ಷಿಸುವೆನು. ಅಷ್ಟೇಅಲ್ಲ ; ಕಷ್ಟಸಾಧ್ಯವಾದ ಮತ್ತಾವ ಕಾರ್ಯವನ್ನಾದರೂ ನಡೆಸಿಕೊಡುವೆನು. ನೀವು ನಿಶ್ಚಿಂತರಾಗಿರಿ.

೫೩. ಪರಮೇಶ್ವರನು ಹೀಗೆ ಹೇಳಲು, ಬ್ರಹ್ಮನೇ ಮೊದಲಾದ ದೇವತೆ ಗಳೆಲ್ಲ ನೆಮ್ಮದಿಗೊಂಡು ಸಂತೋಷಪಟ್ಟರು. ಅವರ ಮೈಮೇಲೆ ರೋಮಾಂಚ ವೆದ್ದಿತು. ಧ್ವನಿಯು ಗದ್ಗದಿತವಾಯಿತು. ಕಣ್ಣುಗಳಲ್ಲಿ ಆನಂದಬಾಷ್ಪವು ಉಕ್ಕಿ ಹರಿಯಿತು. ತಮಗೆ ರಕ್ಷಕನು ಸಿಕ್ಕಿದನಲ್ಲಾ ಎಂದು ಅವರು ಧೈರ್ಯಗೊಂಡರು.

೫೪. ಬಳಿಕ ಜಗತ್ಪತಿಯಾದ ಶಂಕರನು ವೇಗಶಾಲಿಯಾದ ತನ್ನ ನಂದಿಯ ನ್ನೇರಿ, ವಾಯುವೇಗದಿಂದ ಆಕಾಶದಲ್ಲಿ ಹೊರಟನು. ಸುರನಾಯಕರೂ ಅಸುರ

ಪ್ರಧಾವಿತೈರಸುರಸುರೇಂದ್ರನಾಯಕೈಃ
ಸ್ವವಾಹನೈರ್ವಿಚಲಿತಶುಭ್ರಚಾಮರೈಃ
ಪುರಃಸರೈಃ ಸ ತು ಶುಶುಭೇ ಶುಭಾಶ್ರಯೈಃ ।
ಶಿವೋ ವಶೀ ಶಿಖಿಕಪಿಶೋರ್ಧ್ವಜೂಟಕಃ ॥೫೪॥

ಆಸಾದ್ಯ ದುಗ್ಧಸಿಂಧುಂ ತಂ ಕಾಲಕೂಟಂ ವಿಷಂ ಯತಃ ।
ತತೋ ದೇವೋ ಮಹಾದೇವೋ ವಿಲೋಕ್ಯ ವಿಷಮಂ ವಿಷಂ ॥೫೫॥

ಛಾಯಾಸ್ಥಾನಂ ಸಮಾಸ್ಥಾಯ ಸೋಽಪಿಬದ್ವಾಮಪಾಣಿನಾ ।
ಪೀಯಮಾನೇ ವಿಷೇ ತಸ್ಮಿಂಸ್ತತೋ ದೇವಾ ಮಹಾಸುರಾಃ ॥೫೬॥

ಜಗುಶ್ಚ ನನೃತುಶ್ಚಾಪಿ ಸಿಂಹನಾದಾಂಶ್ಚ ಪುಷ್ಕಲಾನ್ ।
ಚಕ್ರುಃ ಶುಕ್ರಮುಖಾದ್ಯಾಶ್ಚ ಹಿರಣ್ಯಾಕ್ಷಾದಯಸ್ತಥಾ ॥೫೭॥

---

ನಾಯಕರೂ ತಮ್ಮತಮ್ಮ ವಾಹನಗಳ ಮೇಲೆ ಕುಳಿತು, ಶುಭ್ರವಾದ ಚಾಮರಗಳು ಚಲಿಸುತ್ತಿರಲು, ಅವನ ಹಿಂದೆ ಓಡುತ್ತ ನಡೆದರು. ಸೌಮ್ಯಸ್ವಭಾವದ ಹಲವರು ನಾಯಕರು ಮುಂದೆ ನಡೆಯುತ್ತಿರಲು, ಹೊಂಬಣ್ಣದ ಜಟಾಭಾರದಿಂದ ಕಂಗೊಳಿಸುತ್ತ ಸರ್ವಸ್ವತಂತ್ರನಾದ ಶಿವನು ಪ್ರಯಾಣಮಾಡುತ್ತಿದ್ದನು.

೫೫. ಬಳಿಕ ಮಹಾದೇವನು ಕ್ಷೀರಸಮುದ್ರಕ್ಕೆ ಹೋಗಿ ಅತ್ಯುಗ್ರರೂಪವುಳ್ಳ ಕಾಲಕೂಟವಿಷವು ಇದ್ದ ಸ್ಥಳವನ್ನು ಸೇರಿ, ಆ ವಿಷದೇವತೆಯ ನೆರಳು ಬಿದ್ದಿದ್ದ ಪ್ರದೇಶವನ್ನು ಮೆಟ್ಟಿನಿಂತು ಎಡಗೈಯಿಂದ ಅದನ್ನು ಕುಡಿದುಬಿಟ್ಟನು.

೫೬-೫೭. ಈಶ್ವರನು ವಿಷವನ್ನು ಕುಡಿಯಲು, ಇಂದ್ರಾದಿ ದೇವತೆಗಳೂ ಹಿರಣ್ಯಾಕ್ಷನೇ ಮೊದಲಾದ ಅಸುರರೂ ಸಂತೋಷದಿಂದ ಹಾಡಿದರು ; ಕುಣಿದರು. ಮನಸ್ಸು ಬಂದಂತೆ ಸಿಂಹನಾದವನ್ನು ಮಾಡಿದರು. ಆ ಮಹಾದೇವನನ್ನು ಸ್ತೋತ್ರ ಮಾಡುತ್ತ ಆನಂದಪರವಶರಾದರು.

**ಸ್ತುವಂತಶ್ಚೈವ ದೇವೇಶಂ ಪ್ರಸನ್ನಾಶ್ಚಾಭವಂಸ್ತದಾ ।**
**ಕಂಠದೇಶಂ ತತಃ ಪ್ರಾಪ್ತೇ ವಿಷೇ ದೇವಮಥಾಬ್ರುವನ್ ॥೫೮॥**

**ವಿರಿಂಚಿಪ್ರಮುಖಾ ದೇವಾ ಬಲಿಪ್ರಮುಖತೋಽಸುರಾಃ ।**
**ಶೋಭತೇ ದೇವ ಕಂಠಸ್ತೇ ಗಾತ್ರೇ ಕುಂದನಿಭಪ್ರಭೇ ॥೫೯॥**

**ಭೃಂಗಮಾಲಾನಿಭಂ ಕಂಠೇಽಪ್ಯತ್ರೈವಾಸ್ತು ವಿಷಂ ತವ ।**
**ಇತ್ಯುಕ್ತಃ ಶಂಕರೋ ದೇವಸ್ತಥಾ ಪ್ರಾಹ ಪುರಾಂತಕೃತ್ ॥೬೦॥**

**ಪೀತೇ ವಿಷೇ ದೇವಗಣಾನ್ ವಿಮುಚ್ಯ**
**ಗತೋ ಹರೋ ಮಂದರಶೈಲಮೇವ ।**
**ತಸ್ಮಿನ್ ಗತೇ ದೇವಗಣಾಃ ಪುನಸ್ತಂ**
**ಮಮಂಥುರಬ್ಧಿಂ ವಿವಿಧಪ್ರಕಾರೈಃ ॥೬೧॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇಽಮೃತಮಂಥನೇ**
**ಕಾಲಕೂಟೋತ್ಪತ್ತಿರ್ನಾಮ ಪಂಚಾಶದಧಿಕದ್ವಿಶತತಮೋಽಧ್ಯಾಯಃ**

---

೫೮-೬೦. ವಿಷವು ಗಂಟಲಿನ ಬಳಿಗೆ ಬಂದಿತು. ಆಗ ಬ್ರಹ್ಮನೇ ಮೊದಲಾದ ದೇವತೆಗಳೂ, ಬಲಿ ಮುಂತಾದ ದೈತ್ಯದಾನವರೂ ಪರಮೇಶ್ವರನಿಗೆ ಹೇಳಿದರು. "ದೇವಾ, ನಿನ್ನ ದೇಹವು ಮೊಲ್ಲೆಯ ಹೂವಿನಂತೆ ಬಿಳಿಯ ಕಾಂತಿಯಿಂದ ಕಂಗೊಳಿಸುತ್ತಿದೆ. ಈ ಶರೀರಕ್ಕೆ ನಿನ್ನ ಕಂಠವು ಬಲು ಅಂದವಾಗಿ ಒಪ್ಪುತ್ತದೆ. ವಿಷವು ಕುತ್ತಿಗೆಯಲ್ಲಿಯೇ ಇರಲಿ. ಅದು ದುಂಬಿಗಳ ಮಾಲೆಯನ್ನು ಹಾಕಿದಂತೆ ಶೋಭಿಸುತ್ತದೆ." ತ್ರಿಪುರ ಸಂಹಾರಕನಾದ ಮಹಾದೇವನು ಆ ಮಾತನ್ನು ಕೇಳಿ "ಹಾಗೆಯೇ ಆಗಲಿ" ಎಂದು ಉತ್ತರವಿತ್ತನು.

೬೧. ವಿಷವನ್ನು ಪಾನಮಾಡಿದ ಬಳಿಕ ಪರಮೇಶ್ವರನು ದೇವತೆಗಳನ್ನು ಬೀಳ್ಕೊಂಡು ಮಂದರಪರ್ವತಕ್ಕೆ ತೆರಳಿದನು. ಆ ತರುವಾಯ ದೇವತೆಗಳು ಕ್ಷೀರಸಮುದ್ರವನ್ನು ನಾನಾ ವಿಧವಾಗಿ ಕಡೆದರು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಕಾಲಕೂಟದ ಉತ್ಪತ್ತಿಯನ್ನು ವರ್ಣಿಸಿದೆ.

ದೇವಾಸುರರು ತಮ್ಮ ಬಲವನ್ನೆಲ್ಲ ಪ್ರಯೋಗಿಸಿ ಪಾಲ್ಗಡಲನ್ನು ಕಡೆಯು ತೊಡಗಿದರು. ಚಂದ್ರ, ಲಕ್ಷ್ಮಿ, ಕೌಸ್ತುಭರತ್ನ, ಪಾರಿಜಾತ ಮುಂತಾದ ಶ್ರೇಷ್ಠ ವಾದ ವಸ್ತುಗಳು ಉತ್ಪನ್ನವಾದುವು. ಇವುಗಳ ಹಿಂದೆಯೇ ನಾನಾಜಾತಿಯ ಸರ್ಪ ಗಳೂ ವಿಷಜಂತುಗಳೂ ಹುಟ್ಟಿದುವು. ಅನಂತರ ಅತ್ಯಂತ ಘೋರವಾದ ಕಾಲಕೂಟ ವೆಂಬ ವಿಷವು ಜನಿಸಿತು. ಅದರ ಜ್ವಾಲೆಯಿಂದ ಎಲ್ಲರೂ ಮೂರ್ಛಿತರಾದರು. ಸಕಲಪ್ರಾಣಿಗಳೂ ಹೆಸರಿಲ್ಲದಂತೆ ಅಳಿದುಹೋಗುವ ಹೊತ್ತು ಬಂದಿತು. ಆಗ ದೇವಾಸುರರು ಮಹಾದೇವನನ್ನು ಬಗೆಬಗೆಯಾಗಿ ಪ್ರಾರ್ಥಿಸಿದರು. ಭಕ್ತವತ್ಸಲನಾದ ಆ ಭಗವಂತನು ವಿಷವನ್ನು ಕುಡಿದು ಎಲ್ಲರಿಗೂ ಒದಗಿದ್ದ ವಿಪತ್ತನ್ನು ಪರಿಹರಿಸಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಅಮೃತಮಂಥನದಲ್ಲಿ
ಕಾಲಕೂಟೋತ್ಪತ್ತಿಯೆಂಬ ಇನ್ನೂರೈವತ್ತನೆಯ ಅಧ್ಯಾಯವು ಮುಗಿದುದು



## ಅಥೈಕಪಂಚಾಶದಧಿಕದ್ವಿಶತತಮೋಽಧ್ಯಾಯಃ

|| ಸೂತ ಉವಾಚ ||

ಮಥ್ಯಮಾನೇ ಪುನಸ್ತಸ್ಮಿಞ್ಜಲಧೌ ಸಮುದೃಶ್ಯತ ।
ಧನ್ವಂತರಿಃ ಸ ಭಗವಾನಾಯುರ್ವೇದಪ್ರಜಾಪತಿಃ || ೧ ||

ಮದಿರಾ ಚಾಽಽಯತಾಕ್ಷೀ ಸಾ ಲೋಕಚಿತ್ತಪ್ರಮಾಥಿನೀ ।
ತತೋಽಮೃತಂ ಚ ಸುರಭಿಃ ಸರ್ವಭೂತಭಯಾಪಹಂ || ೨ ||

ಜಗ್ರಾಹ ಕಮಲಾಂ ವಿಷ್ಣುಃ ಕೌಸ್ತುಭಂ ಚ ಮಹಾಮಣಿಂ ।
ಗಜೇಂದ್ರಂ ಚ ಸಹಸ್ರಾಕ್ಷೋ ಹಯರತ್ನಂ ಚ ಭಾಸ್ಕರಃ || ೩ ||

ಧನ್ವಂತರಿಂ ಚ ಜಗ್ರಾಹ ಲೋಕಾರೋಗ್ಯಪ್ರವರ್ತಕಂ ।
ಛತ್ರಂ ಜಗ್ರಾಹ ವರುಣಃ ಕುಂಡಲೇ ಚ ಶಚೀಪತಿಃ || ೪ ||

---

೧. ಸೂತಪೌರಾಣಿಕನು ಹೇಳಿದನು.—ದೇವಾಸುರರು ಮತ್ತೆ ಸಮುದ್ರವನ್ನು ಕಡೆಯುತ್ತಿರಲು ಆಯುರ್ವೇದಾಚಾರ್ಯನಾದ ಧನ್ವಂತರಿದೇವನು ಎಲ್ಲರಿಗೂ ಗೋಚರಿಸಿದನು.

೨. ಬಳಿಕ ಸಕಲ ಲೋಕಗಳ ಮನಸ್ಸನ್ನೂ ಕಲಕುವ, ವಿಸ್ತಾರವಾದ ಕಣ್ಣುಗಳುಳ್ಳ ಸುರಾದೇವಿ ಜನಿಸಿದಳು. ಆ ಮೇಲೆ ಅಮೃತವೂ, ಎಲ್ಲ ಜಂತುಗಳಿಗೂ ಅಭಯವನ್ನು ಕೊಡುವ ಕಾಮಧೇನುವೂ ಜನಿಸಿದುವು.

೩-೪. ವಿಷ್ಣು ಲಕ್ಷ್ಮಿಯನ್ನೂ ಕೌಸ್ತುಭವೆಂಬ ದಿವ್ಯರತ್ನವನ್ನೂ ತೆಗೆದುಕೊಂಡನು. ಐರಾವತವೆಂಬ ಆನೆ ಇಂದ್ರನಿಗೆ ಸೇರಿತು. ಉತ್ತಮವಾದ ಕುದುರೆಯನ್ನೂ, ಜಗತ್ತಿಗೆ ಆರೋಗ್ಯವನ್ನು ಕೊಡುವ ಧನ್ವಂತರಿಯನ್ನೂ, ಸೂರ್ಯನು ಇಟ್ಟುಕೊಂಡನು. ವರುಣನು ಕೊಡೆಯನ್ನೂ, ಇಂದ್ರನು ಕುಂಡಲಗಳನ್ನೂ ತೆಗೆದುಕೊಂಡರು.

ಪಾರಿಜಾತತರುಂ ವಾಯುರ್ಜಗ್ರಾಹ ಮುದಿತಸ್ತಥಾ ।
ಧನ್ವಂತರಿಸ್ತತೋ ದೇವೋ ವಪುಷ್ಮಾನುದತಿಷ್ಠತ ॥ ೫ ॥

ಶ್ವೇತಂ ಕಮಂಡಲುಂ ಬಿಭ್ರದಮೃತಂ ಯತ್ರ ತಿಷ್ಠತಿ ।
ಏತದತ್ಯದ್ಭುತಂ ದೃಷ್ಟ್ವಾ ದಾನವಾನಾಂ ಸಮುತ್ಥಿತಃ ॥ ೬ ॥

ಅಮೃತಾರ್ಥೇ ಮಹಾನಾದೋ ಮಮೇದಮಿತಿ ಜಲ್ಪತಾಂ ।
ತತೋ ನಾರಾಯಣೋ ಮಾಯಾಮಾಸ್ಥಿತೋ ಮೋಹಿನೀಂ ಪ್ರಭುಃ ॥

ಸ್ತ್ರೀರೂಪಮತುಲಂ ಕೃತ್ವಾ ದಾನವಾನಭಿಸಂಶ್ರಿತಃ ।
ತತಸ್ತದಮೃತಂ ತಸ್ಯೈ ದದುಸ್ತೇ ಮೂಢಚೇತನಾಃ ।
ಸ್ತ್ರಿಯೈ ದಾನವದೈತೇಯಾಃ ಸರ್ವೇ ತದ್ಗತಮಾನಸಾಃ ॥ ೮ ॥

ಅಥಾಸ್ತ್ರಾಣಿ ಚ ಮುಖ್ಯಾನಿ ಮಹಾಪ್ರಹರಣಾನಿ ಚ ।
ಪ್ರಗೃಹ್ಯಾಭ್ಯದ್ರುವರ್ನ್ ದೇವಾನ್ ಸಹಿತಾ ದೈತ್ಯದಾನವಾಃ ॥ ೯ ॥

---

೫. ವಾಯು ಸಂತೋಷದಿಂದ ಪಾರಿಜಾತವೃಕ್ಷವನ್ನು ಇಟ್ಟುಕೊಂಡನು. ತರುವಾಯ ಧನ್ವಂತರಿದೇವನು ಅಮೃತಪೂರ್ಣವಾದ ಬಿಳಿಯ ಕಮಂಡಲುವನ್ನು ಕೈಯಲ್ಲಿ ಹಿಡಿದುಕೊಂಡು, ದಿವ್ಯದೇಹವನ್ನು ಧರಿಸಿ ಬಂದನು.

೬. ಈ ಅತ್ಯಾಶ್ಚರ್ಯವನ್ನು ಕಂಡು ದಾನವರೆಲ್ಲರೂ "ನನಗೆ ಬೇಕು; ತನಗೆ ಬೇಕು" ಎಂದು ಅಮೃತಕ್ಕೋಸ್ಕರವಾಗಿ ಕೂಗಾಡಲಾರಂಭಿಸಿದರು.

೭-೮. ಬಳಿಕ ಸರ್ವಶಕ್ತನಾದ ನಾರಾಯಣನು ಲೋಕಮೋಹಕವಾದ ತನ್ನ ಮಾಯೆಯನ್ನು ಬೀರಿ, ಅತಿಸುಂದರವಾದ ಸ್ತ್ರೀರೂಪವನ್ನು ತಾಳಿ ದಾನವರ ಬಳಿಗೆ ಬಂದನು. ಮೂಢಮನಸ್ಕರಾದ ಅವರು ಅವಳಲ್ಲಿಯೇ ಮನಸ್ಸು ನಾಟಿ ಹೋಗಲು, ಅಮೃತವನ್ನು ಅವಳ ಕೈಯಲ್ಲಿ ಕೊಟ್ಟರು.

೯. ಆಮೇಲೆ ದೈತ್ಯದಾನವರೆಲ್ಲರೂ ಒಟ್ಟುಗೂಡಿ ನಾನಾವಿಧವಾದ ಶಸ್ತ್ರಾಸ್ತ್ರಗಳನ್ನು ಹಿಡಿದು ದೇವತೆಗಳನ್ನು ಓಡಿಸಿಬಿಟ್ಟರು.

ತತಸ್ತದಮೃತಂ ದೇವೋ ವಿಷ್ಣುರಾದಾಯ ವೀರ್ಯವಾನ್ ।
ಜಹಾರ ದಾನವೇಂದ್ರೇಭ್ಯೋ ನರೇಣ ಸಹಿತಃ ಪ್ರಭುಃ ॥೧೦॥

ತತೋ ದೇವಗಣಾಃ ಸರ್ವೇ ಪಪುಸ್ತದಮೃತಂ ತದಾ ।
ವಿಷ್ಣೋಃ ಸಕಾಶಾತ್ಸಂಪ್ರಾಪ್ಯ ಸಂಗ್ರಾಮೇ ತುಮುಲೇ ಸತಿ ॥೧೧॥

ತತಃ ಪಿಬತ್ಸು ತತ್ಕಾಲಂ ದೇವೇಷ್ವಮೃತಮೀಪ್ಸಿತಂ ।
ರಾಹುರ್ವಿಬುಧರೂಪೇಣ ದಾನವೋಽಪ್ಯಪಿಬತ್ತದಾ ॥೧೨॥

ತಸ್ಯ ಕಂಠಮನುಪ್ರಾಪ್ತೇ ದಾನವಸ್ಯಾಮೃತೇ ತದಾ ।
ಆಖ್ಯಾತಂ ಚಂದ್ರಸೂರ್ಯಾಭ್ಯಾಂ ಸುರಾಣಾಂ ಹಿತಕಾಮ್ಯಯಾ ॥೧೩॥

ತತೋ ಭಗವತಾ ತಸ್ಯ ಶಿರಶ್ಛಿನ್ನಮಲಂಕೃತಂ ।
ಚಕ್ರಾಯುಧೇನ ಚಕ್ರೇಣ ಪಿಬತೋಽಮೃತಮೋಜಸಾ ॥೧೪॥

---

೧೦. ಬಳಿಕ ಲೋಕಪೂಜ್ಯನೂ, ಮಹಾಪರಾಕ್ರಮಿಯೂ, ಜಗತ್ಪ್ರಭುವೂ, ಆದ ನಾರಾಯಣನು ನರನ ಸಮೇತನಾಗಿ ಆ ಅಮೃತವನ್ನು ದಾನವೇಂದ್ರರಿಂದ ಅಪಹರಿಸಿಕೊಂಡು ಹೋದನು.

೧೧. ಅನಂತರ ದೇವಾಸುರರಿಗೆ ಘೋರವಾದ ಸಂಗ್ರಾಮ ತೊಡಗಿತು. ದೇವತೆಗಳೆಲ್ಲರೂ ವಿಷ್ಣುವಿನಿಂದ ಅಮೃತವನ್ನು ಪಡೆದು ಪಾನಮಾಡಿದರು.

೧೨. ತಾವು ಹಾರೈಸುತ್ತಿದ್ದ ಅಮೃತವನ್ನು ದೇವತೆಗಳು ಕುಡಿಯುತ್ತಿರುವ ಸಮಯದಲ್ಲಿ ದಾನವನಾದ ರಾಹುವೂ ಕೂಡ ದೇವರೂಪವನ್ನು ಧರಿಸಿ ಬಂದು ಅದನ್ನು ಪಾನಮಾಡಿದನು.

೧೩. ಆ ದೈತ್ಯನ ಗಂಟಲೊಳಕ್ಕೆ ಅಮೃತವು ಹೋಗುವಷ್ಟರಲ್ಲೆ, ಚಂದ್ರ ಸೂರ್ಯರಿಬ್ಬರೂ ದೇವತೆಗಳ ಹಿತಕ್ಕೋಸ್ಕರವಾಗಿ ಆ ಸಂಗತಿಯನ್ನು ವಿಷ್ಣುವಿಗೆ ಸೂಚಿಸಿದರು.

೧೪. ರಾಹು ಹೀಗೆ ಸಾಹಸದಿಂದ ಅಮೃತವನ್ನು ಪಾನಮಾಡುತ್ತಿರಲು ಭಗವಂತನಾದ ಮಹಾವಿಷ್ಣು ತನ್ನ ಚಕ್ರಾಯುಧದಿಂದ ಭೂಷಣಾಲಂಕೃತವಾದ ಅವನ ತಲೆಯನ್ನು ಕತ್ತರಿಸಿದನು.

ತಚ್ಛೈಲಶೃಂಗಪ್ರತಿಮಂ ದಾನವಸ್ಯ ಶಿರೋ ಮಹತ್ ।
ಚಕ್ರೇಣೋತ್ಕೃತ್ತಮಪತಚ್ಚಾಲಯದ್ವಸುಧಾತಲಂ ॥೧೫॥

ತತೋ ವೈರವಿನಿರ್ಬಂಧಃ ಕೃತೋ ರಾಹುಮುಖೇನ ವೈ ।
ಶಾಶ್ವತಶ್ಚಂದ್ರಸೂರ್ಯಾಭ್ಯಾಂ ಪ್ರಸಹ್ಯಾದ್ಯಾಪಿ ಬಾಧತೇ ॥೧೬॥

ವಿಹಾಯ ಭಗವಾಂಶ್ಚಾಪಿ ಸ್ತ್ರೀರೂಪಮತುಲಂ ಹರಿಃ ।
ನಾನಾಪ್ರಹರಣೈರ್ಭೀಮೈರ್ದಾನವಾನ್ ಸಮಕಂಪಯತ್ ।
ಪ್ರಾಸಾಃ ಸುವಿಪುಲಾಸ್ತೀಕ್ಷ್ಣಾಃ ಪತಂತಶ್ಚ ಸಹಸ್ರಶಃ ॥೧೭॥

ತೇಽಸುರಾಶ್ಚಕ್ರನಿರ್ಭಿನ್ನಾ ವಮಂತೋ ರುಧಿರಂ ಬಹು ।
ಅಸಿಶಕ್ತಿಗದಾಭಿನ್ನಾ ನಿಪೇತುರ್ಧರಣೀತಲೇ ॥೧೮॥

ಭಿನ್ನಾನಿ ಪಟ್ಟಿಶೈಶ್ಚಾಪಿ ಶಿರಾಂಸಿ ಯುಧಿ ದಾರುಣೈಃ ।
ತಪ್ತಕಾಂಚನಮಾಲ್ಯಾನಿ ನಿಪೇತುರನಿಶಂ ತದಾ ॥೧೯॥

---

೧೫. ಬೆಟ್ಟದ ಶಿಖರದಂತೆ ದೊಡ್ಡದಾದ ರಾಹುವಿನ ತಲೆಯು ಚಕ್ರದಿಂದ ಕತ್ತರಿಸಿಹೋಗಿ ಕೆಳಕ್ಕೆ ಬೀಳಲು ಭೂಮಿಯು ನಡುಗಿತು.

೧೬. ರಾಹುವಿನ ತಲೆಯು ಬಳಿಕ ಚಂದ್ರಸೂರ್ಯರ ಮೇಲೆ ಸ್ಥಿರವಾದ ದ್ವೇಷವನ್ನಿಟ್ಟಿತು. ಇಂದಿಗೂ ಅದು ಅವರನ್ನು ಬಲಾತ್ಕಾರದಿಂದ ಬಾಧಿಸುತ್ತಿದೆ.

೧೭. ಮಹಾವಿಷ್ಣುವೂ ಸಹ ಸ್ತ್ರೀರೂಪವನ್ನು ಬಿಟ್ಟು ಬಗೆಬಗೆಯ ಆಯುಧಗಳಿಂದ ದಾನವರನ್ನು ನಡುಗಿಸಿದನು. ತೀಕ್ಷ್ಣವಾದ ಪ್ರಾಸಾಯುಧಗಳನ್ನು ಅವರ ಮೇಲೆ ಸಾವಿರಗಟ್ಟಲೆಯಲ್ಲಿ ಪ್ರಯೋಗಿಸಿದನು.

೧೮. ಚಕ್ರ, ಶಕ್ತಿ ಮತ್ತು ಗದೆಗಳಿಂದ ಬಲವಾಗಿ ಪೆಟ್ಟುತಿಂದು ಆ ಅಸುರರು ರಕ್ತವನ್ನು ಕಾರುತ್ತ ನೆಲದಲ್ಲಿ ಉರುಳಿದರು.

೧೯. ಪುಟವಿಟ್ಟ ಚಿನ್ನದ ಸರಗಳಿಂದ ಅಲಂಕೃತವಾದ ಅವರ ತಲೆಗಳು ಯುದ್ಧದಲ್ಲಿ ಉಗ್ರವಾದ ಪಟ್ಟಿಶಾಯುಧಗಳಿಂದ ಕತ್ತರಿಸಲ್ಪಟ್ಟು ಎಡೆಬಿಡದೆ ಬೀಳುತ್ತಿದ್ದುವು.

ರುಧಿರೇಣಾವಲಿಪ್ತಾಂಗಾ ನಿಹತಾಶ್ಚ ಮಹಾಸುರಾಃ ।
ಅದ್ರೀಣಾಮಿವ ಕೂಟಾನಿ ಧಾತುರಕ್ತಾನಿ ಶೇರತೇ ॥೨೦॥

ತತೋ ಹಲಹಲಾಶಬ್ದಃ ಸಂಬಭೂವ ಸಮಂತತಃ ।
ಅನ್ಯೋನ್ಯಂ ಛಿಂದತಾಂ ಶಸ್ತ್ರೈರಾದಿತ್ಯೇ ಲೋಹಿತಾಯತಿ ॥೨೧॥

ಪರಿಘೈಶ್ಚಾಯಸೈಃ ಪಾತ್ಯೈಃ ಸನ್ನಿಕರ್ಷೈಶ್ಚ ಮುಷ್ಟಿಭಿಃ ।
ನಿಘ್ನತಾಂ ಸಮರೇಽನ್ಯೋನ್ಯಂ ಶಬ್ದೋ ದಿವಮಿವಾಸ್ಪೃಶತ್ ॥೨೨॥

ಛಿಂದಿ ಭಿಂದಿ ಪ್ರಧಾವೇತಿ ಪಾತಯಾಭಿಸರೇತಿ ವೈ ।
ವಿಶ್ರೂಯಂತೇ ಮಹಾಘೋರಾಃ ಶಬ್ದಾಸ್ತತ್ರ ಸಮಂತತಃ ॥೨೩॥

ಏವಂ ಸುತುಮುಲೇ ಯುದ್ಧೇ ವರ್ತಮಾನೇ ಮಹಾಭಯೇ ।
ನರನಾರಾಯಣೌ ದೇವೌ ಸಮಾಜಗ್ಮತುರಾಹವಂ ॥೨೪॥

ತತ್ರ ದಿವ್ಯಂ ಧನುರ್ದೃಷ್ಟ್ವಾ ನರಸ್ಯ ಭಗವಾನಪಿ ।
ಚಿಂತಯಾಮಾಸ ವೈ ಚಕ್ರಂ ವಿಷ್ಣುರ್ದಾನವಸೂದನಃ ॥೨೫॥

---

೨೦. ಮಹಾಸುರರು ರಕ್ತವು ಮೇಲೆ ಹರಿಯುತ್ತಿರಲು, ಕಾವಿಯಕಲ್ಲುಗಳಿಂದ ಕೆಂಪೇರಿದ ಬೆಟ್ಟಗಳ ಶಿಖರದಂತೆ ನೆಲದ ಮೇಲೆ ಮಲಗಿದರು.

೨೧. ಶಸ್ತ್ರಗಳಿಂದ ಒಬ್ಬರನ್ನೊಬ್ಬರು ಕತ್ತರಿಸುತ್ತಿರಲು ಎಲ್ಲಕಡೆಯೂ ಕೋಲಾಹಲ ಧ್ವನಿಯೆದ್ದಿತು. ಆ ವೇಳೆಗೆ ಸೂರ್ಯನು ಪಶ್ಚಿಮದಲ್ಲಿ ಕೆಂಪಗೆ ಪ್ರಕಾಶಿಸುತ್ತಿದ್ದನು.

೨೨. ಒಬ್ಬರ ಮೇಲೊಬ್ಬರು ಕಬ್ಬಿಣದ ಪರಿಘಗಳನ್ನು ಎಸೆಯುತ್ತಿದ್ದರು. ಸಮೀಪಕ್ಕೆ ಬಂದಾಗ ಮುಷ್ಟಿಗಳಿಂದ ಹೊಡೆಯುತ್ತಿದ್ದರು. ಯುದ್ಧದಲ್ಲಿ ಅವರು ಮಾಡುತ್ತಿದ್ದ ಸಿಂಹನಾದವು ಗಗನವನ್ನು ಮುಟ್ಟುವಂತಿತ್ತು.

೨೩. ಕತ್ತರಿಸು, ಚುಚ್ಚು, ಓಡು, ಬೀಳಿಸು, ಬೆನ್ನಟ್ಟು ಮುಂತಾದ ಮಹಾಘೋರವಾದ ಶಬ್ದಗಳು ಸುತ್ತಲೂ ಕೇಳಿಬಂದುವು

೨೪. ಹೀಗೆ ಘೋರವಾದ ತುಮುಲಯುದ್ಧವು ನಡೆಯುತ್ತಿರಲು ಪೂಜ್ಯರಾದ ನರನೂ ನಾರಾಯಣನೂ ಕಾಳಗಕ್ಕೆ ಬಂದರು.

೨೫. ನರನು ಅತಿಶ್ರೇಷ್ಠವಾದ ಧನುಸ್ಸನ್ನು ಹಿಡಿದಿದ್ದನು. ದಾನವಾಂತಕನೂ ಲೋಕಪೂಜ್ಯನೂ ಆದ ನಾರಾಯಣನು ತನ್ನ ಚಕ್ರವನ್ನು ನೆನೆಸಿಕೊಂಡನು.

ತತೋಂಬರಾಚ್ಚಿಂತಿತಮಾತ್ರಮಾಗತಂ
ಮಹಾಪ್ರಭಂ ಚಕ್ರಮಮಿತ್ರನಾಶನಂ ।
ವಿಭಾವಸೋಸ್ತುಲ್ಯಮಕುಂಠಮಂಡಲಂ
ಸುದರ್ಶನಂ ಭೀಮಮಸಹ್ಯವಿಕ್ರಮಂ ॥೨೬॥

ತದಾಗತಂ ಜ್ವಲಿತಹುತಾಶನಪ್ರಭಂ
ಭಯಂಕರಂ ಕರಿಕರಬಾಹುರಚ್ಯುತಃ ।
ಮಹಾಪ್ರಭಂ ದನುಕುಲದೈತ್ಯದಾರಣಂ
ತಥೋಜ್ಜ್ವಲಜ್ಜ್ವಲನಸಮಾನವಿಗ್ರಹಂ ॥೨೭॥

ಮುಮೋಚ ವೈ ತದತುಲಮುಗ್ರವೇಗವಾನ್
ಮಹಾಪ್ರಭಂ ರಿಪುನಗರಾವದಾರಣಂ ।
ಸಂವರ್ತಕಜ್ವಲನಸಮಾನವರ್ಚಸಂ
ಪುನಃ ಪುನರ್ನ್ಯಪತತವೇಗವತ್ತದಾ ॥೨೮॥

---

೨೬. ಧ್ಯಾನಮಾಡಿದ ಮಾತ್ರದಿಂದಲೇ ಶತ್ರುನಾಶಕವಾದ ಸುದರ್ಶನ ಚಕ್ರವು ಭಯಂಕರರೂಪದಿಂದ ಆಕಾಶಮಾರ್ಗದಲ್ಲಿ ಬಂದಿತು. ಅದು ಸೂರ್ಯನಂತೆ ಅತಿಮಹತ್ತಾದ ತೇಜೋಮಂಡಲದಿಂದ ಕೂಡಿದ್ದಿತು. ಅದರ ಪರಾಕ್ರಮವನ್ನು ತಡೆಯಲು ಯಾರಿಗೂ ಸಾಧ್ಯವಿರಲಿಲ್ಲ.

೨೭-೨೮. ದೈತ್ಯದಾನವರನ್ನು ಸೀಳಿಹಾಕುವ ಭಯಂಕರವಾದ ಆ ಚಕ್ರವು ಉರಿಯುತ್ತಿರುವ ಬೆಂಕಿಯಂತೆ ತೇಜೋಯುಕ್ತವಾಗಿತ್ತು. ಜ್ವಲಿಸುವ ಅಗ್ನಿಯ ಆಕಾರವನ್ನು ಅದು ತಾಳಿದ್ದಿತು. ಶತ್ರುಗಳ ನಗರಗಳನ್ನು ವಿನಾಶಗೊಳಿಸಬಲ್ಲುದಾಗಿತ್ತು. ಪ್ರಳಯಾಗ್ನಿಯಂತೆ ಅತ್ಯುಗ್ರವಾದ ತೇಜಸ್ಸನ್ನು ಬೀರುತ್ತಿತ್ತು. ಆನೆಯ ಸೊಂಡಲಿನಂತೆ ದೀರ್ಘವಾದ ಬಾಹುಗಳುಳ್ಳ ಮಹಾವೇಗಶಾಲಿಯಾದ ವಿಷ್ಣುವು ಅದನ್ನು ದೈತ್ಯರ ಮೇಲೆ ಪ್ರಯೋಗಿಸಿದನು. ಅದು ಅತಿವೇಗದಿಂದ ಅವರ ಮೇಲೆ ಬಿದ್ದಿತು.

ವ್ಯದಾರಯದ್ದಿತಿತನಯಾರ್ ಸಹಸ್ರಶಃ
ಕರೇರಿತಂ ಪುರುಷವರೇಣ ಸಂಯುಗೇ ।
ದಹತ್ಕ್ವಚಿಜ್ಜ್ವಲನ ಇವಾನಿಲೇರಿತಂ
ಪ್ರಸಹ್ಯ ತಾನಸುರಗಣಾನಕೃಂತತ ॥೨೯॥

ತತ್ಪ್ರೇರಿತಂ ವಿಯತಿ ಮುಹುಃ ಕ್ಷಿತೌ ತದಾ
ಪಪೌ ರಣೇ ರುಧಿರಮಥೋ ಪಿಶಾಚವತ್ ।
ಅಥಾಸುರಾ ಗಿರಿಭಿರದೀನಮಾನಸಾ
ಮುಹುರ್ಮುಹುಃ ಸುರಗಣಮರ್ದಯಂಸ್ತದಾ ॥೩೦॥

ಮಹಾಚಲಾ ವಿಗಲಿತಮೇಘವರ್ಚಸಃ
ಸಹಸ್ರಶೋ ಗಗನಮಭಿಪ್ರಪೇದಿರೇ ।
ಅಥಾಸುರಾ ಭಯಜನನಾಃ ಪ್ರಪೇದಿರೇ
ಸಪಾದಪಾ ಬಹುವಿಧಮೇಘರೂಪಿಣಃ ॥೩೧॥

---

೨೯. ಪುರುಷೋತ್ತಮನ ಕೈಯಿಂದ ಹೊರಟು, ಆ ಚಕ್ರವು ಗಾಳಿಯಿಂದ ಬಲವನ್ನು ಪಡೆದ ಅಗ್ನಿಯಂತೆ ದೈತ್ಯರನ್ನು ಸಾವಿರಗಟ್ಟಲೆಯಲ್ಲಿ ಸೀಳಿತು. ಅಸುರರನ್ನು ಆಕ್ರಮಿಸಿ ಕತ್ತರಿಸಿಹಾಕಿತು.

೩೦. ಆಕಾಶದಲ್ಲೂ ನೆಲದಲ್ಲೂ ಓಡಾಡುತ್ತ ಆ ಚಕ್ರವು ಪಿಶಾಚದಂತೆ ರಣಾಂಗಣದಲ್ಲಿ ರಕ್ತವನ್ನು ಕುಡಿಯಿತು. ಬಳಿಕ ಅಸುರರು ಹೆದರದೆ ಪರ್ವತಗಳಿಂದ ಮೇಲೆ ಮೇಲೆ ದೇವತೆಗಳನ್ನು ಹೊಡೆದರು.

೩೧. ದೊಡ್ಡ ದೊಡ್ಡ ಬೆಟ್ಟಗಳು ಕಳಚಿಬಿದ್ದು ಮೇಘಗಳಂತೆ ಆಕಾಶದಲ್ಲಿ ಅಸಂಖ್ಯಾತವಾಗಿ ಚಲಿಸುತ್ತಿದ್ದುವು. ಆಮೇಲೆ ಅಸುರರು ಮೋಡಗಳಂತೆ ನಾನಾ ವಿಧವಾದ ಆಕಾರವುಳ್ಳವರಾಗಿ, ದೇವತೆಗಳಿಗೆ ಭಯವನ್ನು ಹುಟ್ಟಿಸುತ್ತ ಮರಗಳನ್ನು ಹಿಡಿದು ಯುದ್ಧಾಭಿಮುಖರಾದರು.

ಮಹಾದ್ರಯಃ ಪ್ರವಿಗಲಿತಾಗ್ರಸಾನವಃ
ಪರಸ್ಪರಂ ದ್ರುತಮಭಿಪತ್ಯ ಸಸ್ವರಾಃ ।
ತತೋ ಮಹೀ ಪ್ರಚಲಿತಸಾದ್ರಿಕಾನನಾ
ತದಾದ್ರಿಪಾತಾಭಿಹತಾ ಸಮಂತತಃ ॥೩೨॥

ಪರಸ್ಪರಂ ಭೃಶಮಭಿಗರ್ಜಿತಂ ಮುಹೂ
ರಣಾಜಿರೇ ಭೃಶಮಭಿಸಂಪ್ರವರ್ತಿತೇ ।
ನರಸ್ತತೋ ವರಕನಕಾಗ್ರಭೂಷಣೈ
ರ್ಮಹೇಷುಭಿಃ ಪವನಪಥಂ ಸಮಾಸ್ತೃಣೋತ್ ॥೩೩॥

ವಿದಾರಯನ್ ಗಿರಿಶಿಖರಾಣಿ ಪತ್ರಿಭಿ
ರ್ಮಹಾಭಯೇ ಸುರಗಣವಿಗ್ರಹೇ ತದಾ ।
ತತೋ ಮಹೀಂ ಲವಣಜಲಂ ಚ ಸಾಗರಂ
ಮಹಾಸುರಾಃ ಪ್ರವಿವಿಶುರರ್ದಿತಾಃ ಸುರೈಃ ॥೩೪॥

---

೩೨. ಆ ಮಹಾಪರ್ವತಗಳು ಒಂದಕ್ಕೊಂದು ತಗಲಲು, ಅವುಗಳ ತಪ್ಪಲು ನೆಲವು ಕುಸಿದುಬಿದ್ದು ದೊಡ್ಡ ಸದ್ದಾಗುತ್ತಿತ್ತು. ಅವು ನೆಲದ ಮೇಲೆ ಬಿದ್ದಾಗ ವನಪರ್ವತಸಹಿತವಾಗಿ ಭೂಮಿ ಎಲ್ಲಕಡೆಯೂ ನಡುಗಿತು.

೩೩. ಯುದ್ಧಭೂಮಿಯಲ್ಲೆಲ್ಲ ವಿಶೇಷವಾಗಿ ಸಂಭ್ರಮವೂ ಚಟುವಟಿಕೆಯೂ ತುಂಬಿದುವು. ಒಬ್ಬರನ್ನು ನೋಡಿ ಮತ್ತೊಬ್ಬರು ಅತಿಶಯವಾಗಿ ಸಿಂಹನಾದ ಮಾಡುತ್ತಿದ್ದರು. ಬಳಿಕ ನರನು ಸುವರ್ಣಾಲಂಕೃತಗಳಾದ ದಿವ್ಯಶರಗಳನ್ನು ಪ್ರಯೋಗಿಸಿ ಆಕಾಶವನ್ನೆಲ್ಲ ಮುಚ್ಚಿದನು.

೩೪. ಆ ವೀರನು ತನ್ನ ಬಾಣಗಳಿಂದ ಗಿರಿಶಿಖರಗಳನ್ನು ಸೀಳಿದನು. ದೇವತೆಗಳು ಬಹು ಭಯಂಕರವಾಗಿ ಯುದ್ಧಮಾಡಿದರು. ಆಗ ಅಸುರವೀರರು ದೇವತೆಗಳ ಪ್ರಹಾರವನ್ನು ತಡೆಯಲಾರದೆ ನೆಲವನ್ನೂ, ಲವಣಸಮುದ್ರವನ್ನೂ, ಉಳಿದ ಸಾಗರಗಳನ್ನೂ ಹೊಕ್ಕರು.

ವಿಯದ್ಗತಂ ಜ್ವಲಿತಹುತಾಶನಪ್ರಭಂ
ಸುದರ್ಶನಂ ಪರಿಕುಪಿತಂ ನಿಶಮ್ಯ ಚ ।
ತತಃ ಸುರೈರ್ವಿಜಯಮವಾಪ್ಯ ಮಂದರಃ
ಸ್ವಮೇವ ದೇಶಂ ಗಮಿತಃ ಸುಪೂಜಿತಃ ॥೩೫॥

ವಿತತ್ಯ ಖಂ ದಿವಮಥ ಚೈವ ಸರ್ವಶ
ಸ್ತತೋ ಗತಾಃ ಸಲಿಲಧರಾ ಯಥಾಗತಂ ।
ತತೋಽಮೃತಂ ಸುನಿಹಿತಮೇವ ಚಕ್ರಿರೇ
ಸುರಾಃ ಪರಾಂ ಮುದಮಭಿಗಮ್ಯ ಪುಷ್ಕಲಾಂ ।
ದದುಶ್ಚ ತಂ ನಿಧಿಮಮೃತಸ್ಯ ರಕ್ಷಿತುಂ
ಕಿರೀಟಿನೇ ಬಲಿಭಿರಥಾಮರೈಃ ಸಹ ॥೩೬॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇಽಮೃತಮಂಥನಂ
ನಾಮೈಕಪಂಚಾಶದಧಿಕದ್ವಿಶತತಮೋಽಧ್ಯಾಯಃ

---

೩೫. ಸುದರ್ಶನಚಕ್ರವು ಮಹಾಕೋಪದಿಂದ ಜ್ವಲಿಸುತ್ತಿರುವ ಅಗ್ನಿಯಂತೆ ಬೆಳಗುತ್ತ ಆಕಾಶದಲ್ಲಿ ಹಾರಾಡುತ್ತಿದ್ದುದನ್ನು ಎಲ್ಲರೂ ನೋಡಿದರು. ದೇವತೆಗಳು ಜಯವನ್ನು ಸಂಪಾದಿಸಿ ಮಂದರಪರ್ವತವನ್ನು ಸತ್ಕರಿಸಿ ಅದರೆಡೆಗೆ ಕಳುಹಿಸಿಕೊಟ್ಟರು.

೩೬. ಅಂತರಿಕ್ಷವನ್ನೂ ಸ್ವರ್ಗವನ್ನೂ ಆವರಿಸಿಕೊಂಡು ಮೋಡಗಳು ತಮ್ಮ ತಮ್ಮೆಡೆಗೆ ತೆರಳಿದುವು. ಬಳಿಕ ದೇವತೆಗಳು ಅತ್ಯಂತ ಹರ್ಷಿತರಾಗಿ ಅಮೃತವನ್ನು ಸುರಕ್ಷಿತಗೊಳಿಸಿದರು. ಆ ಅಮೃತನಿಧಿಯನ್ನು ಅರ್ಜುನನ ವಶಕ್ಕೆ ಕೊಟ್ಟು ಬಲಶಾಲಿಗಳಾದ ಅಮರವೀರರೊಡಗೂಡಿ ಅದನ್ನು ರಕ್ಷಿಸಬೇಕೆಂದು ಕೇಳಿಕೊಂಡರು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಅಮೃತದ ಉತ್ಪತ್ತಿಯನ್ನು ಹೇಳಿದೆ.

ದೇವಾಸುರರು ಕ್ಷೀರಸಮುದ್ರವನ್ನು ಕಡೆಯುತ್ತಲೇ ಇದ್ದರು. ಆಯುರ್ವೇದಾಚಾರ್ಯನಾದ ಧನ್ವಂತರಿದೇವನು ಅಮೃತಕಲಶವನ್ನು ಕೈಯಲ್ಲಿ ಹಿಡಿದುಕೊಂಡು ಉದಿಸಿದನು. ಅದನ್ನು ಕಂಡು ದೈತ್ಯರೆಲ್ಲ ನನಗೆ ತನಗೆಂದು ದೊಡ್ಡ ಗದ್ದಲವನ್ನೆಬ್ಬಿಸಿದರು. ಆಗ ಮಹಾವಿಷ್ಣು ಮೋಹಿನೀರೂಪವನ್ನೆತ್ತಿ, ದೈತ್ಯರ ಮನಸ್ಸನ್ನು ಸೂರೆಗೊಂಡು ಅಮೃತವನ್ನು ಅಪಹರಿಸಿದನು.

ದೇವತೆಗಳು ಸಂತುಷ್ಟರಾಗಿ ಅಮೃತವನ್ನು ಪಾನಮಾಡಿದರು. ಅವರಂತೆಯೇ ವೇಷಹಾಕಿಕೊಂಡಿದ್ದ ರಾಹುವಿಗೂ ಅದು ಸಿಕ್ಕಿತು. ಆದರೆ ಈ ಗುಟ್ಟು ವಿಷ್ಣುವಿಗೆ ಚಂದ್ರಸೂರ್ಯರ ಮೂಲಕ ತಿಳಿಯಲು, ಅವನು ತನ್ನ ಚಕ್ರಾಯುಧದಿಂದ ಆ ದೈತ್ಯನ ತಲೆಯನ್ನು ಕತ್ತರಿಸಿದನು. ಅಂದಿನಿಂದ ರಾಹು ಚಂದ್ರ ಸೂರ್ಯರ ಮೇಲೆ ದ್ವೇಷವನ್ನು ಸಾಧಿಸುತ್ತಿರುವನು. ತರುವಾಯ ದೇವತೆಗಳಿಗೂ ಅಸುರರಿಗೂ ಘೋರವಾದ ಯುದ್ಧವಾಯಿತು. ದೈತ್ಯರು ಎಷ್ಟೋ ಹೆಣಗಾಡಿದರು. ಆದರೂ ಪರಾಜಿತರಾದರು. ಮಂದರಪರ್ವತವು ದೇವತೆಗಳಿಂದ ಸತ್ಕಾರವನ್ನು ಪಡೆದು ಸ್ವಸ್ಥಾನವನ್ನು ಸೇರಿತು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಅಮೃತಮಂಥನವೆಂಬ
ಇನ್ನೂರೈವತ್ತೊಂದನೆಯ ಅಧ್ಯಾಯವು ಮುಗಿದುದು

